# ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ ಸಮಿತಿ

ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ
राष्ट्रीय ग्रामीण स्वास्थ्य मिशन
(2005-2012)

ಕರ್ನಾಟಕ ಸರ್ಕಾರ



- ರಾಜ್ಯದಲ್ಲಿ 1500 ಜನಸಂಖ್ಯೆ ಇರುವ ಎಲ್ಲಾ ಗ್ರಾಮಗಳಲ್ಲಿ ಆರೋಗ್ಯ ಮತ್ತು ನೈರ್ಮಲ್ಯ ಸಮಿತಿಗಳನ್ನು ರಚಿಸಲಾಗಿದೆ.
- ಸಮಿತಿಯಲ್ಲಿ ಗ್ರಾಮ ಪಂಚಾಯತಿ ಸದಸ್ಯರು ಅಧ್ಯಕ್ಷರಾಗಿ, ಅಂಗನವಾಡಿ ಕಾರ್ಯಕರ್ತೆಯರು/ಆಶಾ ಕಾರ್ಯಕರ್ತೆಯರು ಸದಸ್ಯ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುವರು.
- ಈ ಸಮಿತಿಯು ಆಯಾ ಗ್ರಾಮದ ಆರೋಗ್ಯ, ಪರಿಸರ ಮತ್ತು ನೈರ್ಮಲ್ಯ ಸಮಸ್ಯೆಗಳನ್ನು ಗುರುತಿಸಿ ಮಾರ್ಗೋಪಾಯ ಕಂಡುಕೊಳ್ಳುವುದು.
  - ✓ ಶಾಲಾ ಮಕ್ಕಳ ಆರೋಗ್ಯ ಮತ್ತು ಶಾಲಾ ಆವರಣದ ನೈರ್ಮಲ್ಯ ಕಾಪಾಡುವುದು.
  - ✓ ಅತಿ ಕಡು ಬಡವರಿಗೆ ತೀವ್ರವಾದ ಅನಾರೋಗ್ಯದ ಸಂದರ್ಭದಲ್ಲಿ ಆಸ್ಪತ್ರೆಗೆ ಕರೆದೊಯ್ಯಲು ಧನ ಸಹಾಯ ಮಾಡುವುದು.
  - ✓ ಪ್ರತಿ ಸಮಿತಿಗೆ ಮೇಲ್ಕಂಡ ಕಾರ್ಯಕ್ರಮಗಳಿಗೆ ವಾರ್ಷಿಕ ರೂ. 10,000/- ಮುಕ್ತನಿಧಿ ಅನುದಾನ ನೀಡಲಾಗುವುದು.
  - ✓ ಜನನ ಮತ್ತು ಮರಣದ ನೋಂದಣಿ ಮಾಡಿಸುವುದು.

(ಹೆಚ್ಚಿನ ವಿವರಗಳಿಗೆ ಹತ್ತಿರದ ಆರೋಗ್ಯ ಕೇಂದ್ರವನ್ನು ಸಂಪರ್ಕಿಸಿ)

**ನೆಮ್ಮದಿಯ ಜೀವನಕ್ಕೆ ಮಗು ಒಂದೇ ಸಾಕು**

ಪ್ರಕಟಣೆ : ಯೋಜನಾ ನಿರ್ದೇಶಕರು (ಆರ್. ಸಿ. ಹೆಚ್.)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು - 560 009

# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಆಚಾರ್ಯ, ಶ್ರೀಹರಿ, ಕಮಲಂ ಅರಸು, ರಾಮಚಂದ್ರ ಕೊಪ್ಪಲು

ಮುಖಚಿತ್ರ : ಸೂರ್ಯಗ್ರಹಣ : ೨೨-೭-೦೯ರಂದು ವಾರಾಣಸಿಯಲ್ಲಿ ಕಂಡಂತೆ

ಚಿತ್ರ ಕೃಪೆ : ಅಂತರ್ಜಾಲದಿಂದ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಅದ್ಭುತ ಅನುಭವ ಮತ್ತು ವಿಸ್ಮಯಗಳು ಏಕಕಾಲಕ್ಕೆ ಆವಿರ್ಭವಿಸುವ ಒಂದು ಅಪೂರ್ವ ಸಂದರ್ಭವೆಂದರೆ ಪೂರ್ಣ ಸೂರ್ಯಗ್ರಹಣದ ವೇಳೆ. ಅದು ಘಟಿಸುತ್ತಿರುವ ಈ ತಿಂಗಳಲ್ಲಿ (ಜುಲೈ ೨೨) 'ಹೊಸತು' ಪತ್ರಿಕೆಯು ಹನ್ನೊಂದನೆಯ ವರ್ಷಕ್ಕೆ ಕಾಲಿರಿಸುತ್ತಿದೆ. ಅದು ಸಂತಸದ ಅನುಭವ ನೀಡುತ್ತದೆ, ಆದರೆ ವಿಸ್ಮಯವನ್ನಲ್ಲ. ಅದರಲ್ಲಿ ವಿಸ್ಮಯವೇನೂ ಇಲ್ಲ. ಏಕೆಂದರೆ ನಮ್ಮ ಇಂದಿನ ಸನ್ನಿವೇಶದಲ್ಲಿ ಅಂತಹದೊಂದು ಪತ್ರಿಕೆಯ ಅಗತ್ಯವಿದೆ. ಆ ಅಗತ್ಯವನ್ನು ಹಲವು ಪತ್ರಿಕೆಗಳು ಪೂರೈಸುತ್ತಿವೆ. ಅವುಗಳಲ್ಲಿ 'ಹೊಸತು' ಸಹ ಒಂದು. ಸಮಾಚಾರವನ್ನು ನೀಡುವುದನ್ನು ಬಿಟ್ಟರೆ ಉಳಿದ ಭಾಗವನ್ನೆಲ್ಲ ಸುಭಾಷಿತಗಳಿಗೆ ಮೀಸಲಿಡುವುದೇ ಪತ್ರಿಕಾಧರ್ಮವೆಂಬ ಕೊಂಕು ಬುದ್ಧಿ ಆವರಿಸುವ ಅಪಾಯವಿರುವ ಸನ್ನಿವೇಶ ನಮ್ಮದು. ಆರ್ಥಿಕ ಮತ್ತು ಸಾಂಸ್ಕೃತಿಕ ಜಗತ್ತು ಕ್ಷೀಣಿಸುತ್ತಿರುವತ್ತ ಗಮನ ಹರಿಸದೆ ಯಥಾಪ್ರಕಾರ ಕ್ರಿಕೆಟ್, ಜಾಕ್ಸನ್, ಜ್ಯೋತಿಷ್ಯ, ರವಿಶಂಕರ ಗುರೂಜಿ, ಹಾಲಿವುಡ್-ಬಾಲಿವುಡ್-ಖಾಲಿವುಡ್, ಅಶ್ಲೀಲತೆ, ಸಂಘಪರಿವಾರದ ತಥಾಕಥಿತ ರಾಷ್ಟ್ರೀಯ ಶೀಲ, ಮುಂತಾದುವುಗಳಲ್ಲಿ ಮಗ್ನರಾದರೆ ಸಾಕು, ಆಗ ನಾಗರಿಕ ಜೀವನ ಉತ್ತುಂಗಕ್ಕೇರುತ್ತದೆ, ಎಂಬ ಭಾವನೆಯನ್ನು ಬಿತ್ತುತ್ತಿರುವ ಮಾಧ್ಯಮದ ಪ್ರಭೇದಗಳು ಬೆಳೆಯುತ್ತಿವೆ. ಇದರ ಪರಿಣಾಮವಾಗಿ ಭಾರತದಲ್ಲಿ ಎರಡು ಭಿನ್ನ ಪ್ರಪಂಚಗಳು ಹುಟ್ಟಿಕೊಂಡಿವೆ: ಒಂದು ಪ್ರಪಂಚದಲ್ಲಿ ಅನೀತಿಯುತ ರಾಜ್ಯನೀತಿ; ಇನ್ನೊಂದರಲ್ಲಿ ಅದರ ಪರಿಣಾಮದಿಂದಾಗಿ ಅಸಹ್ಯ ಉಪಟಳಕ್ಕೆ ಗುರಿಯಾಗಿರುವ ಮಂದಿ. ಕಳೆದ ವರ್ಷ ದೆಹಲಿಯೊಂದರಲ್ಲೇ ಎಂಟು ಸಾವಿರ ಮಕ್ಕಳು ಹಸಿವಿನಿಂದ ಸತ್ತಿದ್ದಾರೆ; ಪತ್ರಿಕೆಗಳಲ್ಲಿ ಆ ಬಗ್ಗೆ ವರದಿಯಿಲ್ಲ, ಯಾವ ನಾಯಕರೂ ಕಣ್ಣೀರು ಸುರಿಸಿದ ವರದಿಯಿಲ್ಲ, ಕಾಶ್ಮೀರದಲ್ಲಿ ಸಾಲದೆಂದು ಈಚಿನ ದಿನಗಳಲ್ಲಿ ದೇಶದ ಮೂಲೆಮೂಲೆಗಳಲ್ಲಿ ಪ್ರಭುತ್ವದ ಅಂಗಸಂಸ್ಥೆಗಳ ಹಿಂಸೆ, ದೌರ್ಜನ್ಯ, ದುರ್ನಡತೆ ಅತಿಯಾಗುತ್ತಿದೆ. ಸಂವಿಧಾನದ ರಕ್ಷಣೆ ಇದೆಯೆಂದು ಹೇಳಲಾಗುವ ನಮ್ಮ ದೇಶದಲ್ಲಿ ಎಲ್ಲೆಂದರಲ್ಲಿ ಜನಸಾಮಾನ್ಯರು ಚೆಂಡಾಡಲ್ಪಡುತ್ತಿದ್ದಾರೆ. ಈ ಕರಾಳ ಮತ್ತು ವಿಷಮ ಪರಿಸ್ಥಿತಿಯನ್ನು ಎದುರಿಸುತ್ತಿರುವ ಪ್ರಪಂಚದವರನ್ನು ಇನ್ನೊಂದು ಪ್ರಪಂಚದವರು ಕಣ್ಣೆತ್ತಿಯೂ ನೋಡುವುದಿಲ್ಲ. ಅವರ ಮೋಜುಗಳು, ಆದ್ಯತೆಗಳು, ಬೇರೆಯೇ ಇವೆ. ಅವುಗಳ ಗುಂಗಿನಲ್ಲಿ, ದಣಿದ ಜನರ ಅಸ್ತಿತ್ವವು ಇವರ ಗಮನಕ್ಕೆ ಬರುವುದಿಲ್ಲ. ಹಾಗೆಂದು, ದಣಿದವರು ಸದಾಕಾಲ ಕತ್ತಲಲ್ಲೇ ಉಳಿಯಲು ತೀರ್ಮಾನಿಸಿದ್ದಾರೆಂದೇನೂ ಇಲ್ಲ, ಸಂಘರ್ಷದ ಕಾವು ಕಡಿಮೆಯಾದಂತೆ ತೋರುತ್ತಿದೆ. ಆದರೆ ಅದು ನೆಲೆ ಕಳೆದುಕೊಂಡಿಲ್ಲ. ಅದರ ಅನಿವಾರ್ಯತೆಯೂ ದಿನದಿಂದ ದಿನಕ್ಕೆ ಹೆಚ್ಚುತ್ತಿದೆ. ಅದಕ್ಕೆ ಸಂಘಟಿತ ಹಾದಿಯು ಅಲಭ್ಯವಾದರೆ ಹೋರಾಟಗಳು ತೀವ್ರಗಾಮಿ ಸ್ವರೂಪ ಪಡೆದುಕೊಳ್ಳುತ್ತವೆ. ತೆರೆದ ಕಣ್ಣು ಮತ್ತು ಮನಸ್ಸು ಯಾವುದೇ ಕಾನೂನು ಕಟ್ಟಳೆಗಳಿಗೂ, ಸಾಮಾಜಿಕ ನಿಯಮಗಳಿಗೂ, ಸಂವಿಧಾನದ ಸಫಲತೆಗೂ ಅತ್ಯಗತ್ಯವಾದ ಸಾಮಗ್ರಿ. ಆ ಸಾಮಗ್ರಿಯನ್ನು ಹೊಸಕಿಹಾಕಿಬಿಡುವ ಪ್ರಯತ್ನಗಳು ವಿಪುಲವಾಗಿ ಬೆಳೆಯುತ್ತಿರುವಾಗ ಅವನ್ನು ಬಹಿರಂಗವಾಗಿ ಎದುರಿಸಬೇಕಾಗುತ್ತದೆ. ಸಮಷ್ಟಿ ಪ್ರಜ್ಞೆಯು ಯಾವ ನಿಟ್ಟಿನಲ್ಲಿರಬೇಕು, ಯಾವ ಸೈದ್ಧಾಂತಿಕ ತಿಳುವಳಿಕೆಯು ಆರೋಗ್ಯಕರವಾದ್ದು, ಎಂತಹ ಭಾಗವಹಿಸುವಿಕೆಯು ಫಲಪ್ರದವಾದುದು, ಯಾವ ನೀತಿಯು ದೇಶದ ಸಮಗ್ರ ಬೆಳವಣಿಗೆಗೆ ಪೂರಕವಾದ್ದು, ಎಂಬಿತ್ಯಾದಿ ಪ್ರಶ್ನೆಗಳು ಪ್ರಸ್ತುತವಾಗುವುದು ಅದರಿಂದಾಗಿ. ಓದುಗರಿಗೆ ಉಪದೇಶ ನೀಡುವುದನ್ನು ನಿಲ್ಲಿಸಿ, ಸ್ವತಃ ಅವರೇ ವಿಶ್ಲೇಷಕರಾಗುವಂತಹ ಅವಕಾಶವನ್ನು ಕಲ್ಪಿಸಿಕೊಳ್ಳಬೇಕಾಗಿದೆ. ಉಪದೇಶ ನೀಡುವ ಮಂದಿ ಸಹಸ್ರ ವರ್ಷಗಳಿಂದ ಅದನ್ನು ಮಾಡಿಕೊಂಡೇ ಬಂದಿದ್ದಾರೆ; ಅದರಿಂದ ಅವರ ಬೊಜ್ಜು ಬೆಳೆಸಿಕೊಂಡಿದ್ದಾರೆ, ಈಗಲೂ ಅದನ್ನೇ ಮುಂದುವರಿಸಲು ಅವರು ತವಕಿಸುತ್ತಾರೆ. ಅವರನ್ನು ವಾಸ್ತವದ, ತರ್ಕದ, ಲೋಕಮತಿಯ ಕತ್ತರಿಗೆ ಸಿಲುಕಿಸುವುದು ಬೌದ್ಧಿಕವಾಗಿ ನಡೆಯಬೇಕಾದ ಕೆಲಸ. ಅದರಿಂದ ಮುಂದಿನ ಹೆಜ್ಜೆಗಳು ಸ್ಪಷ್ಟವಾಗುತ್ತಾ ಹೋಗುತ್ತವೆ. 'ಹೊಸತು'ವಿನಂತಹ ಪತ್ರಿಕೆಗಳ ಪಾತ್ರವಿರುವುದು ಅದರಲ್ಲಿ. ಅದನ್ನು ಯಥೋಚಿತವಾಗಿ ತನ್ನ ಮಿತಿಯಲ್ಲಿ ನಿರ್ವಹಿಸಲು 'ಹೊಸತು' ಯತ್ನಿಸಿದೆ, ಅದರ ಓದುಗರು ಮತ್ತು ಲೇಖಕರು ಕೈಜೋಡಿಸಿದ್ದಾರೆ. ಮುಂದಿನ ಹಾದಿ ಇನ್ನೂ ಹೆಚ್ಚು ದುರ್ಗಮವಾದ್ದು; ಏಕೆಂದರೆ ನಮ್ಮ ಸರ್ಕಾರಗಳು ಜನರಿಂದ ಆಯ್ಕೆಯಾಗಿದ್ದರೂ ಸಂಪೂರ್ಣ ಜನವಿರೋಧಿ ನಿಲುವುಗಳನ್ನು ತಾಳುವುದರಲ್ಲೇ ನಿರತವಾಗಿವೆ. ಒಂದು ಪತ್ರಿಕೆ ಮತ್ತು ಅದರ ಓದುಗ - ಲೇಖಕ ಬಳಗವು ಸ್ವತಂತ್ರವಾಗಿ ಅದನ್ನೆಲ್ಲಾ ಹಿಮ್ಮೆಟ್ಟಿಸುವುದು ಅಶಕ್ಯ;

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

# ಹೊಸತು

ನವಕರ್ನಾಟಕ ಪ್ರಕಾಶನ

ಸಂಪುಟ-೧೧ ಸಂಚಿಕೆ - ೧ ಆಗಸ್ಟ್ ೨೦೦೯

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@dataone.in
hosathu@gmail.com
website : www.navakarnataka.com
http://navakarnataka.blogspot.com
http://hosathu.blogspot.com




## ಕೇಂದ್ರ ಬಜೆಟ್, ೨೦೦೯-೨೦೧೦

ಬಜೆಟ್‌ನಲ್ಲಿ ಅರ್ಥ ಸಚಿವರು ಎಲ್ಲ ಜನವಿಭಾಗಗಳನ್ನು ತೃಪ್ತಿಗೊಳಿಸಲು ಯತ್ನಿಸಿದ್ದಾರೆ. ಮುಂಬರುವ ರಾಜ್ಯ ವಿಧಾನಸಭಾ ಚುನಾವಣೆಗಳ ಛಾಯೆಯನ್ನು ಅವರ ಧೋರಣೆಯಲ್ಲಿ ಕಾಣಬಹುದು. ಒಂದು ರೀತಿಯಲ್ಲಿ ಬಜೆಟ್ ಹಿಂದಿನ ವರ್ಷದ ಚುನಾವಣೆಗಳ ಛಾಯೆಯನ್ನು ಅವರ ಧೋರಣೆಯಲ್ಲಿ ಕಾಣಬಹುದು. ಅರ್ಥ ಸಚಿವರು ನಿತ್ಯಬಳಕೆಯ ವಸ್ತುಗಳ ಬೆಲೆ ಮುಂದುವರಿಕೆಯಾಗಿದ್ದು, ಆರ್ಥಿಕ ಕುಸಿತದ ಸಮಸ್ಯೆಗಳನ್ನು ತೇಲಿಸಲಾಗಿದೆ. ಅರ್ಥ ಸಚಿವರು ನಿತ್ಯಬಳಕೆಯ ವಸ್ತುಗಳ ಬೆಲೆ ಏರಿಕೆಯ ವಿಚಾರವನ್ನು ಪ್ರಸ್ತಾಪಿಸಿಯೇ ಇಲ್ಲ. ಬಜೆಟ್ ಮಂಡನೆಗೆ ಎರಡು ದಿನಗಳ ಹಿಂದೆ ಮಾಡಿದ ಪೆಟ್ರೋಲಿಯಂ ಉತ್ಪನ್ನಗಳ ಬೆಲೆ ಹೆಚ್ಚಳ ಮತ್ತಷ್ಟು ಬೆಲೆ ಏರಿಕೆಗೆ ಎಡೆಮಾಡಿಕೊಡುವುದರಲ್ಲಿ ಸಂಶಯವಿಲ್ಲ. ಸರಕಾರ ನೀಡುತ್ತಿರುವ ಅಂಕಿ ಅಂಶಗಳಿಗೂ ವಸ್ತುಸ್ಥಿತಿಗೂ ಅರ್ಥಾರ್ಥ ಸಂಬಂಧವಿಲ್ಲ. ಇಂದು ಹಣದುಬ್ಬರ ಸೊನ್ನೆಗಿಂತ ಕಡಿಮೆ ಇದೆ ಎನ್ನಲಾಗಿದೆ. ಆದರೂ ಬೆಲೆಗಳು ಗಗನಕ್ಕೇರಿರುವುದು ಒಂದು ವಿಪರ್ಯಾಸವೇ ಸರಿ.

೨೦೦೯-೨೦೧೦ರ ಸಾಲಿನ ಬಜೆಟ್‌ಅನ್ನು ವಿಶ್ಲೇಷಿಸುವಾಗ ಜಾಗತಿಕ ಆರ್ಥಿಕ ಕುಸಿತದ ಪರಿಣಾಮ, ಬೆಲೆ ಏರಿಕೆಯ ಜೊತೆಗೆ ಸಮಗ್ರ ರಾಷ್ಟ್ರೀಯ ಉತ್ಪನ್ನವು (ಜಿಡಿಪಿ) ಶೇ. ೮ರಷ್ಟು ಹೆಚ್ಚಿಲ್ಲ ಎಂಬುದನ್ನು ಗಮನದಲ್ಲಿರಿಸಿಕೊಳ್ಳಬೇಕು. ತೆರಿಗೆ ಸಂಗ್ರಹಣೆಯ ಮೂಲಕ ಸರ್ಕಾರಕ್ಕೆ ಪಾವತಿಯಾಗುವ ಮೊತ್ತ ಶೇ. ೨೫ಕ್ಕೆ ಸೀಮಿತಗೊಂಡಿದೆ. ಸಾಮಾಜಿಕ ಕ್ಷೇತ್ರದ ಖರ್ಚುವೆಚ್ಚಗಳನ್ನು ವ್ಯಯಿಸುವ ದೃಷ್ಟಿಯಲ್ಲಿ ೨೦೦೫ರಿಂದಲೂ ಯು.ಪಿ.ಎ. ಸರ್ಕಾರ ತೆರಿಗೆ ಸಂಗ್ರಹಣೆ ವಿಧಾನಗಳಲ್ಲಿ ಬದಲಾವಣೆಯನ್ನು ಮಾಡುತ್ತಲೇ ಬಂದಿದೆ. ಇನ್ನು ಮುಂದೆ ಹಾಗಾಗುವುದಿಲ್ಲವೆಂದು ವಿತ್ತ ಸಚಿವರು ಹೇಳಿರುವುದರಲ್ಲಿ ಯಾವ ಅರ್ಥವೂ ಇಲ್ಲ. ವಾಸ್ತವಾಂಶವೆಂದರೆ, ಅಭಿವೃದ್ಧಿಯು ಶೇ. ೯ರಿಂದ ಶೇ. ೪.೮ರ ಮಟ್ಟಕ್ಕೆ ಕುಸಿದಿದೆ. ಈ ಬಾರಿ ಅಭಿವೃದ್ಧಿಯು ಹೆಚ್ಚೆಂದರೆ ಶೇ. ೫.೮ರಷ್ಟಾಗಬಹುದಷ್ಟೆ. ಕಳೆದ ವರ್ಷ ಉತ್ಪಾದನೆಯಲ್ಲಿ ತೀವ್ರ ಕುಸಿತ ಕಂಡುಬಂದಿತ್ತು. ಒಟ್ಟಾರೆಯಾಗಿ, ೨೦೦೯-೨೦೧೦ರ ಸಾಲಿನ ಬಜೆಟ್ ಜನಸಾಮಾನ್ಯರನ್ನು ಮರುಳು ಮಾಡುವುದರಲ್ಲಿ ಯಶಸ್ವಿಯಾಗಿದೆ.

ಹಲವು ಕ್ಷೇತ್ರಗಳಲ್ಲಿ ಸಮಾಜ ಕಲ್ಯಾಣಕ್ಕೆ ಮಾಡುವ ವೆಚ್ಚದ ಮೊತ್ತ ಶೇ. ೪೪ರಿಂದ ಶೇ. ೧೪೪ರವರೆಗೆ ಏರಿದೆ. ಆದರೆ ಸರ್ಕಾರ ಈ ಅಧಿಕ ವೆಚ್ಚವನ್ನು ಹೇಗೆ ಭರಿಸುತ್ತದೆ ಎನ್ನುವ ಬಗ್ಗೆ ವಿತ್ತ ಸಚಿವರು ಪ್ರಸ್ತಾಪಿಸಿಲ್ಲ. ಏನೇ ಆದರೂ ಅಭಿವೃದ್ಧಿಯು ಶೇ. ೯ ತಲುಪುವ ಸಂಭವ ಕಡಿಮೆ. ಈ ಕೊರತೆಯನ್ನು ತುಂಬಲು ಸರ್ಕಾರ ೪,೦೦,೯೯೬ ಕೋಟಿ ರೂ.ಗಳ ಬಾಂಡುಗಳನ್ನು ನೀಡಲಿದೆ. ಕಳೆದ ಸಾಲಿನಲ್ಲಿ ೩,೨೬,೫೧೫ ಕೋಟಿ ರೂ.ಗಳನ್ನು ಸಂಗ್ರಹಿಸಲಾಗಿತ್ತು. ಇದರಿಂದಾಗಿ ಆರ್ಥಿಕ ಸ್ಥಗಿತತೆ ಮತ್ತು ಹಣದುಬ್ಬರದಂತಹ ಸಮಸ್ಯೆಗಳು ಹುಟ್ಟಿಕೊಳ್ಳಲಿವೆ. ಇಲ್ಲಿ ವಿಶೇಷವಾಗಿ ಗಮನಿಸಬೇಕಾದ ಅಂಶವೆಂದರೆ, ಬೃಹತ್ ಕಾರ್ಪೊರೇಟ್ ಕಂಪನಿಗಳು ರಾಜಕೀಯ ಪಕ್ಷಗಳಿಗೆ ನೀಡುವ ದೇಣಿಗೆಯ ಮೇಲೆ ವಿಧಿಸುತ್ತಿದ್ದ ತೆರಿಗೆಯನ್ನು ಹಿಂತೆಗೆದುಕೊಳ್ಳಲಾಗಿದೆ. ಇದು ಪಾರದರ್ಶಕತೆಯನ್ನು ಹೆಚ್ಚಿಸುತ್ತದೋ ಅಥವಾ ಆಳುವ ಪಕ್ಷಕ್ಕೆ ಕಾಮಧೇನು ಆಗುತ್ತದೋ ಎಂಬ ಸಂಶಯವಿದೆ. ಜಾಗತಿಕ ಆರ್ಥಿಕ ಮುಗ್ಗಟ್ಟಿನಿಂದಾಗಿ ನಮ್ಮ ದೇಶದ ಮೇಲೆ ಸಂಭವಿಸಿರುವ ದುಷ್ಪರಿಣಾಮಗಳಿಗೆ ನಿರ್ದಿಷ್ಟ ಪರಿಹಾರಗಳನ್ನು ಒದಗಿಸಬಲ್ಲ ಯಾವುದೇ ಪ್ರಸ್ತಾವಗಳು ಬಜೆಟ್‌ನಲ್ಲಿಲ್ಲ. ಕೇವಲ ಅಗ್ಗದ ಪ್ರಚಾರಕ್ಕಾಗಿ ಮಂಡಿಸುವ ಬಜೆಟ್‌ಗಳು ಹೀಗೆ ತಪ್ಪು ದಾರಿ ಹಿಡಿಯುವುದು ಸಾಮಾನ್ಯ ಸಂಗತಿ.

ಸಂಪನ್ಮೂಲಗಳ ಕೊರತೆಯಿಂದಾಗಿ ಆರ್ಥಿಕ ಚೇತರಿಕೆ ಕುಂಟುತ್ತ ಸಾಗಿದೆ. ಜಾಗತಿಕ ಪರಿಸ್ಥಿತಿಯೂ ಆಶಾದಾಯಕವಾಗಿಲ್ಲ. ಬಹುಶಃ ಈ ಹಿನ್ನೆಲೆಯಲ್ಲೇ ದೂರದರ್ಶಿತ್ವವುಳ್ಳ ನೀತಿಗಳು, ಆರ್ಥಿಕ ಚೇತರಿಕೆಗೆ ಅಗತ್ಯವಿರುವ ತುರ್ತುಕ್ರಮಗಳು, ಹಣಕಾಸು ಕೊರತೆಯನ್ನು ತುಂಬುವ ದಿಶೆಯಲ್ಲಿ ಅಗತ್ಯವಿರುವ ನಿರ್ದಿಷ್ಟ ಕ್ರಮಗಳು, ಸಾರ್ವಜನಿಕ ಕ್ಷೇತ್ರಗಳನ್ನು ಇನ್ನೂ ಹೆಚ್ಚು ಶಕ್ತಿಯುತಗೊಳಿಸುವ ವಿಧಾನಗಳು, ಇವುಗಳ ಕುರಿತು ವಿತ್ತ ಸಚಿವರು ಚಕಾರವೆತ್ತಿಲ್ಲ. ಬದಲು, ಬಜೆಟ್ ಮಂಡಿಸಿದ ಎರಡು ಮೂರು ದಿವಸಗಳ ನಂತರ ಮತ್ತೆ ಬ್ಯಾಂಕ್, ವಿಮೆಗಳಂತಹ ಸಾರ್ವಜನಿಕ ಕ್ಷೇತ್ರಗಳಲ್ಲಿ ವಿದೇಶಿ ಬಂಡವಾಳ ಹೂಡಿಕೆಯ ಬಗ್ಗೆ ವಿತ್ತ ಸಚಿವರು ಮಾತನಾಡುತ್ತಿರುವುದು ಸರ್ಕಾರದ ನೈಜ ಅಪಾಯಕಾರಿ ಧೋರಣೆಗಳನ್ನು ಬಿಂಬಿಸುತ್ತದೆ. ಬಜೆಟ್ ಮಂಡಿಸುವಾಗ ಈ ಕ್ಷೇತ್ರಗಳನ್ನು ಸಾರ್ವಜನಿಕ ವಲಯದಲ್ಲೇ ಮುಂದುವರಿಸುವುದು ಸರ್ಕಾರದ ಗುರಿಯಾಗಿದೆ ಎಂದಿದ್ದ ಸಚಿವರು ಈಗ ತದ್ವಿರುದ್ಧವಾಗಿ ಮಾತನಾಡುತ್ತಿದ್ದಾರೆ. ಸಾರ್ವಜನಿಕ ವಲಯದಲ್ಲಿರುವ ಲಾಭದಾಯಕ ಉದ್ದಿಮೆಗಳನ್ನು ಮತ್ತಷ್ಟು ಸಬಲಗೊಳಿಸಿ, ಅವುಗಳಲ್ಲಿನ ಹೆಚ್ಚುವರಿ ಲಾಭದ ಮೊತ್ತವನ್ನು ನಷ್ಟ ಅನುಭವಿಸುತ್ತಿರುವ ಸಾರ್ವಜನಿಕ ಉದ್ದಿಮೆಗಳ ಅಭಿವೃದ್ಧಿಗಾಗಿ ಬಳಸಲು ಸರಕಾರ ಯಾಕೆ ಸಿದ್ಧವಿಲ್ಲ? ಸರ್ಕಾರ ಸುತ್ತಿಬಳಸಿ ಇಂತಹ ಉದ್ದಿಮೆಗಳಿಂದ ಬಂಡವಾಳ ಹಿಂತೆಗೆದುಕೊಳ್ಳುವ ಪ್ರಕ್ರಿಯೆಗೆ ತೆರೆಮರೆಯಲ್ಲಿ ತಯಾರಿ ನಡೆಸುತ್ತಿದೆ ಎಂಬುದು ಸ್ಪಷ್ಟ. ಚಿದಂಬರಂ, ಮನಮೋಹನ್ ಸಿಂಗ್ ಅವರಂತೆಯೇ ಪ್ರಣಬ್ ಮುಖರ್ಜಿಯವರೂ ಇಂತಹ ಕ್ರಮಗಳನ್ನು ತೆಗೆದುಕೊಳ್ಳುವಾಗ ಜನರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಲಿದ್ದೇವೆ ಎಂಬ ಬಣ್ಣ ಬಣ್ಣದ ಮಾತುಗಳನ್ನಾಡುತ್ತಿದ್ದಾರೆ. ಇಲ್ಲಿ, ಜನರೆಂದರೆ ಯಾರು, ಎಂದು ವಿತ್ತ ಸಚಿವರನ್ನು ಕೇಳಬೇಕಿದೆ. ಅವರ ಈ ಮಾತುಗಳಿಗೂ ಕೃತಿಗೂ ಸಂಬಂಧವಿಲ್ಲ ಎನ್ನುವುದು ಅನುಭವದಿಂದ ತಿಳಿದುಬಂದಿರುವ ವಿಷಯ.

ಬಜೆಟ್‌ನಲ್ಲಿ ಸಾಮಾಜಿಕ ಕ್ಷೇತ್ರ ಮತ್ತು ಮೂಲಭೂತ ಸೌಕರ್ಯಗಳಿಗೆ ಒತ್ತು ನೀಡಿದ್ದರೂ ಸಹ ಎಲ್ಲ ಆರ್ಥಿಕ ಕ್ಷೇತ್ರಗಳ ಅಭಿವೃದ್ಧಿಗೆ ಆದ್ಯತೆ ನೀಡದಿರುವುದು ವಿಷಾದನೀಯ. ಅದೇ ವೇಳೆ ಬಜೆಟ್‌ನಲ್ಲಿ ಧನಾತ್ಮಕ ಅಂಶಗಳು ಇಲ್ಲವೆಂದು ಹೇಳಲಾಗದು. ವರಮಾನ ತೆರಿಗೆ ವಿನಾಯಿತಿಯಿಂದಾಗಿ ಕೆಲವು ಜನವಿಭಾಗಗಳು ಸಮಾಧಾನಪಟ್ಟುಕೊಳ್ಳಬಹುದಾಗಿದೆ. ಶಿಕ್ಷಣ ಕ್ಷೇತ್ರಕ್ಕೆ ಆದ್ಯತೆ, ಬಡ ವಿದ್ಯಾರ್ಥಿಗಳಿಗೆ ನೆರವು, ಮಹಿಳಾ ಸಾಕ್ಷರತೆ, ಈ ಯೋಜನೆಗಳು ಸರ್ಕಾರ ಇಟ್ಟ ದಿಟ್ಟ ಹೆಜ್ಜೆಗಳಾಗಿವೆ. ಅವನ್ನು ಕಾರ್ಯಗತಗೊಳಿಸಲು ಸರ್ಕಾರಕ್ಕೆ ಪೂರ್ಣಪ್ರಮಾಣದ ಆಶಯವಿದೆಯೇ ಎಂಬುದು ಪ್ರಶ್ನೆ.

ಪರಿಕರ ಸೌಲಭ್ಯಗಳ ಮೇಲಿನ ತೆರಿಗೆ, ಹೆಚ್ಚುವರಿ ತೆರಿಗೆ ಮತ್ತು ಸರಕು ವ್ಯವಹಾರಗಳ ಕುರಿತು ಸರ್ಕಾರ ಈಗ ತಳೆದಿರುವ ನಿಲುವಿನಿಂದಾಗಿ ಕಾರ್ಪೊರೇಟ್‌ಗಳಿಗೆ ಬಹಳಷ್ಟು ಅನುಕೂಲವಾಗಲಿದೆ. ಬಜೆಟ್ ಬಗ್ಗೆ ವಾಣಿಜ್ಯ ವಲಯದ ಬೃಹತ್ ಕುಳಗಳು ತೋರಿಸುವ ಪ್ರತಿಕ್ರಿಯೆಯೇ ಈ ಮಾತಿಗೆ ಸಾಕ್ಷಿ.

ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳಿಗೆ ೧ ಕೆಜಿಗೆ ೩ರೂ.ನಂತೆ ತಲಾ ೨೫ ಕೆಜಿ ಅಕ್ಕಿಯನ್ನು ವಿತರಿಸಲಾಗುವುದೆಂದು ಘೋಷಿಸಲಾಗಿದ್ದರೂ ಈ ಯೋಜನೆ ಕುರಿತು ಸಾಕಷ್ಟು ವಿವರಗಳಿಲ್ಲ. ಕೆಲವು ರಾಜ್ಯಗಳಲ್ಲಿ ೨ ರೂ.ಗೆ

ಒಂದು ಕೆಜಿ ಅಕ್ಕಿ ನೀಡುತ್ತಿರುವಾಗ ಕೇಂದ್ರ ಸರ್ಕಾರ ಕೆಜಿಗೆ ೩ರೂ.ನಂತೆ ವಿತರಿಸುವ ಯೋಜನೆಯ ಹಿಂದಿರುವ ತರ್ಕವಾದರೂ ಏನು ? ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಗೆ ಈ ಬಾರಿ ಶೇ. ೧೪೪ರಷ್ಟು ಹೆಚ್ಚು ಹಣವನ್ನು ವೆಚ್ಚ ಮಾಡಲಾಗುತ್ತಿದೆ, ಎಂದರೆ ೩೯,೧೦೦ ಕೋಟಿ ರೂ.ಗಳು ಹೆಚ್ಚಲಿದೆ. ಇದು ಸಮರ್ಪಕವಾಗಿ ತಲಪುವಂತೆ ಮಾಡುವುದು ಅಗತ್ಯ. ಭಾರತ ನಿರ್ಮಾಣ ಕಾರ್ಯಕ್ರಮ, ರಾಷ್ಟ್ರೀಯ ಆರೋಗ್ಯ ಯೋಜನೆಗಳಿಗೆ ಆದ್ಯತೆ, ಮಹಿಳಾ ಸ್ವಸಹಾಯ ಗುಂಪುಗಳಿಗೆ ನೆರವು, ಅಸಂಘಟಿತ ವಲಯದ ಕಾರ್ಮಿಕರಿಗೆ ನೀಡಲಿರುವ ಕೆಲವು ಸೌಲಭ್ಯಗಳು ಇವು ನಿಜಕ್ಕೂ ಜನಪರ ಕ್ರಮಗಳೇ ಆಗಿವೆ. ಆದರೆ ಈ ಹಣ ಆ ಜನಸಮುದಾಯಗಳಿಗೆ ತಲುಪಿಸುವುದು ಅಷ್ಟು ಸುಲಭಸಾಧ್ಯವಲ್ಲ, ಮಧ್ಯೆ ನುಂಗಣ್ಣಗಳು ಕಾದುಕೂತಿವೆ.

ಹೆದ್ದಾರಿ ಅಭಿವೃದ್ಧಿ, ಕೃಷಿ ಯೋಜನೆ, ಸಾಮಾಜಿಕ ಅಭಿವೃದ್ಧಿ ಈ ವಿಷಯಗಳ ಕುರಿತು ಬಜೆಟ್‌ನಲ್ಲಿ ಧನಾತ್ಮಕ ಅಂಶಗಳಿವೆ; ಒಳ್ಳೆಯ ಸೂಚನೆಗಳಿವೆ. ರೈತರ ಸಾಲದ ಮೇಲೆ ವಿಧಿಸುವ ಬಡ್ಡಿದರದಲ್ಲಿ ಇಳಿಕೆ, ಕೆಳವರ್ಗದ ಜನವಿಭಾಗಗಳಿಗೆ ವಿಶೇಷ ಯೋಜನೆಗಳನ್ನು ರೂಪಿಸಿರುವುದು ಪ್ರಶಂಸನೀಯ. ಆದರೆ ಇದುವರೆಗಿನ ಅನುಭವದ ಹಿನ್ನೆಲೆಯಲ್ಲಿ ನೋಡಿದಾಗ ಈ ಯೋಜನೆಗಳು ನಿರ್ದೇಶಿತ ಜನವಿಭಾಗಗಳನ್ನು ತಲುಪಲು ಸಾಧ್ಯವೇ ಎಂಬುದು ಸರ್ಕಾರದ ಮುಂದಿರುವ ಸವಾಲು. ಜೊತೆಗೆ, ಸಮಗ್ರ ದೇಶೀಯ ಉತ್ಪನ್ನದಲ್ಲಿ ಎದ್ದುಕಾಣುವ ಶೇ. ೬.೮ರಷ್ಟು ಕೊರತೆ ಬರುವ ದಿನಗಳಲ್ಲಿ ದೊಡ್ಡ ಸಮಸ್ಯೆಯಾಗಲಿದೆ.

ಒಂದು ವಿಷಯದಲ್ಲಂತೂ ನಮಗೆ ಸ್ಪಷ್ಟತೆ ಇರಬೇಕು. ಷೇರು ಮಾರುಕಟ್ಟೆಯ ಏರುಪೇರುಗಳು, ಸೂಚ್ಯಂಕಗಳು ದೇಶದ ಆರ್ಥಿಕ ಪರಿಸ್ಥಿತಿಯನ್ನು ಪ್ರತಿನಿಧಿಸುವುದಿಲ್ಲ. ದಿನನಿತ್ಯದ ಆರ್ಥಿಕ ಆಗುಹೋಗುಗಳಿಗೂ ಷೇರು ಮಾರುಕಟ್ಟೆಯ ವ್ಯವಹಾರಗಳಿಗೂ ಯಾವುದೇ ಸಂಬಂಧವಿಲ್ಲ. ವಾಣಿಜ್ಯ ಕ್ಷೇತ್ರದವರು ಇದನ್ನೇ ದೊಡ್ಡದು ಮಾಡುತ್ತಿರುವುದರ ಬಗ್ಗೆ ಎಚ್ಚರ ಅಗತ್ಯ.

ಮೇಲಾಗಿ ಈ ಬಾರಿ ಇಡೀ ರಾಷ್ಟ್ರದಲ್ಲಿ, ಅದರಲ್ಲೂ ಉತ್ತರ ಭಾರತದಲ್ಲಿ, ಮಳೆಯ ಪ್ರಮಾಣ ಕಡಿಮೆಯಾಗಲಿದೆಯಂತೆ. ಇದರಿಂದಾಗಿ ಹಾಲಿ ಸಮಸ್ಯೆಗಳು ಮತ್ತಷ್ಟು ಉಲ್ಬಣಗೊಳ್ಳಲಿವೆ. ಇಂತಹ ಸಮಸ್ಯೆಗಳನ್ನು ಎದುರಿಸಲು ಸರ್ಕಾರ ತೆಗೆದುಕೊಳ್ಳಲಿರುವ ಕ್ರಮಗಳ ಬಗ್ಗೆ ವಿತ್ತ ಸಚಿವರು ಪ್ರಸ್ತಾಪಿಸಬೇಕಿತ್ತು. ಅಂತೆಯೇ ವಿಶೇಷ ಆರ್ಥಿಕ ವಲಯಗಳ ಸ್ಥಾಪನೆಯ ಪ್ರಶ್ನೆ ದೇಶದೆಲ್ಲೆಡೆ ಭುಗಿಲೇಳುತ್ತಿದೆ. ಈ ಕುರಿತು ಸರ್ಕಾರ ಏಕೆ ಮೌನ ವಹಿಸಿದೆ ? ವಾಣಿಜ್ಯ, ಕೈಗಾರಿಕಾ ಕ್ಷೇತ್ರ, ಅದರಲ್ಲೂ ಮುಖ್ಯವಾಗಿ ಸಣ್ಣ ಕೈಗಾರಿಕೆಗಳು, ತೀವ್ರ ಬಿಕ್ಕಟ್ಟಿನಲ್ಲಿ ಸಿಲುಕಿವೆ. ಈ ಬಿಕ್ಕಟ್ಟಿಗೆ ಪರಿಹಾರವನ್ನಾಗಲಿ, ಉದ್ಯೋಗ ಸೃಷ್ಟಿಯ ಬಗ್ಗೆಯಾಗಲಿ ವಿತ್ತ ಸಚಿವರು ಸರ್ಕಾರದ ನಿಲುವು ಏನು ಎಂಬುದನ್ನು ಸ್ಪಷ್ಟಪಡಿಸಿಲ್ಲ. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯ ಮೂಲಕ ಸ್ವಲ್ಪಮಟ್ಟಿಗೆ ಉದ್ಯೋಗಾವಕಾಶಗಳು ಸೃಷ್ಟಿಯಾಗಲಿವೆ. ಆದರೆ ಮಧ್ಯವರ್ತಿಗಳ ಹಾವಳಿಯನ್ನು ನಿಯಂತ್ರಿಸಲು ಯಾವ ಕ್ರಮಗಳಿವೆ ?

ಚುನಾವಣೆಯ ಸಂದರ್ಭದಲ್ಲಿ ಬಿಜೆಪಿ, ಕಾಂಗ್ರೆಸ್ ಎರಡೂ ಪಕ್ಷಗಳು ಸ್ವಿಸ್ ಬ್ಯಾಂಕುಗಳಲ್ಲಿ ಅಕ್ರಮವಾಗಿ ಇಡಲಾಗಿರುವ ಇಲ್ಲವೆ ಹೂಡಲಾಗಿರುವ ಕಪ್ಪು ಹಣವನ್ನು ನಮ್ಮ ದೇಶಕ್ಕೆ ವಾಪಸ್ ತರುವ ಬಗ್ಗೆ ಇನ್ನಿಲ್ಲದ ಬೊಬ್ಬೆಹಾಕಿದ್ದವು. ಈ ದಿಶೆಯಲ್ಲಿ ಪ್ರಣಬ್ ಮುಖರ್ಜಿಯವರು ದಿವ್ಯಮೌನ ತಾಳಿದ್ದಾರೆ. ಅದರ ಜೊತೆಗೆ, ನಮ್ಮದೇ ದೇಶದಲ್ಲಿ ಸಹಸ್ರ ಸಹಸ್ರ ಕೋಟಿ ರೂ.ಗಳ ಕಪ್ಪು ಹಣ ಚಲಾವಣೆಯಲ್ಲಿದೆ. ದೇಶದ ಆರ್ಥಿಕತೆಗೆ ಸಮಾನಾಂತರವಾಗಿ ಕಾರ್ಯ ನಿರ್ವಹಿಸುತ್ತ ನಮ್ಮ ಇಡೀ ಆರ್ಥಿಕತೆಗೆ ಮಾರಕವಾಗಿದೆ. ಇಂತಹ ಗಹನವಾದ ವಿಷಯದ ಬಗ್ಗೆ ಯುಪಿಎ ಸರ್ಕಾರ ಪ್ರಸ್ತಾಪಿಸಲೂ ಸಿದ್ಧವಿಲ್ಲ.

೨೦೦೯-೧೦ನೇ ಸಾಲಿನ ವಿಮರ್ಶಾ ಬಜೆಟ್‌ನಲ್ಲಿ ಸುಮಾರು ೩,೨೫,೦೦೦ ಕೋಟಿ ರೂ.ಗಳ ಹೆಚ್ಚಿನ ರೆವಿನ್ಯೂ ಕೊರತೆ, ೪೦,೦೦೦ ಕೋಟಿ ರೂ.ಗಳ ವಿತ್ತೀಯ ಕೊರತೆ ಹಾಗೇ ಉಳಿದುಬಿಟ್ಟಿವೆ. ಕಾರ್ಪೊರೇಟ್ ಕಂಪನಿಗಳ ಮೇಲೆ ವಿಧಿಸುವ ಬಡ್ಡಿದರದಲ್ಲಿ ಹೆಚ್ಚಳವಿಲ್ಲ. ಇದಕ್ಕೆ ಕಾರಣವೇನು ? ಸೀಮಾ ಸುಂಕ, ಅಬ್ಕಾರಿ ಸುಂಕಗಳನ್ನು ವಿಧಿಸುವ ನೀತಿನಿಯಮಗಳಲ್ಲಿ ತರಲಾಗಿರುವ ಹಲವು ಬದಲಾವಣೆಗಳು ವಾಣಿಜ್ಯೋದ್ಯಮ ವಲಯಕ್ಕೆ ನೀಡಲಾಗಿರುವ ಅನವಶ್ಯ ಸವಲತ್ತುಗಳಲ್ಲದೆ ಮತ್ತೇನು ? ಎಂದರೆ, ಈ ಕ್ರಮ ಬಜೆಟ್‌ನ ವಿತ್ತೀಯ ಶಿಸ್ತು ಕಾಯಿದೆಗೆ ಸದ್ಯಕ್ಕೆ ಹೇಳಿರುವ ವಿದಾಯವೆಂದು ಪರಿಗಣಿಸೋಣವೆ ?

ಇಲ್ಲಿ ಗಮನಿಸಬೇಕಾದ ಇನ್ನೊಂದು ಪ್ರಮುಖ ಅಂಶವೆಂದರೆ ಪ್ರತಿ ವರ್ಷವೂ ನಡೆಸಲಾಗುವ ಆರ್ಥಿಕ ಸಮೀಕ್ಷೆಯು ವಿಶ್ವ ಬ್ಯಾಂಕ್ ಮತ್ತು ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗಳಿಂದ ಪ್ರೇರಣೆ ಪಡೆಯುತ್ತದೆ. ಅವೆಲ್ಲವೂ ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣ ನೀತಿಗಳಿಗೆ ಸಂಬಂಧಪಟ್ಟ ಅಂಶಗಳೇ ಆಗಿರುತ್ತವೆ. ಆದರೆ ಈ ಬಾರಿಯ ಬಜೆಟ್‌ನಲ್ಲಿ ಆರ್ಥಿಕ ಸಮೀಕ್ಷೆಯಲ್ಲಿ ಪ್ರಸ್ತಾಪಿಸಲಾಗಿರುವ ಅಂಶಗಳನ್ನು ಯುಪಿಎ ತಾತ್ಕಾಲಿಕವಾಗಿ ಬದಿಗಿಟ್ಟಿದೆ. ವಾರ್ಷಿಕ ಸಮೀಕ್ಷೆಗಳು (ಸರ್ಕಾರಗಳು) ಸಾಮಾಜಿಕ ವಲಯಕ್ಕಾಗಿ ವೆಚ್ಚ ಮಾಡುವುದನ್ನು ವಿರೋಧಿಸುತ್ತವೆ. ಆದರೆ ಪ್ರಣಬ್ ಮುಖರ್ಜಿ ಅವರ ಬಜೆಟ್‌ನಲ್ಲಿ ಸಾಮಾಜಿಕ ವಲಯದಲ್ಲಿನ ಯೋಜನೆಗಳಿಗಾಗಿ ಸಾಕಷ್ಟು ಮೊತ್ತವನ್ನು ಮಂಜೂರುಮಾಡಲಾಗಿದೆ. ಸದ್ಯದಲ್ಲೇ ಕೆಲವು ರಾಜ್ಯಗಳಲ್ಲಿ, ಅದರಲ್ಲೂ ಮುಖ್ಯವಾಗಿ ಪಶ್ಚಿಮ ಬಂಗಾಳ ಮತ್ತು ಮಹಾರಾಷ್ಟ್ರದಲ್ಲಿ, ಜರುಗಲಿರುವ ಚುನಾವಣೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಸರ್ಕಾರವು ಈ ಬಾರಿಯ ಬಜೆಟ್‌ಅನ್ನು ಜನತೆಯ ಮುಂದಿಟ್ಟಿದೆ ಎಂಬುದು ಗುಟ್ಟಿನ ವಿಷಯವೇನಲ್ಲ. ಮಮತಾ ಬ್ಯಾನರ್ಜಿಯವರು ಇದೇ ಕಾರಣಗಳ ಹಿನ್ನೆಲೆಯಲ್ಲಿ ತಮ್ಮ ರೈಲ್ವೆ ಬಜೆಟ್‌ಅನ್ನು ಮಂಡಿಸಿ ಪಶ್ಚಿಮ ಬಂಗಾಳದ ಬಹುಕಾಲದ ಬೇಡಿಕೆಗಳಿಗೆ ಓಗೊಟ್ಟಿದ್ದರು. ಪ್ರಣಬ್ ಮುಖರ್ಜಿ ಅವರ ಬಜೆಟ್‌ನಲ್ಲೂ 'ಐಲಾ' ದುರಂತಕ್ಕೆ ಬಲಿಯಾಗಿರುವ ಸಂತ್ರಸ್ತರಿಗೆ, ಅಲ್ಲಿನ ಪರಿಹಾರ ಕಾರ್ಯಕ್ರಮಗಳಿಗೆ ಸಾಕಷ್ಟು ಮೊತ್ತವನ್ನೇ ನೀಡಿದ್ದಾರೆ. ಹೀಗೆ ವಿಶ್ವಬ್ಯಾಂಕ್, ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗಳ ಆಣತಿಯಂತೆ ಸಿದ್ಧಪಡಿಸಲಾಗುವ ವಾರ್ಷಿಕ ಆರ್ಥಿಕ ಸಮೀಕ್ಷೆಯಲ್ಲಿನ ನೀತಿಗಳನ್ನು ಬದಿಗಿರಿಸಿ ಮುಂದೆಯೂ ಇದೇ ಬಗೆಯ ಬಜೆಟ್‌ಗಳನ್ನು ಯುಪಿಎ ಸರ್ಕಾರ ಜನ ಮುಂದಿಡುತ್ತದೆ ಎಂದು ನಿರೀಕ್ಷಿಸುವುದು ಪ್ರಮಾದವಾದೀತು. ಇವು ಬಂಡವಾಳಶಾಹಿ ಪಕ್ಷಗಳು ಯಾವತ್ತಿಗೂ ಅನುಸರಿಸಿಕೊಂಡು ಬರುತ್ತಿರುವ ತಂತ್ರಗಳಷ್ಟೆ.

ಇಂದಿನ ಆರ್ಥಿಕ ಮುಗ್ಗಟ್ಟನ್ನು ಬಗೆಹರಿಸುವ ದಿಶೆಯಲ್ಲಿ ಕಾರ್ಪೊರೇಟ್ ಸಂಸ್ಥೆಗಳ ಪಾತ್ರವೇನೂ ಇಲ್ಲವೆ ? ಕೇವಲ ಲಾಭ ಮಾಡುವುದೇ ಅವುಗಳ ಗುರಿಯೆ ? ಪ್ರಣಬ್ ಮುಖರ್ಜಿ ಅವರು ಈ ಪ್ರಶ್ನೆಗಳಿಗೆ ಉತ್ತರಿಸಬೇಕಿದೆ.

ಹಲವಾರು ರಾಜ್ಯಗಳ, ಅದರಲ್ಲೂ ಕರ್ನಾಟಕದ, ಅಭಿವೃದ್ಧಿ ಬಜೆಟ್‌ನಲ್ಲಿ ಸಮರ್ಪಕವಾದ ಅನುದಾನವನ್ನು ಮೀಸಲಾಗಿಟ್ಟಿಲ್ಲ. ಬೆಂಗಳೂರಿನಂತಹ ಬೆಳೆಯುತ್ತಿರುವ ನಗರಗಳ ಅಭಿವೃದ್ಧಿಗೆ ವಿತ್ತ ಮಂತ್ರಿಯವರು ಸ್ಪಂದಿಸಿಲ್ಲ ಎನ್ನುವುದು ವಿಷಾದದ ಸಂಗತಿ.

ತಿಂಗಳ ಪತ್ರಿಕೆ
ಹೊಸತು
ನೆನ್ನೆಯದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಈ ತಿಂಗಳು (೩ನೇ ಪುಟದಿಂದ)

ಆದರೆ 'ನಾವೂ ಇದ್ದೇವೆ, ನಮ್ಮದೂ ಆಕಾಂಕ್ಷೆಗಳಿವೆ, ಅವನ್ನು ಪೂರೈಸಿಕೊಳ್ಳಲು ನಾವು ಬದ್ಧರಾಗಿದ್ದೇವೆ' ಎಂದು ಗಟ್ಟಿಯಾಗಿ ಹೇಳಲು ವೇದಿಕೆಗಳು ಬೇಕು. 'ಹೊಸತು' ಅಂತಹ ಒಂದು ಉಪಯುಕ್ತ ವೇದಿಕೆಯಾದರೆ ನಮ್ಮೆಲ್ಲರ ಸಂಯುಕ್ತ ಯತ್ನವು ಸಾರ್ಥಕವಾಗುತ್ತದೆ. ಈ ಉದ್ದೇಶದಿಂದ ಸಾಮೂಹಿಕವಾಗಿ ಮುಂದುವರಿಯೋಣ, ವಿಚ್ಛಿದ್ರಕಾರಿ ಶಕ್ತಿಗಳನ್ನು ಸೋಲಿಸೋಣ, ನೆಮ್ಮದಿಯ ನಾಳೆಯ ಬೆಳಕಿನತ್ತ ದೃಷ್ಟಿಹರಿಸೋಣ.

* * *

ಬೆಂಗಳೂರಿನ ಜಾಡ್ಯವು ಬೇರೆ ನಗರಗಳಿಗೆ ಮತ್ತು ಪಟ್ಟಣಗಳಿಗೆ ಹರಡುವುದನ್ನು ತಪ್ಪಿಸುವುದರ ಜೊತೆಗೆ ಸ್ವತಃ ಬೆಂಗಳೂರಿನಲ್ಲೂ ಪೊಲೀಸ್ ಅಧಿಕಾರಿಗಳು ಹೇರುವ ಸಂಹಿತೆಯನ್ನು ಪ್ರಜಾಪ್ರಭುತ್ವವಿರೋಧಿ, ಜನವಿರೋಧಿ ಅಕ್ರಮವೆಂದು ತಿರಸ್ಕರಿಸಬೇಕಾಗಿದೆ. ಮೇ ೨೦೦೯ರಲ್ಲಿ ಪೊಲೀಸ್ ಕಮಿಷನರ್ ಒಂದು ಆಜ್ಞೆಯನ್ನು ಹೊರಡಿಸಿ ಬೆಂಗಳೂರಿನ ವ್ಯಾಪ್ತಿಯಲ್ಲಿ ಸಭೆ ಮತ್ತು ಮೆರವಣಿಗೆಗಳನ್ನು, ವಿಶೇಷವಾಗಿ ಪ್ರತಿಭಟನಾ ರ್‍ಯಾಲಿಗಳನ್ನು, ನಿಯಂತ್ರಿಸಲು ಸನ್ನದ್ಧರಾಗಿದ್ದಾರೆ. ಪ್ರತಿಭಟನೆ ಅನಗತ್ಯವಾಗುವಂತಹ ದಿಕ್ಕಿನಲ್ಲಿ ನೀತಿಗಳನ್ನು ಕಾರ್ಯಗತಗೊಳಿಸುವ ಬದಲು ''ಪ್ರಭುತ್ವವು ತನಗೆ ತೋಚಿದಂತೆ ಮಾಡುತ್ತದೆ, ಪ್ರಜೆಗಳು ಬಾಯಿಮುಚ್ಚಿ ಕುಳಿತಿರುವುದನ್ನು ಕಲಿಯಲಿ, ಕಲಿಯದಿದ್ದರೆ ನಾವು ಕಲಿಸುತ್ತೇವೆ'' ಎಂಬ ಪ್ರತಾಪವನ್ನು ಮೆರೆಯುವ ಆಜ್ಞೆ ಈಗ ನಮ್ಮ ಮುಂದಿದೆ. ನಾಗರಿಕ ಜೀವನಕ್ಕೆ ತೊಂದರೆಯನ್ನು ನಿವಾರಿಸಲು ಈ ಆಜ್ಞೆ ಅಗತ್ಯವಾಗಿದೆಯೆಂದು ಹೇಳುವ ಪ್ರಭುತ್ವದ ವಕ್ತಾರರಿಗೆ ನಾವೊಂದು ಪ್ರಶ್ನೆ ಹಾಕಬೇಕು: ಪ್ರಜಾಪ್ರಭುತ್ವವಾದಿ ಪ್ರತಿಭಟನೆಗಳು ಅನಾಗರಿಕವೆ ಅಥವಾ ಅನಾಗರಿಕರ ಪರವಾದುವೆ? ಉದಾಹರಣೆಗೆ, ಕಾನೂನನ್ನು ಧಿಕ್ಕರಿಸಿ ದೇಶದ ಗಣಿಸಂಪತ್ತನ್ನು ಲೂಟಿ ಮಾಡುವ ದ್ರೋಹವನ್ನು ಬಯಲುಮಾಡಿ ಅದನ್ನು ಸಾರ್ವಜನಿಕವಾಗಿ ಖಂಡಿಸಿ ಪ್ರತಿಭಟಿಸುವುದು ಅನಾಗರಿಕವಾದುದೆ? ನಾಗರಿಕರಿಗೆ ಈ ಲೂಟಿಯಿಂದ ಆಘಾತವಾಗುತ್ತಿಲ್ಲವೆ? ಇಂತಹ ನೂರಾರು ಬೇರೆ ವಿಷಯಗಳಿವೆ. ಅವನ್ನೆಲ್ಲಾ ಚಾಪೆಯ ಕೆಳಗೆ ತೂರಿಸಿ ಸ್ವಸ್ಥವಾಗಿರಬೇಕೆಂದು ಹೇಳುವ ಪ್ರಭುತ್ವದ ಅಧಿಕಾರಿಗಳ ಆಜ್ಞೆಯು ಸರ್ವಥಾ ಅನಾಗರಿಕವಾದುದು. ಪೊಲೀಸ್ ಕಮಿಷನರ್ ಮಹಾಶಯರು ಉಲ್ಲೇಖಿಸಿರುವ ವಿಧಾನವನ್ನು ಮನ್ನಿಸುವುದಾದರೆ ಯಾವ ಪ್ರತಿಭಟನೆಯೂ ಸಾಧ್ಯವಾಗುವುದಿಲ್ಲ. ಅವರು ವಿಧಿಸುವ ನಿಯಮಗಳು ಅಷ್ಟು ಘೋರವಾಗಿವೆ, ಅಪ್ರಾಯೋಗಿಕವಾಗಿವೆ. ''ಸಿಟ್ಟಾದಾಗ ಹತ್ತು ಎಣಿಸು'' ಎಂಬ ಮಾತೊಂದಿದೆ. ಅದು ಸಿಟ್ಟಿನ ಆವೇಶವನ್ನು ಹತೋಟಿಯಲ್ಲಿಡಲು ಒಂದು ಸಾಧನ. ''ಪ್ರತಿಭಟನೆ ಮಾಡಬೇಕಾದಾಗ ಹತ್ತು ದಿನ ತಡೆ, ಆಮೇಲೆ ಅದನ್ನು ಮರೆತುಬಿಡು'', ಎಂಬ ಅವಿವೇಕವನ್ನು ಪೊಲೀಸ್ ಆಜ್ಞೆಯು ಬೋಧಿಸುತ್ತಿದೆ. ಪ್ರತಿಭಟಿಸಲು ಇಚ್ಛಿಸುವವರ ''ಸ್ಥಾನಮಾನ ಮತ್ತು ಹಿನ್ನೆಲೆ'' ನೋಡಿ ಪೊಲೀಸ್ ಅಧಿಕಾರಿಗಳು ಪರವಾನಗಿ ನೀಡಬೇಕಂತೆ! ಅಂದರೆ, ಎನ್. ಆರ್. ನಾರಾಯಣ ಮೂರ್ತಿ ಮತ್ತು ಪೇಜಾವರ ಸ್ವಾಮಿಗಳಂಥವರಿಗೆ ಪ್ರತಿಭಟಿಸುವ ಅವಕಾಶವಿದೆಯೆಂದರ್ಥ!! ಚೆಂಡಿಗೇರಿಯ ಉನ್ಮತ್ತ ದುರಹಂಕಾರಿಗಳು ದಲಿತರಿಗೆ ಅಮೇಧ್ಯ ತಿನ್ನಿಸಿದಾಗ ಈ ಮಹಾತ್ಮರು ಪ್ರತಿಭಟಿಸಿದರೇನು? ಪ್ರತಿಭಟಿಸಿದವರು ಹತ್ತು ದಿನ ಕಾದು ಆಮೇಲೆ ಬೀದಿಗೆ ಬಂದು ಅಮಾನವೀಯ, ಅಸಂಸ್ಕೃತ ದುರ್ಜನರಿಗೆ ಛೀಮಾರಿ ಹಾಕಬೇಕಾಗಿತ್ತೆ? ಇಂತಹ ಸನ್ನಿವೇಶಗಳು ನೂರಾರು.

ಸದರಿ ಪೊಲೀಸ್ ಆಜ್ಞೆಯಲ್ಲಿ ದುಡಿಯುವ ನಾಗರಿಕರ ವಿರುದ್ಧದ ನಿರ್ಬಂಧಗಳು ಹೇರಳವಾಗಿವೆ. ದುಡಿಯುವ ಜನ ಮತ್ತು ಅವರ ಸಂಘಟನೆಗಳು ಒಗ್ಗಟ್ಟಾಗಿ ಈ ಆಜ್ಞೆಯನ್ನು ಧಿಕ್ಕರಿಸದಿದ್ದರೆ ಕೈಕೋಳ ತೊಡಿಸಹೊರಟ ಪ್ರಭುತ್ವದ ನಿರಂಕುಶ ದುರ್ವರ್ತನೆಗೆ ಒಪ್ಪಿಗೆ ಸೂಚಿಸಿದಂತಾಗುತ್ತದೆ. ವಿಶೇಷ ಸಂದರ್ಭಗಳಲ್ಲಿ ಸಂಚಾರವನ್ನು ಸೂಕ್ತವಾಗಿ ನಿಭಾಯಿಸುವ ಚಾತುರ್ಯ ತೋರುವ ಬದಲು, ನಾಗರಿಕರನ್ನು ರಕ್ಷಿಸುವ ಹೆಸರಿನಲ್ಲಿ ಅನಾಗರಿಕ ಕ್ರಮಗಳನ್ನು ನಾಗರಿಕರ ಮೇಲೆ ಹೇರುವ ಹುನ್ನಾರವು ಸಂಪೂರ್ಣವಾಗಿ ಪ್ರಜಾಪ್ರಭುತ್ವಕ್ಕೆ ಮಾರಕವಾದ್ದು. ಪ್ರತಿಭಟನೆ ಮತ್ತು ಮೆರವಣಿಗೆಗಳನ್ನು ಸ್ವಾತಂತ್ರ್ಯ ಹೋರಾಟದ ಅವಿಭಾಜ್ಯ ಅಂಗಗಳನ್ನಾಗಿ ರೂಪಿಸಿದ ದೇಶದಲ್ಲಿ ಇಂತಹ ಆಜ್ಞೆ ಹೊರಬಂದಿರುವುದು ನಾಚಿಕೆಗೇಡಿನ ಪ್ರಸಂಗ. ಅಂತಹ ಜನವಿರೋಧಿ ಆಜ್ಞೆಯನ್ನು ಬೆಂಬಲಿಸುವ ನಾಗರಿಕರೂ ಇದ್ದಾರೆಂದು ಪೊಲೀಸರು ಹೇಳಿದ್ದಾರೆ. ಅವರನ್ನು 'ನಾಗರಿಕ'ರೆನ್ನಬಹುದೆ, ಎಂಬುದೇ ಮೂಲಭೂತ ಪ್ರಶ್ನೆ.

* * *

ಅಯೋಧ್ಯೆಯಲ್ಲಿ ಅಡ್ವಾನಿಯವರ ನೇತೃತ್ವದಲ್ಲಿ ಮಸೀದಿಯನ್ನು ಉರುಳಿಸಿದ ೧೭ ವರ್ಷಗಳ ನಂತರ ಲಿಬರ್ಹಾನ್ ಎಂಬ ನ್ಯಾಯಮೂರ್ತಿಗಳು ಆ ಬಗ್ಗೆ ವರದಿ ಸಲ್ಲಿಸಿದ್ದಾರೆ. ಬೆಟ್ಟ ಅಗೆದು ಇಲಿಯನ್ನು ಸಹ ಹಿಡಿಯದೆಹೋದ ಅಸಾಧಾರಣ ಸಾಧನೆ ಈ ನ್ಯಾಯಮೂರ್ತಿಗಳದ್ದು. ಆರು ತಿಂಗಳಲ್ಲಿ ವಿಚಾರಣೆ ಮಾಡಬೇಕೆಂಬ ಆದೇಶದಂತೆ ಆಯೋಗ ಆರಂಭವಾಗಿ, ೪೮ ಬಾರಿ ವಿಸ್ತರಣೆ ಪಡೆದು, ೮ ಕೋಟಿಗೂ ಹೆಚ್ಚು ರೂಪಾಯಿಗಳ ವ್ಯಯ ಮಾಡಿ, ಕಡೆಗೂ ಆಯೋಗವು ವರದಿ ಸಲ್ಲಿಸಿಬಿಟ್ಟಿದೆ. ಗೊತ್ತಿಲ್ಲದಿದ್ದುದನ್ನು ವಿಚಾರಣೆಯ ಮೂಲಕ ಗೊತ್ತುಪಡಿಸುವುದಕ್ಕಿಂತಲೂ, ಆಗಲೇ ಗೊತ್ತಿದ್ದ ಮಹತ್ವದ ಅಂಶಗಳನ್ನು ಮುಚ್ಚಿಡುವುದು ಆಯೋಗಕ್ಕೆ ಸಿದ್ಧಿಸಿದೆ, ಎಂಬುದು ಅನೇಕ ಕಾನೂನು ಪಂಡಿತರು ವ್ಯಕ್ತಪಡಿಸಿರುವ ಅಭಿಪ್ರಾಯ. ಇತ್ತೀಚಿನ 'ಔಟ್‌ಲುಕ್' ವಾರಪತ್ರಿಕೆಯಲ್ಲಿ ಅನುಪಮ ಗುಪ್ತ ಎಂಬುವವರು ಒಂದು ಲೇಖನ ಪ್ರಕಟಿಸಿ ಲಿಬರ್ಹಾನ್ ಆಯೋಗದ ಕಾರ್ಯವೈಖರಿಯನ್ನು ಚರ್ಚಿಸಿದ್ದಾರೆ. ಅವರು ೨೦೦೭ರವರೆಗೆ ಲಿಬರ್ಹಾನ್ ಅವರಿಗೆ ಸಲಹೆ ನೀಡುವ ಸಹಾಯಕ ಕಾನೂನು ಮಂಡಳಿಯಲ್ಲಿದ್ದವರು; ಆಮೇಲೆ, ಲಿಬರ್ಹಾನ್ ಅವರೊಂದಿಗೆ ಸಹಕಾರ ಸಾಧ್ಯವಿಲ್ಲವೆಂದು ಹೊರಬಂದವರು, ಅವರನ್ನು ಚೆನ್ನಾಗಿ ಬಲ್ಲವರು. ಮೊದಲ ಕರಡು ವರದಿಯಲ್ಲಿ ಲಿಬರ್ಹಾನ್ ಅವರು ಲಾಲಕೃಷ್ಣ ಅಡ್ವಾನಿಯವರನ್ನು ಹುಮ್ಮಸ್ಸಿನಿಂದ ಹೊಗಳಿದ್ದರೆಂದು ಅನುಪಮ ಗುಪ್ತ ಹೇಳಿದ್ದಾರೆ. ಮಸೀದಿಯ ಧ್ವಂಸ ಕಾರ್ಯದಲ್ಲಿ ಅಡ್ವಾನಿಯವರ ಪಾತ್ರವು ನಗಣ್ಯವೆಂದು ನೇರವಾಗಿ ಹೇಳದಿದ್ದರೂ, ಮುಖ್ಯವಾಗಿ ಮುರಳಿ ಮನೋಹರ ಜೋಶಿ ಮತ್ತು ಉಮಾ ಭಾರತಿಯವರನ್ನು ಕಾರಣರೆಂದು ಘೋಷಿಸಿರುವ ಲಿಬರ್ಹಾನ್ ಅವರ ಮೂಲೋದ್ದೇಶವನ್ನು ಅನುಪಮ ಗುಪ್ತ ಪ್ರಸ್ತಾಪಿಸಿದ್ದಾರೆ. ಮಸೀದಿ ಉರುಳಿಸುವ ಹಿಂದಿನ ಸಂಘಪರಿವಾರದ, ಅದರಲ್ಲೂ ಭಾರತೀಯ ಜನತಾ ಪಕ್ಷದ, ಸೈದ್ಧಾಂತಿಕ ಅನ್ಯಮತ ದ್ವೇಷವನ್ನು ಬದಿಗೊತ್ತಿ, ಅದೊಂದು ಕೇವಲ ರಾಜಕೀಯ ದಾಳ ಉರುಳಿಸುವ ಚಮತ್ಕಾರವೆಂದು ಲಿಬರ್ಹಾನ್ ಯಾವಾಗಲೂ ಬಗೆದಿದ್ದರೆಂದು ಅನುಪಮ್ ಹೇಳುತ್ತಾರೆ. ''ಚರಿತ್ರೆಯ ಅನ್ಯಾಯಗಳನ್ನು ಸರಿಪಡಿಸುವ'' ಸಿದ್ಧಾಂತವು ಮಸೀದಿಯನ್ನು ಕೆಡವುದರ ಉದ್ದೇಶವೆಂದು ಅಡ್ವಾನಿ ಘೋಷಿಸಿದ್ದರು. ಆದರೆ ಲಿಬರ್ಹಾನ್ ಅವರಿಗೆ ಅದು ಗೌಣವಾಯಿತು. ಅಡ್ವಾನಿಯವರ ಪಕ್ಷದ ಆಂತರಿಕ ಒಲವು - ನಿಲುವುಗಳು ಗೌಣವಾಗಬೇಕಾಗಿತ್ತು. ಆದರೆ, ಲಿಬರ್ಹಾನ್ ಅದನ್ನು ಪೋಷಿಸಿದ್ದಂತೆ ಕಾಣುತ್ತದೆಂದು ಅಭಿಪ್ರಾಯಪಟ್ಟಿರುವವರು ಅನೇಕರಿದ್ದಾರೆ. ಜೋಶಿ ಮತ್ತು ಅಡ್ವಾನಿ ತಮ್ಮ ಪಕ್ಷದಲ್ಲಿ ನಾಯಕತ್ವಕ್ಕಾಗಿ ಸೆಣಸಿದರೆ ಅದು ಆಯೋಗಕ್ಕೆ ಅಪ್ರಸ್ತುತವಾಗಬೇಕಾಗಿತ್ತು. ಆದರೆ ಹಾಗಾಗಿಲ್ಲ. ಅಡ್ವಾನಿಯವರನ್ನು 'ರಕ್ಷಿಸಿ' ಜೋಶಿ ಮತ್ತು ಉಮಾರವರನ್ನು ದಂಡಿಸುವ ಅಗತ್ಯವಿರಲಿಲ್ಲ. ಅಡ್ವಾನಿಯವರು ಕಾನೂನು ಸಂಹಿತೆಯನ್ನು ಉಲ್ಲಂಘಿಸಿದ್ದು ಮತ್ತು ತಮ್ಮ ಅನುಯಾಯಿಗಳ ವಿಕೃತ ಕಾರ್ಯವನ್ನು ತಡೆಗಟ್ಟದಿದ್ದುದು ಜಗತ್ತಿಗೆ ತಿಳಿದಿದೆ; ಅದು ಹೇಗೋ ಏನೋ ಲಿಬರ್ಹಾನ್ ಆಯೋಗಕ್ಕೆ ತಿಳಿಯದೇ ಹೋಗಿದೆ. ಆಯೋಗದೆದುರು ಸಾಕ್ಷಿ ನೀಡಲು ಅಡ್ವಾನಿಯವರನ್ನು ಕರೆಸಲು ಸಹ ಲಿಬರ್ಹಾನ್ ಮೊದಲಿಗೆ ಸಮ್ಮತಿಸಿರಲಿಲ್ಲ ಮತ್ತು ಒತ್ತಾಯಕ್ಕೆ ಮಣಿದು ಕರೆಸಿದಾಗ ಅವರನ್ನು ಮುಕ್ತವಾಗಿ ಪ್ರಶ್ನಿಸಿದ್ದಕ್ಕೆ ಅನುಪಮ ಗುಪ್ತ ಅವರು ಅಡ್ವಾನಿಯವರ ಕ್ಷಮೆ ಯಾಚಿಸಬೇಕೆಂದು ಲಿಬರ್ಹಾನ್ ಆಗ್ರಹಿಸಿದ್ದರೆಂದು ಅನುಪಮ ಗುಪ್ತ ಬಹಿರಂಗಗೊಳಿಸಿದ್ದಾರೆ. ಆಯೋಗಗಳಲ್ಲಿ ಹೀಗೆಲ್ಲಾ ಉಂಟೇ ಎಂದು ಚಕಿತರಾಗಬಹುದು ನಾವು. ಆದರೆ ನೇರವಾಗಿ ಭಾಗಿಯಾಗಿದ್ದವರ ಮಾತನ್ನು ತಳ್ಳಿಹಾಕುವಂತಿಲ್ಲ; ಅನುಪಮ ಗುಪ್ತ ಅವರ ಲೇಖನಕ್ಕೆ ಲಿಬರ್ಹಾನ್ ಆಗಲಿ, ಅಡ್ವಾನಿಯವರಾಗಲಿ, ಪ್ರತಿಕ್ರಿಯಿಸಿಲ್ಲದಿರುವುದು ಗಮನಿಸಬೇಕಾದ ಅಂಶ. ಏನೇ ಇರಲಿ, ಅಂದಿನ ಪ್ರಧಾನಿ ಪಿ. ವಿ. ನರಸಿಂಹರಾವ್ ಅವರ ಜಾಣತನದ ಉಪೇಕ್ಷೆಗೆ ಪ್ರತಿಯಾಗಿ ಇಂದಿನ ಪ್ರಧಾನಿ ಮನಮೋಹನ್ ಸಿಂಗ್ ಏನು ಕ್ರಮ ಕೈಗೊಳ್ಳುತ್ತಾರೆ ಎಂಬುದು ಮುಖ್ಯ. ಯಥಾಪ್ರಕಾರ ನಿರ್ಲಕ್ಷ್ಯವೇ ಅವರ ಬುದ್ಧಿವಂತಿಕೆಯ ಲಕ್ಷಣವಾಗಬಹುದು. ಕಲ್ಯಾಣ ಸಿಂಗ್ ಪೋಷಕ ಮುಲಾಯಂ

ಸಿಂಗ್ ಮತ್ತು ಮನಮೋಹನ್ ಕೃಪಾಕಟಾಕ್ಷದ ನಿರೀಕ್ಷೆಯಲ್ಲಿರುವ ಲಾಲೂ ಪ್ರಸಾದ್ ಯಾದವ್ ಬಾಯಿಬಿಡುವ ಸೂಚನೆಯಿಲ್ಲ. ಎಡಪಕ್ಷಗಳ ಒತ್ತಡಕ್ಕೆ ಅಂಜಬೇಕಾದ ಅಗತ್ಯವೂ ಪ್ರಧಾನಿಗಿಲ್ಲ. ಒಟ್ಟಿನಲ್ಲಿ ಕಾನೂನು ಮೀರಿ ದೇಶದಲ್ಲಿ ತಲ್ಲಣ ಉಂಟುಮಾಡಲು ಕೆಲವರಿಗೆ ಹಕ್ಕಿದೆ, ಹದಿನೇಳು ವರ್ಷಗಳ ನಂತರ ಒಂದು ವರದಿ ಬರುತ್ತದೆ ಮತ್ತು ಎಲ್ಲೋ ಕಪಾಟಿನಲ್ಲಿ ಅದು ಹುದುಗಿಹೋಗುತ್ತದೆ, ಎಲ್ಲರೂ ನಿಸೂರಾಗಿ ಬಾಳಬಹುದು! ಇದಲ್ಲವೆ ''ನೈಜ'' ಪ್ರಜಾಪ್ರಭುತ್ವ, ಕಾನೂನು ಪಾಲನೆ ಮತ್ತು ಸಂವಿಧಾನವು ಎತ್ತಿ ಹಿಡಿಯುವ ಧರ್ಮನಿರಪೇಕ್ಷತೆ!!

* * *

'ತೆಹೆಲ್ಕಾ' ವಾರಪತ್ರಿಕೆಯಲ್ಲಿ ಸಂಜನಾ ಅವರು ಸಂಘಪರಿವಾರದ ''ಸಾಂಸ್ಕೃತಿಕ ಶಿಕ್ಷಣ''ದ ದುರಂತವೊಂದನ್ನು ತೆರೆದಿಟ್ಟಿದ್ದಾರೆ. ಕ್ರೈಸ್ತ ಮತದೊಡನೆ ಪೈಪೋಟಿಯೋ ಎಂಬಂತೆ ಮೇಘಾಲಯದಿಂದ ಚಿಕ್ಕಮಕ್ಕಳನ್ನು ಕರೆತಂದು ಕರ್ನಾಟಕದ ಕೆಲವು ಶಾಲೆಗಳಲ್ಲಿ ದಾಖಲಿಸುವುದು ಸಂಘಪರಿವಾರದ ತುಕಾರಾಮ ಶೆಟ್ಟಿ ಎಂಬ ಮಹನೀಯರ ಪರಿಚಾರಿಕೆಯಾಗಿದೆಯಂತೆ. ಈ ಪುಟ್ಟ ಮಕ್ಕಳು ತಂದೆ-ತಾಯಿಯರಿಂದ ದೂರವಾಗುವುದು, ತಮ್ಮ ಭಾಷೆಯನ್ನು ಮರೆಯುವುದು, ಆಹಾರದ ನಿರ್ಬಂಧಗಳನ್ನು ಒಪ್ಪಿಕೊಳ್ಳುವುದು, ಶ್ಲೋಕಪಠಣವೇ ವಿದ್ಯಾಭ್ಯಾಸವೆಂಬ ರೀತಿಯಲ್ಲಿ ಶಿಕ್ಷಣ ಪಡೆಯುವುದು, ಇವೆಲ್ಲಾ ಯಾರಿಗೂ ಗೌರವ ತರುವ ವಿಷಯವಲ್ಲ. ಈ ಮಕ್ಕಳು ಬೆಳೆದು ಸ್ವ-ರಾಜ್ಯಕ್ಕೆ ತೆರಳಿ ''ಹಿಂದೂ ಸಂಸ್ಕೃತಿ''ಯ ಪ್ರಚಾರಕರಾಗುತ್ತಾರೆಂಬ ಮತ್ತು ತನ್ಮೂಲಕ ಮೇಘಾಲಯವನ್ನು ಕ್ರೈಸ್ತರ ಹಿಡಿತದಿಂದ ಪಾರುಮಾಡುತ್ತಾರೆಂಬ ನಿರೀಕ್ಷೆ ಇದೆಯಂತೆ. – ''ಸಂಸ್ಕೃತಿ''ಯ ಪ್ರಚಾರಕ್ಕೆ ಈ ಮಕ್ಕಳೇಕೆ ಬೇಕು? ಸ್ವಯಂ ಇಚ್ಛೆಯಿಂದ ಬರುವ ಯುವಕರನ್ನು ತರಬೇತು ಮಾಡಿದರೆ ಆಗದೆ? ಮಕ್ಕಳ ಹಕ್ಕುಗಳನ್ನು ಸಂಘಪರಿವಾರವು ಹೀಗೆ ತುಳಿದುಹಾಕುತ್ತಿರುವುದು ಒಂದು ಅಪರಾಧವೆಂದು ಗಣನೆಗೆ ಬರಬೇಕು. ನಮ್ಮ ರಾಜ್ಯದ ಮಾನವ ಹಕ್ಕು ಆಯೋಗವು ಇದನ್ನು ಪರಿಶೀಲಿಸಿ ಕ್ರಮ ತೆಗೆದುಕೊಳ್ಳಬೇಕು. ದೂರದ ಮೇಘಾಲಯದಿಂದ ತಮ್ಮ ಮಕ್ಕಳನ್ನು ನೋಡಲು ಕರ್ನಾಟಕಕ್ಕೆ ಪ್ರಯಾಣ ಬೆಳೆಸುವುದು ಈ ಬಡಮಕ್ಕಳ ತಂದೆ-ತಾಯಿಯರಿಗೆ ಸಾಧ್ಯವಿಲ್ಲ. ಮಕ್ಕಳ ಮೇಲಿನ ಮಾನಸಿಕ ಮತ್ತು ದೈಹಿಕ ದೌರ್ಜನ್ಯವು ಅಕ್ಷಮ್ಯ ಮತ್ತು ಅದು ಯಾವುದೇ ಮಾನವ ಸಂಸ್ಕೃತಿಗೆ ಹೇಯವಾದದ್ದು. ಸಂಘಪರಿವಾರದ ''ಸುಸಂಸ್ಕೃತರು'' ಅದನ್ನು ತಿಳಿಯಲಾರದಷ್ಟು ಅಶಿಕ್ಷಿತರೆಂದು ನಾವು ತಿಳಿಯಬೇಕೆ?

* * *

ನಮ್ಮ ರಾಜ್ಯದ ಉನ್ನತ ಶಿಕ್ಷಣಕ್ಕೆ ಆಪತ್ತೊದಗಿದೆ. ಎಲ್ಲ ವಿಶ್ವವಿದ್ಯಾನಿಲಯಗಳ ಉಪಕುಲಪತಿಗಳೂ ಸದಸ್ಯರಾಗಿರುವ ಒಂದು ಸಮಿತಿ ಇದೆ. ಅದಕ್ಕೆ ಉನ್ನತ ಶಿಕ್ಷಣ ಸಚಿವರು ಅಧ್ಯಕ್ಷರು. ಈಚೆಗೆ ಈ ಸಮಿತಿಯು ತೆಗೆದುಕೊಂಡಿದೆಯೆನ್ನಲಾದ ತೀರ್ಮಾನಗಳು ನಿಜವಾದರೆ ಅದು ಅತ್ಯಂತ ಖಂಡನೀಯ ಮತ್ತು ಶೋಚನೀಯ. ತೀರ್ಮಾನಗಳು ಎರಡು: (ಅ) ಎಲ್ಲ ವಿಶ್ವವಿದ್ಯಾಲಯಗಳಲ್ಲೂ ಜ್ಯೋತಿಷ್ಯದ ಅಧ್ಯಯನ ವಿಭಾಗ ತೆರೆಯುವುದು, ಮತ್ತು (ಆ) ಪದವಿ ಶಿಕ್ಷಣ ಪಡೆಯಲು ವಿದ್ಯಾರ್ಥಿಗಳನ್ನು ಎಲ್ಲೆಂದರಲ್ಲಿಗೆ ಹೋಗುವಂತೆ ಬಲವಂತಪಡಿಸುವುದು. ಮೊದಲನೆಯ ತೀರ್ಮಾನವು ಶುದ್ಧ ಮೌಢ್ಯದ ಆರಾಧನೆ. ಇದಕ್ಕೆ ಒಪ್ಪಿಗೆ ನೀಡಿದ ಉಪಕುಲಪತಿಗಳು ಅವರ ಸ್ಥಾನಗಳಲ್ಲಿ ಉಳಿಯಲು ಯೋಗ್ಯರಲ್ಲ. ಸಚಿವರಿಗೆ ಜ್ಯೋತಿಷ್ಯದಲ್ಲಿ ಆಸಕ್ತಿಯಿದ್ದರೆ ಅದಕ್ಕೆ ನಮ್ಮಲ್ಲಿ ಮದ್ದಿಲ್ಲ; ಆದರೆ ಅವರು ಹೇಳಿದ್ದಕ್ಕೆ ತಲೆದೂಗುವ ಕೋಲೆಬಸವಗಳಿಗೆ ಉನ್ನತ ಶಿಕ್ಷಣದಲ್ಲಿ ಉಳಿಯುವ ಕನಿಷ್ಠ ಅರ್ಹತೆಯೂ ಇಲ್ಲ. ಎರಡನೆಯದಾಗಿ, ಬಾಲಕ-ಬಾಲಕಿಯರು ಇರುವೆಡೆ ಶಿಕ್ಷಣ ಪಡೆಯಲೆಂದು ಕಾಲೇಜುಗಳನ್ನು ತೆರೆದು, ಈಗ ಅವರನ್ನು ಎಲ್ಲೆಲ್ಲಿಗೋ ಹೋಗಿರೆಂದು ಆದೇಶಿಸುವುದು ಮೂರ್ಖತನ ಮತ್ತು ಶಿಕ್ಷಣ ವಿರೋಧಿ ನಿಲುವು. ಒಂದು ಬಿ.ಎ. ಅಥವಾ ಬಿ.ಎಸ್ಸಿ. ಓದಲು ಮಧುಗಿರಿಯಂತಹ ಊರಿನ ಬಾಲಕಿಯನ್ನು ಬೀದರ್‌ಗೆ ಕಳಿಸುತ್ತೀರಾ? ಪೋಷಕರು ಒಪ್ಪುತ್ತಾರೆಯೆ ಮತ್ತು ಅವರಿಗೆ ಆರ್ಥಿಕ ಚೈತನ್ಯವಿದೆಯೆ? ಶಿಕ್ಷಣ ಪಡೆಯುವ ಹಕ್ಕಿಗಾಗಿ ಇನ್ನು ಮೇಲೆ ವಿದ್ಯಾರ್ಥಿ ಸಮುದಾಯವು ರಸ್ತೆಗಿಳಿಯಬೇಕೆಂಬ ಅನಿವಾರ್ಯತೆ ಉಂಟಾಗುವ ಮೊದಲು ಇಂತಹ ಅಸಹ್ಯ ತೀರ್ಮಾನಗಳನ್ನು ಕೈಬಿಡುವುದು ಆರೋಗ್ಯಕರ. ಜ್ಯೋತಿಷ್ಯದ ಜೊತೆ ಗಿಣಿಶಾಸ್ತ್ರ, ಹಸ್ತಸಾಮುದ್ರಿಕೆ, ಮುಂತಾದ ಅಮೋಘ ಜ್ಞಾನಶಾಖೆಗಳನ್ನು ನಮ್ಮ ಉಪಕುಲಪತಿಗಳ ಕುರಿಮಂದೆ ಎಂದು ಆರಂಭಿಸುತ್ತದೋ ಕಾದು ನೋಡೋಣ. ಅಂತರರಾಷ್ಟ್ರೀಯ ಮಟ್ಟಕ್ಕೇರಲು ನಮ್ಮ ಉನ್ನತ ಶಿಕ್ಷಣ ಕ್ಷೇತ್ರವು ಸಜ್ಜಾಗುತ್ತಿದೆಯೆಂಬುದು ಖಚಿತವಾಯಿತಲ್ಲ!

ಇಡೀ ಉಪಕುಲಪತಿ-ಮಂದೆ ಹೀಗೆ ಗೋಣು ಹಾಕಲು ಸಿದ್ಧವಿದ್ದರೆ ಮಂಗಳೂರಿನ ಉಪಕುಲಪತಿ ಮಹಾಶಯ ಹಿಟ್ಲರನ ಭಂಟನಂತೆ ವರ್ತಿಸಲು ತುದಿಗಾಲಲ್ಲಿ ನಿಂತಿದ್ದಾರೆ. ಪ್ರಾಧ್ಯಾಪಕ ಪಟ್ಟಾಭಿರಾಮ ಸೋಮಯಾಜಿ ಯಾವುದೋ ಒಂದು ಹೀನ ನಡವಳಿಕೆಯನ್ನು ಖಂಡಿಸಿದ್ದು ಇವರಿಗೆ ವಿಷಪ್ರಾಶನದಂತೆ ಕಂಡುಬಂದಿದೆ. ಯಾರೋ ಹೊರಗಿನವರ ಆಜ್ಞೆಯನ್ನು ಪಾಲಿಸಲು ಇವರು ಉಪಕುಲಪತಿ ಆಗಬೇಕಿತ್ತೆ? ದೂರದರ್ಶನದ ವರದಿಗಾರರು ಕಾಲೇಜಿನ ಆವರಣ ಪ್ರವೇಶಿಸಬಹುದಾದರೆ ಅವರು ಕೇಳುವ ಪ್ರಶ್ನೆಗಳಿಗೆ ಉತ್ತರ ನೀಡುವುದು ಹೇಗೆ ತಪ್ಪಾಗುತ್ತದೆ? ಯಾವ ನೀತಿ ಸಂಹಿತೆಯ ಉಲ್ಲಂಘನೆಯಾಗಿದೆಯೆಂದು ಸೋಮಯಾಜಿಯವರಿಗೆ ಶಿಕ್ಷೆ ನೀಡಲು ಉಪಕುಲಪತಿ ಹೆಣಗುತ್ತಿದ್ದಾರೆ? ಇಂತಹ ಕೈಂಕರ್ಯ ನಡೆಸಿ ಯಾರೋ ಉದ್ಧಟ ಅನಾಗರಿಕರನ್ನು ಸಂಪ್ರೀತರನ್ನಾಗಿಸುವುದಕ್ಕಿಂತಲೂ ಉಪಕುಲಪತಿ ಸ್ಥಾನಕ್ಕೆ ರಾಜೀನಾಮೆ ನೀಡಿ ಹೊರಬರುವುದು ಯೋಗ್ಯವಾಗಿದ್ದೀತು. ಹೀಗೆ ದುಷ್ಟಕೂಟವನ್ನು ಬೆಳೆಸಿ ಉಪಕುಲಪತಿಗಳು ಉನ್ನತ ಶಿಕ್ಷಣದ ಹರಿಕಾರರಾಗಬಹುದೆಂಬುದು ಒಂದು ಮಿಥ್ಯೆ. ಫ್ಯಾಸಿಸ್ಟ್ ಶಕ್ತಿಗಳು ಪ್ರಬಲವಾಗುವುದು ಇಂತಹ ನಿಷ್ಠಾರಹಿತ ಪಾತಕಗಳಿಂದಲೇ.

* * *

ನಮ್ಮ ರಾಜ್ಯದಲ್ಲಿ ಉನ್ನತ ಶಿಕ್ಷಣವು ಹೀಗೆ 'ಶೋಭಾಯಮಾನ'ವಾಗಿ ಬೆಳೆಯುತ್ತಿರುವಾಗ ಕೇಂದ್ರದ ಕಪಿಲ ಸಿಬಲ್ ಸುಮ್ಮನಿರಲಾದೀತೆ? ಅವರು ದೇಶದಲ್ಲಿ ಶಿಕ್ಷಣದ ಔನ್ನತ್ಯಕ್ಕಾಗಿ ಹೊರದೇಶಗಳ ವಿಶ್ವವಿದ್ಯಾನಿಲಯಗಳನ್ನು ತಂದು ಇಲ್ಲಿ ಪ್ರತಿಷ್ಠಾಪಿಸುತ್ತಾರೆ. ಯಶಪಾಲ್ ಸಮಿತಿಯು ಕೂಡದೆಂದು ವಾದಿಸಿರುವುದನ್ನು ತಳ್ಳಿ ಹಾಕಿರುವ ಈ ವಕೀಲ ಸಿಬಲ್ ಶಿಕ್ಷಣ ಕ್ಷೇತ್ರಕ್ಕೆ ಅರ್ಬುದ ರೋಗವನ್ನು ಕಾಣಿಕೆಯಾಗಿ ನೀಡುತ್ತಿದ್ದಾರೆ. ನಮ್ಮ ವಿಶ್ವವಿದ್ಯಾನಿಲಯಗಳನ್ನು ಉತ್ತಮಪಡಿಸುವ ಯೋಗ್ಯತೆ ಇಲ್ಲದಿರುವುದರಿಂದ ಹೊರದೇಶದ ವಿದ್ವತ್ತನ್ನು ಉಣಬಡಿಸಲು ಹಾತೊರೆಯುವ ಸಿಬಲ್ ಕಡೆಗೆ ಶಿಕ್ಷಣದಿಂದ ವಂಚಿತರಾಗುವ ಯುವಕರ ಸೇನೆಯನ್ನು ವೃದ್ಧಿಗೊಳಿಸುತ್ತಾರೆ. ಅರ್ಥಸಚಿವ ಪ್ರಣವ್ ಮುಖರ್ಜಿಯವರು ಲಾಭಗಳಿಸುವ ಸಾರ್ವಜನಿಕ ಉದ್ದಿಮೆಗಳನ್ನು ನಾಶಗೊಳಿಸಲು ''ಖಾಸಗಿ-ಸಾರ್ವಜನಿಕ ಭಾಗವಹಿಸುವಿಕೆ'' ಎಂಬ ಹೆಸರಿನಡಿ ಯೋಜನೆ ಸಿದ್ಧಗೊಳಿಸಿದ್ದಾರೆ. ''ಜನರು'' ಭಾಗವಹಿಸಲು ಅವಕಾಶವಾಗಲೆಂದು ಈ ತೀರ್ಮಾನವಂತೆ ಅವರದು. ಹಾಗಿದ್ದರೆ, ''ಜನರು'' ಎಂದರೆ ಯಾರು? ಸಹಜವಾಗಿಯೇ ಅಂಬಾನಿ, ಮಿತ್ತಲ್, ಅಜೀಂ ಪ್ರೇಂಜಿ, ವಿಠಲ ಮಲ್ಯ, ಇವರೆಲ್ಲಾ ಈ ಹೆಸರಿನಡಿ ಇರುತ್ತಾರೆ. ಶಿಡ್ಲಘಟ್ಟದ ಶಿವಣ್ಣ ಹೇಗೂ ಭಾರತದ ''ಜನರು'' ಎಂಬ ನಾಮಾಂಕಿತಕ್ಕೆ ಅರ್ಹನಲ್ಲವಲ್ಲ! ಇಂತಹ ಘೋರಕೃತ್ಯಗಳನ್ನೆಸಗಲು ''ಜನರು'' ಮನಮೋಹನ ಸಿಂಗ್‌ರನ್ನು ಆಯ್ಕೆ ಮಾಡಿದ್ದಾರೆಂದು ಕೇಂದ್ರ ಸರ್ಕಾರವು ಭಾವಿಸಿದಂತಿದೆ.

* * *

ತಮ್ಮ ಪಕ್ಷವನ್ನು ಚುನಾವಣೆಯಲ್ಲಿ ಗೆಲ್ಲಿಸಿದರೆ ಛತ್ತೀಸಘಡದಿಂದ ವಿದ್ಯುತ್ತನ್ನು ತಂದು ರಾಜ್ಯವನ್ನು ಝಗಮಗಿಸುವುದಾಗಿ ಮಾನ್ಯ ಯಡಿಯೂರಪ್ಪನವರು ಹೇಳಿದ್ದರು. ಗೆದ್ದಿದ್ದೇನೋ ಆಯಿತು, ಆದರೆ ಈಶ್ವರಪ್ಪನವರಿಗೆ ಛತ್ತೀಸಘಡದ ಮರಗಳಲ್ಲಿ ವಿದ್ಯುತ್ ಬೆಳೆದಿರುವುದು ಕಾಣಲಿಲ್ಲ! ಆದ್ದರಿಂದ ನಮಗಿನ್ನೂ ಕತ್ತಲೆಯೇ ಇದೆ.

* * *

ಇಷ್ಟೆಲ್ಲಾ ಅಸಹನೆ ಹುಟ್ಟಿಸುವ ಪ್ರಸಂಗಗಳ ನಡುವೆ ಸೈನಾ ನೇವಾಲ್ ಎಂಬ ಯುವತಿ ಇಂಡೋನೇಷ್ಯಾದ ಮುಕ್ತ ಬ್ಯಾಡ್ಮಿಂಟನ್ ಸ್ಪರ್ಧೆಯಲ್ಲಿ ವಿಜಯಿಯಾಗಿ ಹಿಂದಿರುಗಿ ದೇಶಕ್ಕೆ ಸ್ವಲ್ಪ ಬೆಳಕು ತಂದಿದ್ದಾಳೆ. ತೆಂಡುಲ್ಕರ್ ಜ್ವರದಿಂದ ಹೊರಬರದಿರುವ ನಮ್ಮ ಮಾಧ್ಯಮಗಳಿಗೆ ಅದು ಅಪ್ರಾಸಂಗಿಕ, ಆದರೆ ದೇಶದ ಯುವಕ-ಯುವತಿಯರಿಗೆ ಹಾಗಲ್ಲ, ಅವರಿಗೆ ಅದೊಂದು ಸ್ಫೂರ್ತಿಯ ಸೆಲೆ. ಸೈನಾಗೆ 'ಹೊಸತು' ಅಭಿನಂದನೆ ಸಲ್ಲಿಸಲು ಹರ್ಷಿಸುತ್ತದೆ.




## ಪತ್ರಗಳು

ಕವಿ ಮಿತ್ರ ಕ. ವೆಂ. ರಾಜಗೋಪಾಲ ಅವರು 'ನಾಲ್ವರು ಸಿದ್ಧಾಂತಿಗಳು' ಎಂಬ ಅಪೂರ್ವ ಕೃತಿಯ ಪರಿಚಯ ಮಾಡಿದ್ದಾರೆ. ಶ್ರೀಯುತರು ಈ ಗ್ರಂಥದ ರಚನಕಾರರ ಬಗೆಗೆ ತಿಳಿದವರಿದ್ದರೆ ವಿವರಗಳನ್ನು ನೀಡಬೇಕೆಂದು ಕೇಳಿದ್ದಾರೆ.

'ನಾಲ್ವರು ಸಿದ್ಧಾಂತಿಗಳು' ಕಿರುಹೊತ್ತಿಗೆಯ ಕರ್ತೃ ಎನ್. ಕೆ. ನರಸಿಂಹಮೂರ್ತಿಯವರು (ಎಸ್. ಕೆ. ನರಸಿಂಹ ಮೂರ್ತಿ ಅಲ್ಲ) ನರಸಿಂಹಮೂರ್ತಿಯವರೂ ಅವರ ಕಿರಿಯ ಸಹೋದರ ಎನ್. ಕೆ. ಆನಂದ ತೀರ್ಥಾಚಾರ್ಯರೂ ಗಣಿತದ ಅಧ್ಯಾಪಕರು. ಆನಂದ ತೀರ್ಥಾಚಾರ್ಯರು ಇಂಟರ್‌ಮೀಡಿಯಟ್ ಕಾಲೇಜಿನಲ್ಲೂ, ಎನ್. ಕೆ. ನರಸಿಂಹಮೂರ್ತಿಗಳು ಸೆಂಟ್ರಲ್ ಕಾಲೇಜಿನಲ್ಲೂ ನನಗೆ ಗಣಿತಶಾಸ್ತ್ರದ ಅಧ್ಯಾಪಕರಾಗಿದ್ದರು. ಎನ್. ಕೆ. ನರಸಿಂಹಮೂರ್ತಿಯವರು ಸಂಸ್ಕೃತದಲ್ಲೂ ಪಾಂಡಿತ್ಯ ಹೊಂದಿದ್ದರು.

ಎನ್. ಕೆ. ನರಸಿಂಹಮೂರ್ತಿಗಳು ಬಾಲ್ಯವನ್ನು ಬಡತನದಲ್ಲಿ ಕಳೆದರು. ವಿದ್ಯಾರ್ಥಿದೆಸೆಯಲ್ಲೂ ಅವರು ವಾರಾನ್ನ ಉಂಡು ವಿದ್ಯಾಭ್ಯಾಸ ಮಾಡಿದರು. ಡಿಗ್ರಿ ಪರೀಕ್ಷೆಯಲ್ಲಿ ಚಿನ್ನದ ಪದಕ ಪಡೆದರು. ಎಂ.ಎಸ್ಸಿ. ಓದಲು ಕಲ್ಕತ್ತಾಗೆ ಹೋದರು. ಅವರು ಕಲ್ಕತ್ತಾದಲ್ಲಿ ಕಲಿಯುತ್ತಿದ್ದಾಗ, ಇಂಗ್ಲಿಷ್ ಎಂ.ಎ., ಓದಲು ಹೋಗಿದ್ದ ನನ್ನ ಇಂಗ್ಲಿಷ್ ಪ್ರೊಫೆಸರ್ ಒಬ್ಬರು ನರಸಿಂಹಮೂರ್ತಿಯವರ ಬಗೆಗೆ ನಮ್ಮ ತರಗತಿಯಲ್ಲಿ ಹೇಳಿದ ಮಾತು ನನ್ನ ಮನದಲ್ಲಿ ಹಚ್ಚ ಹಸಿರಾಗಿ ಉಳಿದಿದೆ: ''ನಾನು ಶ್ರೀಮಂತರ ಮಗ. ನನ್ನದು ಹಾಸ್ಟೆಲ್ ವಾಸ. ನಮ್ಮ ತಂದೆ ಪ್ರತಿ ತಿಂಗಳೂ ಸಾಕಷ್ಟು ಹಣ ಕಳುಹಿಸುತ್ತಿದ್ದರು. ವ್ಯಾಸಂಗಕ್ಕೆ ಬೇಕಾದ ಪುಸ್ತಕಗಳನ್ನೆಲ್ಲ ನಾನು ಕೊಂಡುಕೊಂಡೆ. ಎಂ.ಎ. ಪಾಸು ಮಾಡಿದೆ. ಎನ್. ಕೆ. ನರಸಿಂಹಮೂರ್ತಿ ಎರಡು-ಮೂರು ರೀಂ ಪೇಪರ್ ಮಾತ್ರ ಕೊಂಡಿರಬಹುದು, ಅಷ್ಟೆ. ಊಟ, ವಸತಿಗೆ ಏನು ಏರ್ಪಾಡು ಮಾಡಿಕೊಂಡಿದ್ದರೋ ನನಗೆ ತಿಳಿಯದು. ಅವರದು ಕಷ್ಟದ ಜೀವನ ಎಂಬುದು ಮಾತ್ರ ನನಗೆ ಅರಿವಾಗುತ್ತಿತ್ತು. ನಾನು ಇಷ್ಟೆಲ್ಲ ಅನುಕೂಲ ಇದ್ದೂ ಪ್ರಥಮ ದರ್ಜೆಯಲ್ಲಿ ಇಂಗ್ಲಿಷ್ ಎಂ.ಎ. ಪಾಸಾದೆ. ಕಾಗದದ ಹಾಳೆಗಳನ್ನು ಮಾತ್ರ ಕೊಳ್ಳುವ ಶಕ್ತಿ ಇದ್ದ ಎನ್. ಕೆ. ನರಸಿಂಹಮೂರ್ತಿ ಚಿನ್ನದ ಪದಕಗಳನ್ನು ಪಡೆದು ಗಣಿತಶಾಸ್ತ್ರದಲ್ಲಿ ಎಂ.ಎಸ್ಸಿ. ಪದವಿ ಪಡೆದರು.''

'ಅವರು ಒಳ್ಳೆಯ ಮೇಷ್ಟು' ಎಂದು ವಿದ್ಯಾರ್ಥಿಗಳು ನರಸಿಂಹಮೂರ್ತಿಯವರನ್ನು ಹೊಗಳುತ್ತಿದ್ದರು. ಒಳ್ಳೆಯ ಮೇಷ್ಟು ಅಂದರೆ ಮನಮುಟ್ಟುವಂತೆ ಪಾಠ ಹೇಳುವ ಕಲೆಯನ್ನು ಕರಗತಮಾಡಿಕೊಂಡಿದ್ದರು, ಎಂದು ಅರ್ಥ. ಇಷ್ಟೆಲ್ಲ ಪಾಂಡಿತ್ಯವಿದ್ದರೂ ಅವರಿಗೆ ಪ್ರೊಫೆಸರ್‌ಗಿರಿ ಸಿಗಲಿಲ್ಲ ಎಂಬ ಕಟುಸತ್ಯವನ್ನು ನಾವು ಅರಿಯಬೇಕು. ನಿವೃತ್ತರಾಗುವವರೆಗೂ ಅವರು ಸೈಕಲ್ ತುಳಿದುಕೊಂಡೇ ಕಾಲೇಜಿಗೆ ಬರುತ್ತಿದ್ದರು.

ಬೆಂಗಳೂರು — **ಎಚ್. ಎಸ್. ದೊರೆಸ್ವಾಮಿ**

### ಕಟು – ವಿವೇಕ !

ಸಂಸ್ಕೃತ ಮತ್ತು ವೇದ ವಿಶ್ವವಿದ್ಯಾ'ಲಯ'ವನ್ನು ಕುರಿತ ಅಪರೂಪದ ಸಂಪಾದಕೀಯದಲ್ಲಿ ಕಟುತ್ವ, ವಿವೇಕಪಟುತ್ವ ಎರಡೂ ಮೇಳವಿಸಿವೆ. ಸಂಸ್ಕೃತವನ್ನು 'ಮೃತಭಾಷೆ' ಎಂದು ಮೂದಲಿಸಬೇಕಿಲ್ಲ; ಆದರೆ ಸಂಸ್ಕೃತ ವಿ.ವಿ. ('ವೇದ'ದ ಬಾಲಂಗೋಚಿ ಬೇರೆ) ಖಂಡಿತ ಅನಗತ್ಯ !

ಮೈಸೂರು — **ಸಿ. ಪಿ. ಕೆ.**




### ಹಬೀಬ್ ತನ್ವೀರ್

ಹಬೀಬ್ ತನ್ವೀರ್ ಬಗ್ಗೆ ಬಿ. ಸುರೇಶರವರ ಲೇಖನಿಯಲ್ಲಿ ಸಮರ್ಥವಾಗಿ ಮೂಡಿಬಂದಿದೆ. ನಾವು ಕಾಣದ 'ಹಬೀಬ್ ತನ್ವೀರ್'ರ ಹಲವಾರು ಮುಖಗಳನ್ನು ಪರಿಚಯಿಸುವಲ್ಲಿ ಯಶಸ್ವಿಯಾಗಿದೆ.

ಅಪರೂಪದ ಚಿತ್ರಣ ಹಬೀಬ್ ಅವರದು.

ಜಿ.ಟಿ.ಎನ್. ಅಳಿಸಲಾಗದ ನೆನಪು (ಡಾ|| ಬಿ. ಎಸ್. ಶೈಲಜಾ) ''ವಿಜ್ಞಾನ ಕುರಿತ ಲೇಖನಗಳನ್ನು ಬರೆದು ಕಳಿಸಿ. ಅಂಚೆಯಲ್ಲಿ ಕಳಿಸುವುದೇನೂ ಬೇಡ, ಬರೆದು ನಮ್ಮ ಅಂಚೆ ಡಬ್ಬಕ್ಕೆ ಹಾಕಿಬಿಡಿ'' ಎಂದು ಆತ್ಮೀಯವಾಗಿ ಹೇಳಿ... ನನ್ನ ಪರಿಚಯ ಇದೆಯೋ ಇಲ್ಲವೋ ಎಂದು... ''ನಾನು... ನಾನು... ಸಾರ್'' ಎನ್ನುವ ಮೊದಲೇ '''ಕೋಸುನ' ಗೊತ್ತಲ್ಲ'' ಎಂದು ಅಚ್ಚರಿ ಉಂಟುಮಾಡುತ್ತಿದ್ದರು.

ಮೈಸೂರು — **ಕೋ. ಸು. ನರಸಿಂಹಮೂರ್ತಿ**

### ಜಿ. ಟಿ. ನಾರಾಯಣರಾವ್

*ವಿಷಯಬಲ್ಲಾತಂಗೆ ಸಂವಹನತಿ ಸುಲಭ*
*ಭಾಷೆಯಲಿ ಭಾವನೆಯನರುಹವೀ ಯಜ್ಞದಲಿ*
*ದೇಶ ಕಾಲಾತೀತ ಜ್ಞಾನ ಪ್ರವಹಿಸಿ ಸಂ-*
*ದೇಶ ಬೀರುವುದು : ಅರಿವೊಂದೇ ಗುರು ಅತ್ರಿಸೂನು.*

– ಈ ಉಕ್ತಿಯನ್ನು ಸಮರ್ಪಿಸಿ ನಮ್ಮೊಡನಿದ್ದ ನಿರಹಂಕಾರ, ನಿರಸೂಯೆ, ಶಿಸ್ತುಬದ್ಧ, ನೇರನುಡಿಗಳ ಖಗೋಳ ವಿಸ್ಮಯಗಳನ್ನು ಕನ್ನಡದ ಶಬ್ದಗಳಲ್ಲೆ ಬರೆದು, ಹುಲು ಮಾನವರಿಗೂ ಪರಿಚಯಿಸಿದ ಬಹುಮುಖ ಪ್ರತಿಭೆಯ ಗುಡ್ಡೆಹಿತ್ಲು ತಿಮ್ಮಪ್ಪಯ್ಯ ನಾರಾಯಣರಾವ್ ಮರೆಯಾಗಿ ವರ್ಷ ಸಂದ ಸಮಯದಲ್ಲಿ ಡಾ|| ಬಿ. ಎಸ್. ಶೈಲಜಾ ಅವರ ನೆನಪಿನ ಲೇಖನ ಸಕಾಲಿಕವಾದುದು.

ಮೈಸೂರು — **ನರೇಂದ್ರ ಸಿರಕಜೆ**

ಬಿ. ಸುರೇಶ ಅವರ 'ಒಬ್ಬ ರಂಗಕರ್ಮಿಯ ಹೆಜ್ಜೆ ಗುರುತು...!' ಹಬೀಬ್ ತನ್ವೀರ್‌ರವರ ಜೀವನಗಾಥೆ ಓದಿಸುತ್ತ ಹೋಯ್ತು.

ವೈಚಾರಿಕ ಲೇಖನವಾದ 'ಸ್ವಾತಂತ್ರ್ಯೋತ್ತರ ಭಾರತದಲ್ಲಿ ಮತೀಯ ಆತಂಕಗಳು' ಡಾ|| ಸಾವಿತ್ರಿ ಕೆ.ಯವರು ಕಣ್ಣಿದ್ದು ಕುರುಡರಿಗೆ ಜ್ಞಾನದ ದೀವಿಗೆಯನ್ನು ಲೇಖನದ ಮೂಲಕ ಎಚ್ಚರಿಸಿದ್ದಾರೆ.

ಈರಪ್ಪ ಎಂ. ಕಂಬಳಿಯವರ 'ಬೀಡಿಲಾವ್-ಕಾಡಿಲಾವ್' ಅರ್ಥಪೂರ್ಣವಾಗಿತ್ತು. ಶ್ರದ್ಧಾನಂದನ ಕಥೆ ಕಣ್ಣು ಮುಂದೆ ಕಟ್ಟಿದಂತಿದೆ. ಅಲ್ಲಲ್ಲಿ ಕವನಗಳು, ಚುಟುಕುಗಳ, 'ಹೊಸತು'ವಿನ ಲೇಖನಗಳ ಊಟದಲ್ಲಿ ಉಪ್ಪಿನಕಾಯಿ, ಹಪ್ಪಳ, ಸಂಡಿಗೆಯಂತಿದ್ದವು.

ಇತ್ತೀಚೆಗಂತೂ ಕೆಲವೊಂದು ಕಾನೂನುಗಳ ಮಾಹಿತಿಯು 'ಹೊಸತು'ವಿನಿಂದ ದೊರಕುತ್ತಿರುವುದು ಅಭಿನಂದನೀಯ.

ಲಕ್ಷ್ಮೇಶ್ವರ — **ಬಸವರಾಜ ಶಿ. ಬಾಳೇಶ್ವರಮಠ**

ಪ್ರತಿ ತಿಂಗಳು ಪ್ರತಿ ಪುಟವೂ ವಿಷಯ ವೈವಿಧ್ಯಗಳಿಂದ ರಂಜನೆ ಮತ್ತು ಸಂದೇಶ ಎರಡನ್ನು ಕೊಡುತ್ತಾ 'ಹೊಸತು' ಬರುತ್ತಿರುವುದು ಸ್ವಾಗತಾರ್ಹ.

ಎಲ್ಲಾ ಕ್ಷೇತ್ರದ ಬಗೆಗಿನ ಬರಹಗಳು ಅವುಗಳಾಚೆಯ ವಸ್ತುನಿಷ್ಠ ವಿಶ್ಲೇಷಣೆ ಮೆಚ್ಚುವಂಥದ್ದು! ಕೆಲವು ರಂಗದಲ್ಲಿ ಅನೇಕರು ಸಾಧಿಸಿ ಸೇವೆ ಸಲ್ಲಿಸಿದವರಾಗಿದ್ದರೂ ಪ್ರಚಾರವಿಲ್ಲದೆ ಎಲೆಮರೆಯ ಹೂವಿನಂತಿರುವವರನ್ನು ಅವರ ಸಾಧನೆಗೆ ಮನ್ನಣೆ ಕೊಡುವಂತಹ ಪರಿಚಯ, ಸಂದರ್ಶನದ ಬರಹಗಳು ಮತ್ತಷ್ಟು ಬರಲಿ.

ಚಳ್ಳಕೆರೆ — **ಸಿದ್ಧಾಪುರ ಶಿವಕುಮಾರ್**

### 'ಭವಿಷ್ಯ ನುಡಿ' ಅಸತ್ಯ

'ಭವಿಷ್ಯ ನುಡಿ'ಯುವುದು ಅವೈಜ್ಞಾನಿಕ ಅಸತ್ಯದಿಂದ ಕೂಡಿದೆ. ಅದು ಜನರಿಗೆ ತಪ್ಪು ಮಾರ್ಗ ತೋರಿಸಿ ಸಂಪತ್ತು ಮಾಡುವ ಸುಲಭ ಮಾರ್ಗವಾಗಿದೆ. ಆತ್ಮಸ್ಥೈರ್ಯ ಕಳೆದುಕೊಂಡವರು ಈ ಮಾರ್ಗ ಹಿಡಿಯುವುದು ಸರ್ವೇಸಾಮಾನ್ಯ ಸಂಗತಿ. ವೈಜ್ಞಾನಿಕ ತಳಹದಿಯ ಮೇಲೆ ಹೇಳಿದ ಎಲ್ಲಾ ಭವಿಷ್ಯಗಳು ಸತ್ಯ ಮತ್ತು ನಿಖರತೆಯಿಂದ ಕೂಡಿರುವುದು. ದೂರದರ್ಶನ, ಪತ್ರಿಕೆ, ಆಕಾಶವಾಣಿ... ಹೀಗೆ ಎಲ್ಲಾ ಮಾಧ್ಯಮಗಳಲ್ಲಿ 'ಭವಿಷ್ಯ ನುಡಿ' ಹೇಳುವ ಕಾರ್ಯಕ್ರಮಗಳು

ನಿರಂತರವಾಗಿ ನಡೆಯುತ್ತಿದ್ದು ಜನರಿಗೆ ಸರಿಯಾದ ಮಾರ್ಗದರ್ಶನ ಮಾಡದೆ ತಮ್ಮ ಬೇಳೆ ಬೇಯಿಸಿಕೊಳ್ಳುತ್ತಿರುವುದು ಒಂದು ದುರಂತವೆಂದೇ ಹೇಳಬಹುದು. ಬೇರೊಬ್ಬರ 'ಭವಿಷ್ಯ' ಹೇಳುವವರು ತಮ್ಮ ಭವಿಷ್ಯ ಅರಿತುಕೊಳ್ಳಬಹುದಲ್ಲವೆ? ಇದು ಅವರಿಗೆ ಅಸಾಧ್ಯವಾದ ಸಂಗತಿ. ಕಾರಣ 'ಭವಿಷ್ಯ'ದ ಬಂಡವಾಳ ಕುರಿತು ಅವರಿಗೆ ಅರಿವಿದೆ. 'ಭವಿಷ್ಯ'ದ ಜ್ಞಾನ ಅಂದರೆ ಸತ್ಯದ ತಳಹದಿಯ ಮೇಲೆ ರೂಪಿತವಾದ ಜ್ಞಾನವಲ್ಲ. ಆದಕಾರಣ ಇದು ಅವಿಜ್ಞಾನ ವಿಷಯವಾಗಿದೆ. ಮತ್ತೊಂದು ಅರ್ಥದಲ್ಲಿ ಹೇಳುವುದಾದರೆ 'ಭವಿಷ್ಯ' ಸತ್ಯದಿಂದ ಬಹುದೂರ ಇರುವ ವಿಷಯವಾಗಿದೆ. ಇಷ್ಟೆಲ್ಲಾ ವಿವರಣೆ ನೀಡಲು ಒಂದು ಕಾರಣವಿದೆ. ಅದೇ ಚುನಾವಣೆ ಸಂದರ್ಭದಲ್ಲಿ 'ಭವಿಷ್ಯ' ನುಡಿದ ಪಂಡಿತರು ಹೇಳಿದ ಭವಿಷ್ಯ ಸುಳ್ಳಾಗಿದ್ದು, ಯಾರದೋ ಒಂದಿಬ್ಬರ 'ಭವಿಷ್ಯ' ಹೇಳಿದ್ದು ನಿಜವಾದ ಮೇಲೆ ಅದನ್ನೇ ಬಂಡವಾಳವಾಗಿಟ್ಟುಕೊಂಡು ಜೊತೆಗೆ ಪ್ರಚಾರ ಗಿಟ್ಟಿಸಿ ಹಣ ಸಂಪಾದನೆ ಮಾಡುತ್ತಿರುವುದು ಸ್ಪಷ್ಟವಾಗಿದೆ. ವಿಜ್ಞಾನ ಹಾಗಲ್ಲ! ಎಲ್ಲ ಕಾಲಕ್ಕೂ ಎಲ್ಲ ಪ್ರದೇಶಗಳಲ್ಲಿ ಪ್ರಯೋಗ ಮಾಡಿದರೂ ಫಲಿತಾಂಶ ಒಂದೇ ಆಗಿರುತ್ತದೆ. 'ಭವಿಷ್ಯ' ನುಡಿಯುವ ಪಂಡಿತರ ಲೆಕ್ಕಾಚಾರದ ಜ್ಞಾನ ಅವರಿಗಷ್ಟೇ ಸೀಮಿತ ವಾಗಿದೆಯೇ ಹೊರತು ಜನಸಾಮಾನ್ಯರಿಗೆ ಅದರ ಸತ್ಯಾಸತ್ಯತೆಯ ಬಗ್ಗೆ ಅರಿವಿಲ್ಲ. ಹೀಗಾಗಿ ಜನರು ಇವರ ಪಾಂಡಿತ್ಯದ ಜ್ಞಾನವನ್ನು ಪ್ರಶ್ನಿಸುವುದಿಲ್ಲ. ಎಲ್ಲದಕ್ಕೂ ತಲೆ ಅಲ್ಲಾಡಿಸುವುದೊಂದೇ ಅವರ ಕೆಲಸ.

ಒಬ್ಬ ಸ್ವಾಮೀಜಿಯಂತೂ ರಾಷ್ಟ್ರೀಯ ಮಟ್ಟಕ್ಕೆ ಬೆಳೆದಿದ್ದಾರೆ. ಪ್ರಧಾನ ಮಂತ್ರಿ, ಮುಖ್ಯಮಂತ್ರಿ, ಶಾಸಕರು, ಗಣ್ಯವ್ಯಕ್ತಿಗಳು ಅವರ ಹತ್ತಿರ ಹೋಗಿ 'ಭವಿಷ್ಯ' ತಿಳಿದುಕೊಂಡು ಬಂದಿದ್ದಾರೆ. ಇವರು ಎಲ್ಲರಿಗೂ ಏನು ಹೇಳಿದರೂ ಗೊತ್ತಿಲ್ಲ. ಈ ಸ್ವಾಮಿಯವರು ಲೋಕಸಭೆ ಚುನಾವಣೆ ನಂತರ ರಾಜ್ಯದ ಮುಖ್ಯಮಂತ್ರಿ ಶ್ರೀ ಯಡ್ಯೂರಪ್ಪ ನೇತೃತ್ವದ ಸರಕಾರದ ಪಾಲಿಗೆ ಕಂಟಕ ತಪ್ಪಿದ್ದಲ್ಲ ಎಂದು ಹೇಳಿದ್ದಾರೆ (ವಿ. ಕ. ೨೨-೩-೨೦೦೯). ಆದರೆ ಶ್ರೀ ಯಡ್ಯೂರಪ್ಪನವರು ಹೆಚ್ಚು ಸುರಕ್ಷಿತರಾಗಿದ್ದಾರೆ. ಜನರು ಹೆಚ್ಚಾಗಿ ಬೆಂಬಲಿಸಿದ್ದಾರೆ. ಇಂದು ಈ ಸ್ವಾಮೀಜಿಯವರ 'ಭವಿಷ್ಯ'ವಾಣಿ ಸುಳ್ಳಾಗಿದೆ.

ಮತ್ತೊಬ್ಬ ಸ್ವಾಮೀಜಿಯವರು ಲೋಕಸಭೆ ಚುನಾವಣೆ ನಂತರ ಮಹಿಳೆಯೊಬ್ಬರು ಪ್ರಧಾನ ಮಂತ್ರಿ ಸ್ಥಾನ ಅಲಂಕರಿಸುವ ಸಾಧ್ಯತೆಗಳಿವೆಯೆಂದು ಹೇಳಿದರು. ಆದರೆ ಪ್ರಧಾನ ಮಂತ್ರಿ ಸ್ಥಾನವನ್ನು ಪುರುಷರು ಅಲಂಕರಿಸಿದ್ದಾರೆ. ಇಂದು ಸ್ವಾಮೀಜಿಯವರ 'ಭವಿಷ್ಯ'ನುಡಿ ಸಂಪೂರ್ಣ ಸುಳ್ಳಾಗಿದೆ (ವಿ. ಕ. ೬-೨-೨೦೦೯).

ಯಾರು ಭವಿಷ್ಯ ನುಡಿಯುವರೋ, ಅವರು ತಮ್ಮಲ್ಲಿಗೆ ಬಂದವರಿಗೆ ಎಲ್ಲಾ ಕೆಲಸ ಕಾರ್ಯಗಳಾಗುತ್ತವೆಂದು ಹೇಳುತ್ತಾರೆ. ನಕಾರಾತ್ಮಕ 'ಭವಿಷ್ಯ ನುಡಿ' ಹೇಳುವವರಲ್ಲಿ ಜನರು ಬರುವುದಿಲ್ಲವೆಂದು ಅರಿತ ಈ ಪಂಡಿತರು ಸಂತೋಷವಾಗುವ ರೀತಿಯಲ್ಲಿ 'ಭವಿಷ್ಯ' ನುಡಿಯುವರು. ಹಾಗಾದರೆ ನೀವೇ ಹೇಳಿ, 'ಭವಿಷ್ಯ ನುಡಿ' ಸತ್ಯವೇ ಅಸತ್ಯವೇ?

ತುಮಕೂರು

**ವಾಮನ ರಾವ್**

## ವಾಸ್ತು ಮತ್ತು ಜ್ಯೋತಿಷ್ಯ ಶಾಸ್ತ್ರ

ವಾಸ್ತು ಎಂದರೆ ನಮ್ಮ ಪಾರಿಭಾಷಿಕ ಶಬ್ದಕೋಶದಲ್ಲಿ ಮನೆಕಟ್ಟುವ ಕಲೆ ಎನ್ನುವ ಅರ್ಥ ಇದೆ. ಒಬ್ಬ ಇಂಜಿನಿಯರ್, ಮನೆಯ ಮಾಲೀಕನ ಬೇಡಿಕೆ ಅನ್ವಯ ಪ್ಲಾನ್ (ಯೋಜನೆ) ಹಾಕಿಕೊಟ್ಟರೆ, ಒಬ್ಬ ಬೇಲ್ದಾರ ಅವನ ಅನುಭವದ ಮೇರೆಗೆ ಮನೆಯ ಯಜಮಾನನ ಕನಸಿಗೆ ತಕ್ಕಂತೆ ಅದ್ಭುತವಾಗಿ ಒಂದು ಮನೆಯನ್ನು ನಿರ್ಮಿಸಬಲ್ಲ. ನನ್ನ ಅನೇಕ ಸ್ನೇಹಿತರು ವಾಸ್ತು ಪ್ರಕಾರ ಯೋಜನೆ ಹಾಕಿಸಿಯೇ ಮನೆ ಕಟ್ಟಿಸಿದ್ದಾರೆ. ಉದಾಹರಣೆಗೆ, ಈಶಾನ್ಯಕ್ಕೆ ಬಾಗಿಲು, ಅಗ್ನಿ ದಿಕ್ಕಿಗೆ ಅಡುಗೆಮನೆ, ನೈರುತ್ಯಕ್ಕೆ ಮಲಗುವ ಕೋಣೆ... ಹೀಗೆ ಇವು ಇದ್ದೇ ಇರುವುವು. ಸರ್ವೆಸಾಧಾರಣವಾಗಿ ಎಲ್ಲಾ ಸಿವಿಲ್ ಇಂಜಿನಿಯರುಗಳು ವಾಸ್ತುವನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಮನೆಯ ಪ್ಲಾನ್ ಮಾಡುತ್ತಾರೆ. ನಾವು ವಾಸ್ತು ಪ್ರಕಾರ ಮನೆ ಕಟ್ಟಿಸಿಯೇ ಇಲ್ಲ ಎನ್ನುವವರು ಇಂದು ಯಾರೂ ಇಲ್ಲ ಎಂದೇ ನನ್ನ ಅನಿಸಿಕೆ. ಇದು ನಾನು ಕೂಡ ಮನೆ ಕಟ್ಟಿಸುವಾಗ ಆದ ಅನುಭವ. ನನ್ನ ಮನೆಯ ಈಶಾನ್ಯಕ್ಕೆ ನೀರು ಬೀಳುತ್ತದೆ ಎಂದು ಹೇಳಿದಾಗ ಅಲ್ಲಿ ೨ ಬೋರ್ ಹಾಕಿಸಿಯೂ ಒಂದು ತೊಟ್ಟು ನೀರುಹನಿಯೂ ಬರಲಿಲ್ಲ. ಆದರೆ ಅಗ್ನಿ ದಿಕ್ಕಿಗೆ ಬೋರ್ ಹಾಕಿಸಿದಾಗ ನೀರು ಬಿತ್ತು. ಆಗ ಒಂದು ಸಲಹೆ ಬಂತು. ಅಗ್ನಿ ದಿಕ್ಕಿಗೆ ನೀರು ಬಿದ್ದಿರುವುದರಿಂದ ಈಶಾನ್ಯ ದಿಕ್ಕಿಗೆ ಒಂದು ತೊಟ್ಟಿ ಮಾಡಿ ಕೊಂಡು ಪುನಃ ಅಲ್ಲಿಂದ ನೀರನ್ನು ಉಪಯೋಗಿಸಿಕೊಳ್ಳಿ ಎನ್ನುವ ಸಲಹೆಗೆ ನಾನು ಅನುಮತಿಸಬೇಕಾಯಿತು.

ಗೋಡೆಗಳನ್ನೆಲ್ಲಾ ಕಟ್ಟಿಸಿ ಛತ್ತು ಹಾಕಿಸಿದ ಮೇಲೆ ಯಾರೋ ಒಬ್ಬರು ಸ್ವಾಮೀಜಿಯ ಹೇಳಿಕೆ ಮೇರೆಗೆ ಒಂದು ದಿಕ್ಕಿಗಿದ್ದ ಗೋಡೆಯನ್ನು ಕೆಡವಿ ಇನ್ನೊಂದು ಗೋಡೆಯನ್ನು ನಿರ್ಮಿಸಿ ಅದಕ್ಕಾಗಿ ಲಕ್ಷಾಂತರ ಹಣವನ್ನು ಕಳೆದುಕೊಂಡ ಇಂಜಿನಿಯರ್ ಸ್ನೇಹಿತರೊಬ್ಬರಿದ್ದಾರೆ.

ತಮ್ಮ ಯಾವುದಾದರೂ ಆಸೆ ನೇರವೇರದಿದ್ದಾಗ, ವ್ಯವಹಾರದಲ್ಲಿ ನಷ್ಟ ಸಂಭವಿಸಿದಾಗ ಮತ್ತು ವೈಚಾರಿಕತೆಯ ಅಭಾವ, ಆತ್ಮವಿಶ್ವಾಸದ ಕೊರತೆ ಮುಂತಾದವು ಮೇಲಿನ ಮೂಢನಂಬಿಕೆಗಳು ಬೆಳೆಯುವ ದಿಶೆಯಲ್ಲಿ, ಈ ವಾಸ್ತು ಎನ್ನುವ ಮೋಡಿಗೆ ಪರವಶರಾಗುತ್ತಾರೆ.

ಜ್ಯೋತಿಷ್ಯದ ಪ್ರಕಾರ ಒಂಭತ್ತು ಗ್ರಹಗಳಿವೆ. ಅವು ಸೂರ್ಯ, ಚಂದ್ರ, ರಾಹು, ಕೇತು, ಬುಧ, ಶುಕ್ರ, ಮಂಗಳ, ಗುರು ಮತ್ತು ಶನಿ. ಸೂರ್ಯ, ಚಂದ್ರ ಗ್ರಹಗಳೇ ಅಲ್ಲ. ಸೂರ್ಯ ನಕ್ಷತ್ರವಾದರೆ, ಚಂದ್ರ ಉಪಗ್ರಹ. ಇದರ ಜೊತೆಗೆ ರಾಹು ಕೇತುಗಳು ಅಸ್ತಿತ್ವದಲ್ಲೇ ಇಲ್ಲ. ಅವು ಅವರ ಕಲ್ಪನೆಯ ಕೃತಕ ಬಿಂದುಗಳಷ್ಟೆ. ಜ್ಯೋತಿಷ್ಯದ ಮೂಲ ಆಧಾರವಾಗಿರುವ ಒಂಭತ್ತು ಗ್ರಹಗಳಲ್ಲಿ ಎರಡು ಗ್ರಹಗಳೇ ಅಲ್ಲ ಮತ್ತೆರಡು ಇಲ್ಲವೇ ಇಲ್ಲ. ಮನುಷ್ಯನ ಎಲ್ಲಾ ಗುಣಗಳನ್ನು ಗ್ರಹಗಳಿಗೆ ಆರೋಪಿಸುವುದು ಹಾಸ್ಯಾಸ್ಪದ.

ಜ್ಯೋತಿಷ್ಯವು ರಾಹುಕಾಲ, ಗುಳಿಕಕಾಲ ಮತ್ತು ಯಮಗಂಡ ಕಾಲ – ಈ ಮೂರು ಅಂಶಗಳನ್ನು ಅಡಿಪಾಯವಾಗಿ ಹೊಂದಿದೆ. ರಾಹು ಕೇತುಗಳು ಅಸ್ತಿತ್ವದಲ್ಲೇ ಇಲ್ಲದಿರುವುದರಿಂದ, ಇವುಗಳಿಗೆ ಸಹಜವಾಗಿ ಯಾವ ಅರ್ಥವೂ ಇಲ್ಲ. ಜ್ಯೋತಿಷ್ಯದ ಪ್ರಕಾರ ರಾಹುಕಾಲದಲ್ಲಿ ಪ್ರಯಾಣ, ಮದುವೆ, ಧಾರ್ಮಿಕ ಕಾರ್ಯ ಈ ಬಗೆಯ ಶುಭಕಾರ್ಯಗಳನ್ನು ನಡೆಸಬಾರದು. ಈ ನಂಬಿಕೆ ನಿಜವಾದ ಪಕ್ಷದಲ್ಲಿ, ರಾಹುಕಾಲದಲ್ಲಿ ಹೊರಟ ವಿಮಾನಗಳು, ರೈಲುಗಳು, ಬಸ್ಸುಗಳು ಅಪಘಾತಕ್ಕೆ ಒಳಗಾಗಬೇಕು. ನ್ಯೂಯಾರ್ಕ್, ಶಿಕಾಗೋ, ಲಂಡನ್‌ಗಳಂತಹ ವಿಮಾನ ನಿಲ್ದಾಣಗಳಲ್ಲಿ ಯಾವಾಗಲೂ ವಿಮಾನಗಳು ಬಂದು ಹೋಗುತ್ತಿರುತ್ತವೆ. ಅವುಗಳು ರಾಹುಕಾಲವನ್ನು ತಪ್ಪಿಸಲು ಕಾಯುವುದಿಲ್ಲ. ಅಲ್ಲಿ ರೈಲು ಹೊರಡುವ ಸಮಯ ನಿಗದಿಪಡಿಸಲು ಜ್ಯೋತಿಷ್ಯಕ್ಕೆ ಮೊರೆಹೋಗುವುದಿಲ್ಲ.

ಜ್ಯೋತಿಷ್ಯಗಳ ಭವಿಷ್ಯವಾಣಿಯು ಓದಲು ತಮಾಷೆಯಾಗಿರುತ್ತದೆ. ಅಡ್ಡಗೋಡೆಯ ಮೇಲೆ ದೀಪವಿಟ್ಟಂತೆ ಇದ್ದು, ಒಂದಕ್ಕಿಂತ ಹೆಚ್ಚು ಅರ್ಥವನ್ನು ಕೊಡುತ್ತವೆ. ಉದಾಹರಣೆಗೆ, 'ಲಾಟರಿಯಲ್ಲಿ ಜಯ' ಎಂದಿರುತ್ತದೆ. ಕೇವಲ ೧೦/- ರೂ.

### ಮೈಕೇಲ್ ಜಾಕ್ಸನ್‌ಗೆ ನಮನ

ನದಿಗೆ ನೀರಿನ ಮೈ ಬರಿಯ ಬಿಂಬ ಪ್ರತಿಬಿಂಬಗಳೆ;
ಕಾಲದ ನಿರಂತರತೆಯಲ್ಲಿ ನೀರಿನಾಹ್ಲಾದದ ಬದುಕು-
ಕತ್ತಲು ಕೂಡ ಗಂಡು-ಹೆಣ್ಣಿನ ಸೆಳೆತದ ಸುಳಿಗಾಳಿಯಲ್ಲಿ
ಮುಗಿಲಚಿತ್ತಾರಗಳ ರಂಗೋಲಿರಚನೆ ಸಂಗೀತದಲ್ಲಿ–

ಋತುಮಾನಗಳ ಮುದ್ದುಮಂಗಳ ಗೀತೆ ಹರಿದಾಡವಲ್ಲಿ
ನದಿಯ ಮಕ್ಕಳ ಕುಣಿಸಿ ಬಿತ್ತನೆಯ ಸೆಳೆತ ನೆಲಮುಗಿಲು-
ಕೂಡಿ ಬದುಕರಳಿ ಹೂ-ಹಣ್ಣು, ಸಂತಾನ ಸುಳಿವು ಮೌನದಲ್ಲಿ
ಹರಿದಾಡುವುದು ಹಸಿರು ಸುಳಿದಾಡುವುದು ಗಾಳಿ ನಲಿದಾಡಿ
ಭೂತವರ್ತಮಾನಗಳ ಹೆಣೆದು ಕರೆಯುವುದು ಹೆಣ್ಣಿನ ಕಣ್ಣು-
ಕಿವಿತುಂಬಿ ಕಣ್ಣು ಮನ ಸಂಗೀತವಾಗಿ ಕುಣಿವುದಲೆಯಲೆಯ ನಗೆ-
ಕರೆಯುವುದು ನೋವುಗಳು ಮಾಗಿ ಜೀವ ಸಂವೃದ್ಧಿಯಾಗಿ
ಇಲ್ಲಿ ಹುಟ್ಟಿದರು ದೇವರು ದಿಂಡರು (ರಾಗಿ) ಮೊಳೆತು ಅನುರಾಗ-
ವಾಗಿ ಬೆಳಕು ಸಾರ್ಥಕತೆಯಲ್ಲಿ ಇತಿಹಾಸ ಪುಟ ಪುಟಗಳಲ್ಲಿ
ಎಲ್ಲ ಕತೆ-ಕಾರ್ಪಣ್ಯ ಜೀವಂತವಾಗಿ ಮೃದಂಗ ನುಡಿಯುವಲ್ಲಿ
'ಮೈಕೇಲ್' ಎಂಬ ಸಂಗೀತ ಮಾನವತೆ ಹರಿವ ನದಿಯಾಗಿ
ಪ್ರಕೃತಿ ಮಡಿಲಲ್ಲಿ ನಗುವ ಹಸುಗೂಸು ಕಾಣುತಿರುವಲ್ಲಿ
ನಾಡಿನುಡಿ ಸಂಗೀತವಾಗಿ ಹರಿದ ಶತಮಾನಗಳ ಓಟದಲ್ಲಿ

*ಕ. ವೆಂ. ರಾಜಗೋಪಾಲ*

*(ನಾದದ ನದಿಯೊಂದು ಹರಿದ್ಹಂಗ - ದ. ರಾ. ಬೇಂದ್ರೆ)*

ಬಂದಿರುತ್ತದೆ. ಧನಪ್ರಾಪ್ತಿ ಇದೆ ಎಂದಾಗ, ೧ನೇ ತಾರೀಖಿನ ಸಂಬಳ ಕೈಯಲ್ಲಿ ಇದ್ದೇ ಇರುತ್ತದೆ. ನನ್ನ ಸ್ನೇಹಿತರೊಬ್ಬರ ಶ್ರೀಮತಿ ಜ್ಯೋತಿಷ್ಯವನ್ನು ತುಂಬಾ ನಂಬಿದ್ದರು. ಒಂದು ದಿನ ಆಕೆಯ ಗಂಡನ ಭವಿಷ್ಯದಲ್ಲಿ ಪರಸ್ತ್ರೀ ಸಖ್ಯವಿದೆ ಎಂದು ಓದಿದಾಗ ಕೆಂಡಮಂಡಲವಾಗಿ ಅಂದಿನಿಂದ ಭವಿಷ್ಯವಾಣಿಯನ್ನು ಓದುವುದನ್ನೇ ತ್ಯಜಿಸಿದರು.

ಜ್ಯೋತಿಷ್ಯದ ಬಗ್ಗೆ ಹಲವಾರು ಜನ ಮಹಾನ್ ವ್ಯಕ್ತಿಗಳು ತಿಳಿಸಿರುವ ಅಭಿಪ್ರಾಯ ಮಹತ್ವಪೂರ್ಣವಾಗಿದೆ. ಬುದ್ಧನು ತನ್ನ ವಿನಯ ಪೀಟಿಕಾ ಗ್ರಂಥದಲ್ಲಿ ಯಾರು ನಕ್ಷತ್ರಗಳ ಲೆಕ್ಕಾಚಾರದಂತಹ ತಂತ್ರಗಳಿಂದ ಜೀವನ ನಡೆಸುತ್ತಾರೋ ಇವರಿಂದ ದೂರವಿರಬೇಕೆಂದು ಎಚ್ಚರಿಸುತ್ತಾನೆ. ಸಂಪ್ರದಾಯವಾಗಲಿ ಅಥವಾ ಯಾರೋ ಹೇಳಿದ್ದಾರೆ ಎಂದಾಗಲಿ ಅಥವಾ ನೀನೇ ಊಹಿಸಿಕೊಂಡಿದ್ದಿ ಎಂಬ ಮಾತ್ರಕ್ಕಾಗಲಿ ಯಾವುದನ್ನೂ ನಂಬದಿರು, ಯಾವುದು ನಿನ್ನ ನಂಬಿಕೆಯಿಂದ ಸಿದ್ಧವಾಗುವುದೋ ಅದನ್ನು ಮಾತ್ರ ನಂಬು ಎನ್ನುತ್ತಾನೆ ಬುದ್ಧ.

ಸ್ವಾಮಿ ವಿವೇಕಾನಂದರು ಜ್ಯೋತಿಷ್ಯದ ಬಗ್ಗೆ ಕಟುವಾದ ಅಭಿಪ್ರಾಯಪಡುತ್ತಾರೆ. ''ನಕ್ಷತ್ರಗಳ ಪ್ರಭಾವ ನನ್ನ ಮೇಲೆ ಆಗುವುದಾದರೆ ಆಗಲಿ, ಅದು ನನ್ನ ಜೀವನದ ಮೇಲೆ ಪ್ರಭಾವ ಬೀರಿದರೆ ಅದಕ್ಕೆ ಯಾವ ಬೆಲೆಯೂ ಇಲ್ಲ. ಜ್ಯೋತಿಷ್ಯ ಮತ್ತಿತರ ಸಂಗತಿಗಳು ಸಾಮಾನ್ಯವಾಗಿ ದುರ್ಬಲ ಮನಸ್ಸಿನ ಚಿಹ್ನೆಗಳು; ಅಂತಹವುಗಳು ಬದುಕಿನಲ್ಲಿ ಪ್ರಾಮುಖ್ಯ ಪಡೆದುಕೊಂಡ ಕೂಡಲೇ ವೈದ್ಯರನ್ನು ಕಂಡು ಉತ್ತಮ ಆಹಾರ ಮತ್ತು ವಿಶ್ರಾಂತಿಯನ್ನು ತೆಗೆದುಕೊಳ್ಳುವುದು ಒಳ್ಳೆಯದು'' ಎಂಬುದು ವಿವೇಕಾನಂದರ ಅಭಿಪ್ರಾಯ.

ಬಸವೇಶ್ವರರು ''ಶಾಸ್ತ್ರಕ್ಕೆ ನಿಗಳ ನಿಕ್ಕುವೆ, ತರ್ಕದ ಬೆನ್ನ ಬಾರ ನೆತ್ತುವೆ, ಆಗಮದ ಮೂಗು ಕೊಯ್ಯುವೆ'' ಎಂದು ಹೇಳಿದ ಮಾತುಗಳನ್ನು ಅವರ ಅನುಯಾಯಿಗಳು ಕೇಳಿದ್ದರೆ ದೇಶಕ್ಕೆ ಅಷ್ಟಿಷ್ಟು ಒಳಿತಾಗುತ್ತಿತ್ತು.

ಯಾವ ಕಾಲದ ಶಾಸ್ತ್ರವೇನು ಹೇಳಿದರೇನು ?
ಎದೆಯ ದನಿಗೂ ಮಿಗಿಲು ಶಾಸ್ತ್ರವಿಹುದೇನು ?
ಎಂದೋ ಮನು ಬರೆದಿಟ್ಟುದಿಂದೆಮಗೆ ಕಟ್ಟೇನು ?

ಹಳೆ ಎಲೆ ಉದುರಬೇಕು, ಹೊಸ ಚಿಗುರು ಅರಳಬೇಕು – ಇದು ಜೀವಂತ ವೃಕ್ಷದ ಆರೋಗ್ಯದ ಸಲ್ಲಕ್ಷಣ. ಅಂತೆಯೇ ಒಂದು ರಾಷ್ಟ್ರದ ಸಂಸ್ಕೃತಿ ನವನವೋನ್ಮೇಷಶಾಲಿಯಾಗಿ ನಿತ್ಯ ಶಾಡ್ವಲವಾಗಿರಬೇಕಾದರೆ ಹಳೆಯ ಕೊಳೆಯೆಲ್ಲ ಕೊಚ್ಚಿಹೋಗಬೇಕಾದುದು ಅತ್ಯವಶ್ಯ.

ವಾಸ್ತು ಶಾಸ್ತ್ರ ಹೇಳುವವರಿಗೆ, ಜ್ಯೋತಿಷ್ಯ ಶಾಸ್ತ್ರ ಹೇಳುವ ಪಂಡಿತರಿಗೆ, ಸಂಪ್ರದಾಯವಾದಿಗಳಿಗೆ, ಆಧುನಿಕ ಹೈಟೆಕ್ ಪ್ರಪಂಚದ, ವಿಜ್ಞಾನ ತಂತ್ರಜ್ಞಾನದ ಕೊಡುಗೆಗಳಾದ ಕಂಪ್ಯೂಟರ್, ಟೀವಿ, ಫ್ರಿಜ್, ವಾಷಿಂಗ್‌ಮಷೀನ್ ಇಂತಹ ಎಲ್ಲ ಐಷಾರಾಮಿ ವಸ್ತುಗಳು ಬೇಕು, ಅಷ್ಟೇ. ಅವರ ಹೈಟೆಕ್ ಮನೆಗಳಲ್ಲಿ ಕುಳಿತು ಅವರು ಚಿಂತಿಸುವುದು ಮತ್ತೆ ನಮ್ಮನ್ನು ಶಿಲಾಯುಗಕ್ಕೆ ತಳ್ಳುವುದೇ ಆಗಿರುತ್ತದೆ.

ಬೆಕ್ಕು ಅಡ್ಡ ಬಂದರೆ ಅಪಶಕುನ ಎನ್ನುವಂತೆಯೇ ನರಿ ಮುಖ ನೋಡಿದರೆ ಶುಭಶಕುನ ಎನ್ನುವ ನಾವೆಲ್ಲರೂ ಬೆಕ್ಕು ಎಷ್ಟೇ ಸಲ ಅಡ್ಡ ಬಂದರೂ ಅದನ್ನು ಸಾಕುಪ್ರಾಣಿಯಾಗಿ ಸ್ವೀಕರಿಸಿದ್ದೇವೆ. ನರಿ ಮುಖ ನೋಡಿದರೆ ಒಳ್ಳೆಯದಾಗುತ್ತದೆ ಎನ್ನುವ ನಾವು ಅದನ್ನು ಮನೆಯಲ್ಲಿ ಕಟ್ಟಿಕೊಂಡು ಮುಖ ನೋಡಲು ಆಗುವುದಿಲ್ಲ. ಸದ್ಯ, ಈ ಬಗ್ಗೆ ನಮ್ಮ ಸಂಪ್ರದಾಯಸ್ಥರು ಫರ್ಮಾನು ಅಥವಾ ಫತ್ವಾ ಹೊರಡಿಸಿಲ್ಲವಲ್ಲ ಎಂದು ಸಮಾಧಾನಪಟ್ಟುಕೊಳ್ಳಬಹುದು.

ಮಗು ಸಾಮಾಜೀಕರಣ ಹೊಂದುವಾಗ ಮೂಢ ನಂಬಿಕೆಗಳನ್ನು ಮೈಗೂಡಿಸಿಕೊಂಡೇ ಬೆಳೆಯುತ್ತದೆ. ಆದ್ದರಿಂದ ಶಾಲಾ ಕಾಲೇಜುಗಳಲ್ಲಿ, ವಿದ್ಯಾರ್ಥಿಗಳಲ್ಲಿ ಬೆಳೆದ ಮೂಢನಂಬಿಕೆಗಳನ್ನು ತೊಲಗಿಸಲು ಶಿಕ್ಷಕರು ಮಕ್ಕಳಲ್ಲಿ ವೈಜ್ಞಾನಿಕ ಮನೋಭಾವನೆಯನ್ನು ಬೆಳೆಸಬೇಕು. ಪ್ರಗತಿಪರ ಚಿಂತನೆಗಳಿಂದ ಯುವಪೀಳಿಗೆಯಲ್ಲಿ ಕುತೂಹಲ, ಜ್ಞಾನ ದಾಹ ಹಾಗೂ ವೈಚಾರಿಕತೆಗಳನ್ನು ಬೆಳೆಸಬೇಕಿದೆ. ಆತ್ಮಶೋಧನೆ, ಜ್ಞಾನಸಂಪಾದನೆ, ಜ್ಞಾನಪ್ರಸಾರಗಳಂತಹ ಚಟುವಟಿಕೆಗಳು, ನಿರಂತರವಾಗಿ ಸಾಗಬೇಕಾಗಿದೆ. ಈ ನಿಟ್ಟಿನಲ್ಲಿ ಶಿಕ್ಷಕರ ಪಾತ್ರ ಅತ್ಯಮೂಲ್ಯವಾಗಬೇಕಾಗಿದೆ.

**ತಂಬ್ರಹಳ್ಳಿ ರಾಮನಮಲಿ**

ತಂಬ್ರಹಳ್ಳಿ

## ನಯವಂಚನೆಯ ಸೂರ್ಯಸತ್ಯ

ದೇವರು ಮನುಷ್ಯನನ್ನು ಸೃಷ್ಟಿಸಲಿಲ್ಲ; ಆದರೆ ಮನುಷ್ಯ ಮಾತ್ರದವನೇ ದೇವರು-ಧರ್ಮಗಳನ್ನು ಸೃಷ್ಟಿಸಿದ, ಎಂಬುದು ಸತ್ಯ. ಅವತಾರ ಪುರುಷ ಶ್ರೀಕೃಷ್ಣನೇ ಗೀತೆಯನ್ನು ಅರ್ಜುನನಿಗೆ ಉಪದೇಶ ಮಾಡಿದ ಎಂದಾಗ ಹಾಗೆಂದು ಕಲ್ಪಿಸಿ ಬರೆದವನು ಯಾರು? ವ್ಯಾಸನೇ? ವ್ಯಾಸನೆಂದರೆ ಯಾರು? ವ್ಯಾಸನೂ ಒಬ್ಬ ಮನುಷ್ಯ ತಾನೆ? ಹಾಗೆಂದರೆ ಅವತಾರಪುರುಷನ ಸೃಷ್ಟಿ ವ್ಯಾಸನಿಂದಾಯಿತಷ್ಟೆ. ಹಾಗೆ ನೋಡಿದರೆ, ನಮ್ಮ ಸೃಷ್ಟಿ ಪುರಾಣಗಳೆಲ್ಲವೂ ಮನುಷ್ಯಕೃತವೇ. ಮನುಷ್ಯ ಈ ದೇವರ ಸೃಷ್ಟಿಗೆ ಯಾಕೆ ಕೈ ಹಾಕಿದ? ಮೊದಲಿಗೆ ಅದು ತನ್ನೊಬ್ಬನ ಮನಃಶಾಂತಿಗೇ ಇರಬಹುದು; ಅದು ಆಮೇಲೆ ಶೋಷಕರ ಅಸ್ತ್ರವಾಯಿತು; ಪರಾವಲಂಬಿಗಳ ಜೀವನೋಪಾಯಕ್ಕೆ ಮಾರ್ಗವಾಯಿತು.

ಪ್ರಸ್ತುತ ವಿ. ಎಸ್. ಲಕ್ಷ್ಮೀನಾರಾಯಣರ 'ಧರ್ಮ ಮತ್ತು ರಾಜಕೀಯ' ಎಂಬ ಲೇಖನ (ಜೂನ್ ೨೦೦೯) ಇಂಥ ಒಂದು ಸೂರ್ಯಸತ್ಯವನ್ನು ಅಸಾಧಾರಣ ಎದೆಗಾರಿಕೆಯಿಂದ ಮಂಡಿಸುತ್ತಿದೆ.

ಸೃಷ್ಟಿಮಾಡಿ ಸೃಷ್ಟಿಕರ್ತ ಬ್ರಹ್ಮನ ಜವಾಬ್ದಾರಿ ಮುಗಿಯಿತು. ಉಳಿದಂತೆ ಸ್ಥಿತಿ ಹಾಗೂ ಲಯಗಳು ವಿಷ್ಣು ಹಾಗೂ ಶಿವರ ಜವಾಬ್ದಾರಿ. 'ಅಧಿಕಾರ ಮತ್ತು ಯಥಾಸ್ಥಿತಿ ವಾದವನ್ನು ಪ್ರತಿನಿಧಿಸುವ ವಿಷ್ಣು ಮತ್ತು ಅವನ ಅನುಚರರ ಪೂಜಕರು ಹಾಗೂ ಕೃಷಿ, ಬಡತನ ಮತ್ತು ಸಾಂಸ್ಕೃತಿಕ ಸೃಜನಶೀಲತೆಗಳನ್ನು ಪ್ರತಿನಿಧಿಸುವ ಶಿವ ಮತ್ತು ಅವನ ಅನುಚರರ ಪೂಜಕರು ಇಲ್ಲಿ ಒಂದುಗೂಡುತ್ತಾರೆ. ಸಂಘ ಪರಿವಾರಕ್ಕೆ ತನ್ನ ಗುಪ್ತ ಅಜೆಂಡಾವನ್ನು ಹರಡಲು ಇದು ಹೇಳಿಮಾಡಿಸಿದ ಫಲವತ್ತಾದ ಕ್ಷೇತ್ರ. ಜಗದ್ಗುರುಗಳು, ಸಾಧು ಸಂತರು, ಮಹಾತ್ಮರು, ಪುಣ್ಯಕ್ಷೇತ್ರಗಳ ಧರ್ಮಾಧಿಕಾರಿಗಳು ಸಂಘಪರಿವಾರವನ್ನು ಆಕರ್ಷಿಸಲು ಇದು ಬಹು ಮುಖ್ಯ ಕಾರಣ. ಸಂಘಪರಿವಾರದ ಸರ್ಕಾರಗಳು ಧಾರ್ಮಿಕ ಕ್ಷೇತ್ರಗಳಿಗೆ, ಪುಣ್ಯಕ್ಷೇತ್ರಗಳಿಗೆ ಅಭಿವೃದ್ಧಿಯ ಹೆಸರಿನಲ್ಲಿ ಕೊಡಮಾಡುವ ಹಣ, ಭೂಮಿ ಮುಂತಾದ ವಿಶೇಷ ಸವಲತ್ತುಗಳು ಕೇವಲ ಧರ್ಮಾಭಿಮಾನದಿಂದ ಕೊಟ್ಟ ಸವಲತ್ತುಗಳಲ್ಲ, ಆ ಕ್ಷೇತ್ರಗಳ ವರ್ತುಲದೊಳಕ್ಕೆ ಬರುವ ಜನರನ್ನು ತಮ್ಮ ತೆಕ್ಕೆಯೊಳಕ್ಕೆ ತೆಗೆದುಕೊಳ್ಳುವ ಗೋಮುಖವ್ಯಾಘ್ರದ ರಾಜಕೀಯಕ್ಕಾಗಿ. ಅದರ ನೇರ ಫಲಾನುಭವಿಗಳು ಮತ್ತೆ ಸಂಘ ಪರಿವಾರಕ್ಕೆ ಸೇರಿದ ಅಥವಾ ಸಮರ್ಥಿಸುವ ಗುತ್ತಿಗೆದಾರರು ಮತ್ತು ವ್ಯಾಪಾರಿಗಳು. ಈ ವಿಷವರ್ತುಲದ ನಯವಂಚನೆಯ ವಿರಾಟ್ ಸ್ವರೂಪವನ್ನು ವಿ. ಎನ್. ಲಕ್ಷ್ಮೀನಾರಾಯಣರು ತಮ್ಮ 'ಧರ್ಮ ಮತ್ತು ರಾಜಕೀಯ' ಎಂಬ ಲೇಖನದಲ್ಲಿ ತೆರೆದಿಡುತ್ತಾರೆ.

ಬೆಂಗಳೂರು **ಪ್ರೊ|| ಶಿವರಾಮಯ್ಯ**

## ನಮನ

ಸಂಗೀತ ವಿದುಷಿ ಶ್ರೀಮತಿ ಗಂಗೂಬಾಯಿ ಹಾನಗಲ್ ನಿಧನರಾಗಿದ್ದಾರೆ (೫.೩.೧೯೧೩ – ೨೧.೭.೨೦೦೯). ಜನವರಿ ೨೦೦೯ರ 'ಹೊಸತು' ವಿಶೇಷ ಸಂಚಿಕೆಯಲ್ಲಿ ಶ್ರೀ ವಿಜಯ ವಾಮನ ಸಿದ್ಧಪಡಿಸಿದ ಶ್ರೀಮತಿ ಗಂಗೂಬಾಯಿ ಅವರ ಸಂದರ್ಶನ ಲೇಖನ ಪ್ರಕಟವಾಗಿತ್ತು. ಶ್ರೀಮತಿ ಗಂಗೂಬಾಯಿ ಹಾನಗಲ್ ಅವರಿಗೆ 'ಹೊಸತು'ವಿನ ಗೌರವಪೂರ್ವಕ ನಮನಗಳು ಸಲ್ಲುತ್ತವೆ.

## ಸಜ್ಜನ ಅನಿವಾಸಿ ಭಾರತೀಯರು

ಸಜ್ಜನ ಅನಿವಾಸಿ ಭಾರತೀಯರು,
ಕ್ರೈಸ್ತನಾಡಿನಲ್ಲಿ ಬದುಕುವರು;
ಆದರೆ ಭಾರತೀಯ ಕ್ರೈಸ್ತರು
ಏಕೆ ಏಟಿಗಷ್ಟೇ ಅರ್ಹರು
ಎಂಬುದನ್ನು ಚೆನ್ನಾಗಿ ಬಲ್ಲರು.

ಸಜ್ಜನ ಅನಿವಾಸಿ ಭಾರತೀಯರು,
ಅರಬೀನೆಲದಲ್ಲಿ ಅಭಿವೃದ್ಧಿಹೊಂದುವರು;
ಆದರೆ ಬಡ ಭಾರತೀಯ ಮುಸ್ಲಿಮರು
ಭಾರತದೇಶದಲ್ಲಿ ನಂಬಿಕೆಗೆ ಅನರ್ಹರು.

ಸಜ್ಜನ ಅನಿವಾಸಿ ಭಾರತೀಯರು,
ವಿದೇಶದಲ್ಲಿ ಹಣಹೂಡುವರು;
ಭಾರತದಲ್ಲಿ ಹಣವಿನಿಯೋಗಿಸರು,
ತಮ್ಮಿಷ್ಟ ದೇವಳಗಳಿಗಷ್ಟೇ ಸುರಿಯುವರು.

ಸಜ್ಜನ ಅನಿವಾಸಿ ಭಾರತೀಯರು,
ಹೃತ್ಪೂರ್ವಕ ಭಾರತೀಯರು;
ಆದರೆ ಭಾರತದಲ್ಲಿ ಬಾಳಬಯಸರು,
ಡಾಲರನ್ನೇ ಹೆಚ್ಚು ಒಲಿವರು.

ಮೂಲ : ಬದರಿ ರೈನಾ

ಕನ್ನಡಕ್ಕೆ : ಬಾಲಸುಬ್ರಹ್ಮಣ್ಯ ಕಂಜರ್ಪಣೆ, ಮಡಿಕೇರಿ




# ಕೇಂದ್ರ ಬಜೆಟ್

**ಕೇಂ**ದ್ರ ಹಣಕಾಸು ಸಚಿವರಾದ ಪ್ರಣಬ್ ಮುಖರ್ಜಿ ಅವರು ಜುಲೈ ೬, ೨೦೦೯ರಂದು ಮಂಡಿಸಿರುವ ೨೦೦೯-೧೦ರ ಸಾಲಿನ ಬಜೆಟ್‌ಅನ್ನು ಹಲವಾರು ಬಗೆಯಲ್ಲಿ ಅರ್ಥೈಸಲಾಗಿದೆ. ಕೆಲವರು ಅದೊಂದು ಜನಪ್ರಿಯ ಬಜೆಟ್ ಎಂದು ಬಣ್ಣಿಸಿದರೆ, ಇನ್ನು ಕೆಲವರು ಅದು ಬಡವರ ಪರವಾಗಿದೆ ಎಂದು ಅರ್ಥೈಸಿದ್ದಾರೆ. ಇನ್ನೂ ಕೆಲವರು ಅದನ್ನು ಶ್ರೀಮಂತರಿಗಾಗಿಯೇ ಸಿದ್ಧಪಡಿಸಿರುವ ಬಜೆಟ್, ಅಷ್ಟೆ ಎಂದು ವ್ಯಾಖ್ಯಾನಿಸಿದ್ದಾರೆ. ಅದೇ ವೇಳೆ ಈ ಬಜೆಟ್ ನೀರಸವಾಗಿದೆ, ಅದರಲ್ಲಿ ಯಾವುದೇ ಹುರುಳಿಲ್ಲ ಎನ್ನುವವರೂ ಇದ್ದಾರೆ. ಹೀಗೆ ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ವ್ಯಾಖ್ಯಾನಿಸುವುದನ್ನು ನೋಡಿದರೆ ನನಗೆ ಏಳು ಜನ ಕುರುಡರು ಆನೆಯ ದೇಹದ ಪ್ರತಿಯೊಂದು ಭಾಗವನ್ನು ಮುಟ್ಟಿ ತಮ್ಮ ಅನುಭವಕ್ಕೆ ತಕ್ಕಂತೆ ಅವುಗಳನ್ನು ವಿವರಿಸುವ ಕತೆ ನೆನಪಿಗೆ ಬರುತ್ತದೆ.

ಯಾವುದೇ ಒಂದು ರಾಷ್ಟ್ರೀಯ ಬಜೆಟ್‌ಅನ್ನು ಬಿಡಿಬಿಡಿಯಾಗಿ ವಿಂಗಡಿಸಿ ಅದರ ಮೌಲ್ಯಮಾಪನ ಮಾಡುವುದು ಸರಿಯಾದ ವಿಧಾನವಲ್ಲ. ಅದರ ಒಟ್ಟಾರೆಯ ಉದ್ದೇಶಗಳನ್ನು ಇಡಿಯಾಗಿ ಅಥವಾ ಸಮಗ್ರವಾಗಿ ನೋಡುವ ಅಗತ್ಯವಿದೆ. ಬಜೆಟ್ ಎಂಬುದು ದೇಶದ ಅಭಿವೃದ್ಧಿಗಾಗಿ ನಿರೂಪಿಸುವ, ಬೃಹತ್ ಆರ್ಥಿಕ ಧ್ಯೇಯೋದ್ದೇಶಗಳನ್ನು ಸಾಧಿಸುವ, ಎಲ್ಲರಿಗೂ ಉದ್ಯೋಗಾವಕಾಶಗಳು ಮತ್ತು ನೈತಿಕ ದೃಷ್ಟಿಯಿಂದ ಸಲ್ಲಬೇಕಾದ ನ್ಯಾಯವನ್ನು ಒದಗಿಸುವ ಹಾಗೂ ಆಂತರಿಕ ಮತ್ತು ನಮ್ಮ ವಿದೇಶೀ ವ್ಯವಹಾರಕ್ಕೆ ಸಂಬಂಧಪಟ್ಟಂತೆ ಸ್ಥಿರತೆಯನ್ನು ಗಟ್ಟಿಗೊಳಿಸುವ ಸಲುವಾಗಿ ಸರ್ಕಾರವು ಒಂದು ಅವಧಿಗೆ ಮಾತ್ರ ಸೀಮಿತಗೊಂಡಂತೆ ಜನತೆಯ ಮುಂದಿಡುವ ಒಂದು ಸಾಧನವಷ್ಟೆ. ಇವುಗಳಲ್ಲಿ ಯಾವ ಅಂಶಕ್ಕೆ ವಿತ್ತ ಸಚಿವರು ಆದ್ಯತೆ ನೀಡುತ್ತಾರೆ ಎಂಬುದು ಅಂದಂದಿನ ಸಂದರ್ಭವನ್ನು ಹೊಂದಿಕೊಂಡಿರುತ್ತದೆ. ಜಾಗತಿಕ ಮತ್ತು ನಮ್ಮದೇ ರಾಷ್ಟ್ರದ ಆರ್ಥಿಕತೆಗಳು ತೀವ್ರ ಮುಗ್ಗಟ್ಟಿಗೆ ಸಿಲುಕಿಕೊಂಡಿರುವ ಹಾಗೂ ಶ್ರೀಸಾಮಾನ್ಯನ (ಆಮ್ ಆದ್ಮಿ) ಜೀವನಮಟ್ಟಕ್ಕೆ ಬಂದೊದಗಿರುವ ಬೆದರಿಕೆಯ ಸಂದರ್ಭದಲ್ಲಿ ವಿತ್ತ ಸಚಿವ ಪ್ರಣಬ್ ಮುಖರ್ಜಿ ಅವರು ಅಭಿವೃದ್ಧಿ ಪ್ರಕ್ರಿಯೆಯನ್ನು ಚುರುಕುಗೊಳಿಸುವುದಕ್ಕೆ ಮತ್ತು ಅದೇ ವೇಳೆ ಶ್ರೀಸಾಮಾನ್ಯನಿಗೆ ರಕ್ಷಣೆ ನೀಡುವ ಅಂಶಗಳಿಗೆ ತಮ್ಮ ಬಜೆಟ್‌ನಲ್ಲಿ ಆದ್ಯತೆ ನೀಡಿರುವುದು ಸ್ಪಷ್ಟ. ಎಂದೇ ಬಜೆಟ್‌ನಲ್ಲಿ ಒಟ್ಟಾರೆಯಾಗಿ ಈ ಎರಡು ಉದ್ದೇಶಗಳ ಕುರಿತಂತೆ ಹೆಚ್ಚು ಗಮನ ನೀಡಲಾಗಿದೆ.

ಯಾವುದೇ ಒಂದು ಆರ್ಥಿಕ ವ್ಯವಸ್ಥೆಯು ಮುಗ್ಗಟ್ಟಿಗೆ ಸಿಕ್ಕಿ ನಲುಗುತ್ತಿರುವ ಸಂದರ್ಭದಲ್ಲಿ ಎಲ್ಲೆಡೆ ದೊಡ್ಡ ಪ್ರಮಾಣದಲ್ಲಿ ಬಂಡವಾಳ ಹೂಡಿಕೆಗೆ ಪ್ರೇರಣೆ ನೀಡುವುದು ಅರ್ಥಶಾಸ್ತ್ರದಲ್ಲಿ ಒಪ್ಪಿತ ಕ್ರಮವೇ ಆಗಿದೆ. ಈ ಬಾರಿಯ ೨೦೦೯-೧೦ರ ಸಾಲಿನ ಬಜೆಟ್ ಅಂತಹ ಪ್ರೇರಣೆ ನೀಡಲಿದೆ ಎಂದು ನಿರೀಕ್ಷಿಸಬಹುದಾಗಿದೆ.

(ಅ) ಬೇಡಿಕೆ ಹೆಚ್ಚಲು ತೆರಿಗೆ ರಿಯಾಯಿತಿ ನೀಡುವುದು ಮತ್ತು (ಆ) ಜಾಗತಿಕ ಆರ್ಥಿಕ ಮುಗ್ಗಟ್ಟಿನಿಂದಾಗಿ ಭಾರತ ಆರ್ಥಿಕತೆಯ ಮೇಲೆ ಆಗಿರುವ ದುಷ್ಪರಿಣಾಮವನ್ನು ಎದುರಿಸುವ ಸಲುವಾಗಿ ಸಾರ್ವಜನಿಕ ಯೋಜನೆಗಳಿಗಾಗಿ ಹೆಚ್ಚು ಖರ್ಚುವೆಚ್ಚಗಳನ್ನು ಮಾಡುವುದು – ಈ ಎರಡೂ ಕ್ರಮಗಳನ್ನು ಕೈಗೊಂಡು ಹಣ ಹೂಡಿಕೆಯನ್ನು ಪ್ರೋತ್ಸಾಹಿಸಲಾಗುವುದೆಂದು ವಿತ್ತ ಮಂತ್ರಿಯವರು ಸೂಚಿಸಿದ್ದಾರೆ. ಈ ಉದ್ದೇಶ ಪೂರ್ತೈಕೆಗಾಗಿ ಈ ಬಾರಿ ೧.೨ ಲಕ್ಷ ಕೋಟಿ ರೂ.ಗಳನ್ನು ವ್ಯಯಿಸಲಾಗುವುದು ಎಂದು ಘೋಷಿಸಿದ್ದಾರೆ. ಆದರೆ ಕೆಲವು ಚಿಂತಕರು ವೇತನ ಆಯೋಗದ ಶಿಫಾರಸ್ಸಿನ ಪ್ರಕಾರ ವಿತರಿಸಬೇಕಾದ ಮೊತ್ತ, ಹೆಚ್ಚುವರಿ ಬಡ್ಡಿ ಸಂದಾಯ, ರಾಜ್ಯಗಳಿಗೆ ನೀಡಬೇಕಾದ ಯೋಜನೆಯೇತರ ಅನುದಾನ, ಅಂತರ ರಾಷ್ಟ್ರೀಯ ಹಣಕಾಸು ಸಂಸ್ಥೆಗೆ ಪಾವತಿಸಬೇಕಾದ ವಂತಿಗೆ ಮತ್ತು ಸಾರ್ವಜನಿಕ ವಲಯದ ಸಂಸ್ಥೆಗಳಿಗೆ ಕೊಡಬೇಕಾಗಿರುವ ಸಾಲದ ಮೊತ್ತ – ಇವುಗಳೇ ಈ ಖರ್ಚುವೆಚ್ಚಗಳ ಬಹುಭಾಗದಷ್ಟಿವೆ ಎಂದು ವಾದವನ್ನು ಮುಂದಿಟ್ಟು ಯೋಜನಾ ವೆಚ್ಚವನ್ನು, ಒಟ್ಟಾರೆಯಾಗಿ ಬಂಡವಾಳ ಹೂಡಿಕೆಯನ್ನು ಉತ್ತೇಜಿಸಲು ಹಣವು ತಾನೆ ಎಲ್ಲಿದೆ, ಎಂದು ಪ್ರಶ್ನಿಸುತ್ತಾರೆ.

ಇಂತಹವರ ವಾದಸರಣಿಗೆ ತನ್ನದೇ ಆದ ತರ್ಕವಿದೆ. ಏಕೆಂದರೆ, ಕಾರ್ಪೊರೇಟ್ ಕಂಪನಿಗಳಿಗೆ ನೀಡಿರುವ ವರಮಾನ ತೆರಿಗೆ ಕಡಿತ, ಇನ್ನಿತರ ಉಪದ್ರವಕಾರಿ ತೆರಿಗೆಗಳನ್ನು ರದ್ದುಮಾಡಿರುವುದು, ಬಡ್ಡಿದರ ವ್ಯವಸ್ಥೆಯಲ್ಲಿ ಕೈಗೊಂಡಿರುವ ಕಡಿತ, ಕಾರ್ಮಿಕ ವಲಯದಲ್ಲಿ ತೆಗೆದುಕೊಳ್ಳಲಾಗುವ ಸುಧಾರಣೆಗಳು, ಸಾರ್ವಜನಿಕ ವಲಯದ ಸಂಸ್ಥೆಗಳಿಂದ ಬಂಡವಾಳ ಹಿಂತೆಗೆದುಕೊಳ್ಳುವ ಕ್ರಮ ಮತ್ತು ಆ ಸಂಸ್ಥೆಗಳಲ್ಲಿ ಖಾಸಗಿಯವರಿಗೆ ಬಂಡವಾಳ ಹೂಡಲು ನೀಡಲಿರುವ ಅವಕಾಶ – ಇಂತಹ ಹಲವಾರು ರಿಯಾಯಿತಿಗಳನ್ನು ನೀಡುವುದು ಹೆಚ್ಚಿನ ಬಂಡವಾಳ ಹೂಡಿಕೆಗೆ ಉತ್ತೇಜನ ನೀಡಿದಂತಾಗುತ್ತದೆ, ಅಷ್ಟೆ.

ಈ ವಿಧಾನವನ್ನನುಸರಿಸುವ ಬದಲು ಪ್ರಣಬ್ ಮುಖರ್ಜಿ ಅವರು ಹೆಚ್ಚಿನ ಬಂಡವಾಳ ಹೂಡಿಕೆಗೆ ಪ್ರೇರೇಪಿಸಲು ಪರ್ಯಾಯ ಮಾರ್ಗವೊಂದನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಅದು ಪಾರಂಪರಿಕವಾಗಿ ಅನುಸರಿಸಿಕೊಂಡು ಬರುತ್ತಿರುವ ಕೇನ್ಸಿಯನ್ ಮಾದರಿಯೇ ಆಗಿದೆ. ಕೇನ್ಸ್ ಹೇಳುವಂತೆ, ಯಾವುದೇ ಒಂದು ಆರ್ಥಿಕ ವ್ಯವಸ್ಥೆಯು ಇಳಿಮುಖ ಕಾಣುತ್ತಿರುವಾಗ, ಅಂತಹ ಪರಿಸ್ಥಿತಿಯನ್ನು ಎದುರಿಸಲು ಹೂಡಿಕೆದಾರರನ್ನು ಅವಲಂಬಿಸುವ ಬದಲು ಸರ್ಕಾರ/ಪ್ರಭುತ್ವವು ಸಾರ್ವಜನಿಕವಾಗಿ ಹೆಚ್ಚಿನ ಮೊತ್ತವನ್ನು ಖರ್ಚುಮಾಡಬೇಕು. ಎಂದರೆ, ವ್ಯಾಪಕವಾಗಿ ಸೇತುವೆ, ರಸ್ತೆಗಳು, ಹೆದ್ದಾರಿಗಳ ನಿರ್ಮಾಣ, ನದಿಗಳು ಮತ್ತು ಕೆರೆಗಳಿಂದ ಹೂಳು ತೆಗೆಯುವುದು, ಇವೇ ಮೊದಲಾದ ಯೋಜನೆಗಳನ್ನು ರೂಪಿಸಿ ಬಳಕೆದಾರರು, ಬಡಜನತೆ ಮತ್ತು ಜನಸಾಮಾನ್ಯರಿಗೆ ಉದ್ಯೋಗಾವಕಾಶಗಳನ್ನು ಕಲ್ಪಿಸಿಕೊಟ್ಟು ಅವರ

ಕೈಯಲ್ಲಿ ಒಂದಷ್ಟು ಹಣ ಇರುವಂತೆ ಏರ್ಪಾಟುಮಾಡಬೇಕು. ಇಂತಹ ಕ್ರಮಗಳಿಂದಾಗಿ ಜನರು ಸಾಕಷ್ಟು ಖರ್ಚುಮಾಡಲು ಸಮರ್ಥರಾಗುತ್ತಾರೆ. ಜೊತೆಗೆ, ಸರಕು ಹಾಗೂ ಸೇವೆಗಳಿಗೆ ಬೇಡಿಕೆಯೂ ಹೆಚ್ಚುತ್ತದೆ.

ಅಂತಹ ಬೆಳವಣಿಗೆಯಿಂದಾಗಿ ಬಂಡವಾಳಿಗರು ಮತ್ತು ವ್ಯಾಪಾರಸ್ಥರು ಹೆಚ್ಚು ಹಣ ಹೂಡಲು ಮುಂದೆ ಬಂದು ಅಭಿವೃದ್ಧಿ ಚುರುಕುಗೊಳ್ಳುವಂತಹ ಮಾನಸಿಕ ವಾತಾವರಣ ಉಂಟಾಗುತ್ತದೆ. ವಿತ್ತ ಸಚಿವರು ಈ ವಿಧಾನವನ್ನೇ ಆಯ್ಕೆ ಮಾಡಿಕೊಂಡಿದ್ದಾರೆ. ಇತ್ತೀಚೆಗೆ ಸರ್ಕಾರಗಳು ಇಂತಹ ಕ್ರಮಗಳಿಗೆ ಮೊರೆಹೋಗುವುದು ಒಂದು ಫ್ಯಾಷನ್ ಆಗಿಬಿಟ್ಟಿದೆ.

ಆದ್ದರಿಂದ, ಜನರು ಒಂದಷ್ಟು ಹಣ ಹೆಚ್ಚು ಸಂಪಾದಿಸಲಿ ಎಂಬ ದೃಷ್ಟಿಯಲ್ಲಿ, ಅವರು ವೈಯಕ್ತಿಕ ಆದಾಯ ತೆರಿಗೆ ವಿನಾಯಿತಿಯನ್ನು ಈ ಬಾರಿ ರೂ. ೧೦,೦೦೦/– ದಿಂದ ರೂ. ೧೫,೦೦೦/– ವರೆಗೆ ಏರಿಸಿದ್ದಾರೆ; ವೈಯಕ್ತಿಕ ಆದಾಯ ತೆರಿಗೆಯ ಮೇಲೆ ವಿಧಿಸಲಾಗಿದ್ದ ಶೇ. ೧೦ರಷ್ಟಿನ ಹೆಚ್ಚಿನ ಕರಭಾರವನ್ನು ರದ್ದುಗೊಳಿಸಿದ್ದಾರೆ; ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಭರವಸೆ ಯೋಜನೆಯಲ್ಲಿ ತೊಡಗಿಸಿರುವ ಒಟ್ಟು ಮೊತ್ತವನ್ನು ಸಾಕಷ್ಟು ಹೆಚ್ಚಿಸಿದ್ದಾರೆ; ಆ ಯೋಜನೆಯಡಿ ಕನಿಷ್ಠ ದಿನಗೂಲಿಯನ್ನು ರೂ. ೧೦೦ಕ್ಕೆ ಏರಿಸಿದ್ದಾರೆ; ಮತ್ತು ಜವಾಹರಲಾಲ್ ನೆಹರು ರಾಷ್ಟ್ರೀಯ ನಗರಗಳ ನವೀಕರಣ ಆಯೋಗಕ್ಕಾಗಿ ಮೀಸಲಾಗಿಟ್ಟಿರುವ ಒಟ್ಟು ಮೊತ್ತವನ್ನೂ ಹೆಚ್ಚಿಸಿದ್ದಾರೆ – ಈ ಎಲ್ಲ ಕ್ರಮಗಳಿಂದಾಗಿ ಜನರ ಕೊಳ್ಳುವ ಶಕ್ತಿಯು ಹೆಚ್ಚಾಗುತ್ತದೆ ಎಂದು ನಿರೀಕ್ಷಿಸಲಾಗಿದೆ. ಕೇನ್ಸಿಯನ್ ಚಿಂತನೆಯ ಹಿನ್ನೆಲೆಯಲ್ಲಿ ನೋಡಿದರೆ ರೈತರಿಗೆ ಮತ್ತು ಸಾರ್ವಜನಿಕ ವಲಯದ ಸಂಸ್ಥೆಗಳಿಗೆ ನೀಡಲಾಗುವ ಸಾಲಗಳ ಬೃಹತ್ ಮೊತ್ತವೇ ಅಲ್ಲದೆ ಅನುದಾನಗಳನ್ನು ನೀಡುವುದರಿಂದ ತಗಲುವ ಖರ್ಚು ಎರಡೂ ಸರಕುಗಳಿಗೂ, ಸೇವೆಗಳಿಗೂ ಬೇಡಿಕೆ ಹೆಚ್ಚಿಸುತ್ತವೆ. ಇದರಿಂದಾಗಿ ಬಂಡವಾಳ ಹೂಡುವಿಕೆಗೆ ಉತ್ತೇಜನ ದೊರಕಿದಂತಾಗುತ್ತದೆ. ಎಂದೇ ಈ ಬಾರಿಯ ಬಜೆಟ್ ಕೇನ್ಸಿಯನ್ ಮಾದರಿ ಎನಿಸಿರುವ, ಬಂಡವಾಳ ಹೂಡಿಕೆಗೆ ಉತ್ತೇಜನ ನೀಡುವ ಸಲುವಾಗಿ ಬೇಡಿಕೆಯನ್ನು ಹೆಚ್ಚಿಸಿ ಇಂದಿನ ಆರ್ಥಿಕ ಮುಗ್ಗಟ್ಟನ್ನು ಎದುರಿಸಲು ವಿತ್ತ ಸಚಿವರು ಮುಂದಾಗಿದ್ದಾರೆ. ಕೆಲವು ಸವಲತ್ತುಗಳನ್ನು ನೀಡಿ ನೇರವಾಗಿ ಬಂಡವಾಳ ಹೂಡಿಕೆಯನ್ನು ಪ್ರೋತ್ಸಾಹಿಸುವುದು ಉತ್ತಮ ಕ್ರಮವೋ ಅಥವಾ ಬೇಡಿಕೆಯನ್ನು ಹೆಚ್ಚು ಚುರುಕುಗೊಳಿಸಿ, ನೇರವಾಗಿ ಬಂಡವಾಳ ಹೂಡಿಕೆಗೆ ಉತ್ತೇಜನ ನೀಡಬೇಕೋ ಎಂಬುದು ಚರ್ಚಾಸ್ಪದ ವಿಷಯ.

ಕೃಪೆ: ಅಂತರ್ಜಾಲದಿಂದ

ಅದೇನೇ ಇರಲಿ, ಹಣಕಾಸು ಕೊರತೆ ೨೦೦೭-೦೮ ರಲ್ಲಿ ಶೇ. ೨.೭ರಷ್ಟಿದ್ದದ್ದು ೨೦೦೮-೦೯ರಲ್ಲಿ ಶೇ. ೬.೨ ರಷ್ಟಾಗಿದೆ; ಮತ್ತು ಈಗ, ಎಂದರೆ ೨೦೦೯-೧೦ರ ಸಾಲಿಗೆ, ಶೇ. ೬.೮ರಷ್ಟಿದೆ. ಇದು ನಿಜಕ್ಕೂ ಈ ಬಜೆಟ್‌ನಲ್ಲಿರುವ ಕಳವಳಕಾರಿ ಅಂಶ. ಏಕೆಂದರೆ, ಇಂತಹ ಬೃಹತ್ ಪ್ರಮಾಣದ ಹಣಕಾಸು ಕೊರತೆ ಹಣದುಬ್ಬರದ ಒತ್ತಡಗಳಿಗೆ ಎಡೆಮಾಡಿಕೊಡಲಿದೆ. ಇಂದು ನಮ್ಮ ಆರ್ಥಿಕತೆಯಲ್ಲಿ ನೇತ್ಯಾತ್ಮಕ ಹಣದುಬ್ಬರ ಉಂಟಾಗಿ, ಅದು (ಸೊನ್ನೆಗಿಂತಲೂ ಕಡಿಮೆ ಇರುವ) ಶೇ. ೧.೫೫ರಷ್ಟಿದೆ; ಮತ್ತು ಇದರಿಂದಾಗಿ ಬೆಲೆ ಏರಿಕೆ ಶೇ. ೬ಕ್ಕಿಂತಲೂ ಹೆಚ್ಚಾಗುವ ಸಂಭವ ಕಡಿಮೆ ಎಂಬ ಅಭಿಪ್ರಾಯವೂ ಇದೆ. ಇಲ್ಲಿ ಈ ಅಭಿಪ್ರಾಯಕ್ಕೆ ವಿರುದ್ಧವಾಗಿ ಎರಡು ಅಂಶಗಳನ್ನು ಪ್ರಸ್ತಾಪಿಸಬಹುದಾಗಿದೆ. ಅವೆಂದರೆ, ಮೊದಲನೆಯದಾಗಿ, ಹಣದುಬ್ಬರದ ದರ ಕಳೆದ ವರ್ಷ ಇದೇ ವಾರದಲ್ಲಿ ಶೇ. ೧೨ಕ್ಕೂ ಹೆಚ್ಚಿತ್ತು. ಇಂದಿನ ಬೆಲೆಗಳ ಪರಿಸ್ಥಿತಿಗೆ ಹೋಲಿಸಿ ನೋಡಿದರೆ ಈ ವಾರದ ಬೆಲೆಗಳ ಮಟ್ಟದ ಆಧಾರದಲ್ಲಿ ಅಷ್ಟಾಗಿ ಏರುಪೇರುಗಳಿಲ್ಲ.

ಆದ್ದರಿಂದ ಶೇ. ೧.೫೫ರಷ್ಟಿರುವ ಹಣದುಬ್ಬರದ ದರ ಇಂದಿರುವ ಬೆಲೆಗಳ ಪರಿಸ್ಥಿತಿಯನ್ನು ಸೂಕ್ತವಾಗಿ ಬಿಂಬಿಸುವುದಿಲ್ಲ. ಈ ಅಂಕಿಅಂಶಗಳಿಗೆ ಹೋಲಿಸಿ ನೋಡಿದಾಗ, ಅವಕ್ಕಿಂತಲೂ ಜಾಸ್ತಿಯಾಗದ ಬೆಲೆ ಏರಿಕೆಯು ಸಹಜವಾಗಿಯೇ ನೇತ್ಯಾತ್ಮಕವಾಗಿರುತ್ತದೆ ಎಂದರೆ ಸೊನ್ನೆಗಿಂತಲೂ ಕಡಿಮೆ ಇರುತ್ತದೆ. ಎರಡನೆಯದಾಗಿ, ಜೀವನವೆಚ್ಚದ ದೃಷ್ಟಿಯಲ್ಲಿ ನೋಡಿದರೆ, ಸಗಟುಬೆಲೆ ಸೂಚ್ಯಂಕದ ಆಧಾರದ ಮೇಲೆ ಹಣದುಬ್ಬರದ ಪ್ರಮಾಣವನ್ನು ನಿರ್ಧರಿಸುವ ವಿಧಾನ ಸರಿಯಾದುದಲ್ಲ. ಹಣದುಬ್ಬರದ ದರ ಗುಣಾತ್ಮಕವಾಗಿದೆ, ಹೆಚ್ಚಿನ ಮಟ್ಟದಲ್ಲಿದೆ ಎಂದು ಸೂಚಿಸುವ ಬಳಕೆದಾರರ ಬೆಲೆ ಸೂಚ್ಯಂಕದ ಮೂಲಕವೇ ಜೀವನ ವೆಚ್ಚದ ಪ್ರಮಾಣವನ್ನು ನಿಖರವಾಗಿ ಅಳೆಯಲು ಸಾಧ್ಯ. ಅಲ್ಲದೆ ನಮ್ಮ ಗೃಹಿಣಿಯರ ದಿವನಿತ್ಯದ ಅನುಭವ ಸೂಚಿಸುವಂತೆ ಇತ್ತೀಚೆಗಂತೂ ಅಗತ್ಯ ವಸ್ತುಗಳ ಬೆಲೆ ಏರುತ್ತಲೇ ಇದೆ. ಅವು ಕಡಿಮೆಯಾಗುವ ಸೂಚನೆಗಳೂ ಇಲ್ಲ, ಮತ್ತು ಇರುವ ಮಟ್ಟದಲ್ಲೇ ಮುಂದುವರೆಯುತ್ತವೆ ಎಂದು ಹೇಳಲೂ ಸಾಧ್ಯವಿಲ್ಲ. ಬಜೆಟ್‌ನಲ್ಲಿ ಬೇಡಿಕೆ ಹೆಚ್ಚುವ ದಿಶೆಯಲ್ಲಿ ಕೆಲವು ನಿರ್ದಿಷ್ಟ ಕ್ರಮಗಳನ್ನು ತೆಗೆದುಕೊಂಡಿರುವ ಹಿನ್ನೆಲೆಯಲ್ಲಿ ಬರುವ ದಿನಗಳಲ್ಲಿ ಜನರು ಹೆಚ್ಚು ಹಣ ಖರ್ಚುಮಾಡಲಿದ್ದಾರೆ. ಇದರಿಂದಾಗಿ ಬೆಲೆಗಳು ಇನ್ನಷ್ಟು ತ್ವರಿತವೇಗದಲ್ಲಿ ಏರಲಿವೆ.

ಹಣದುಬ್ಬರದಿಂದಾಗಿ ಶ್ರೀಮಂತರಿಗಿಂತಲೂ ಹೆಚ್ಚಾಗಿ ಬಡವರು ಕಷ್ಟ-ನಷ್ಟಗಳಿಗೆ ಈಡಾಗುವುದು ಎಲ್ಲರಿಗೂ ತಿಳಿದ ವಿಷಯ. ಇಂತಹ ಪರಿಸ್ಥಿತಿಯಲ್ಲಿ ಈ ಬಾರಿಯ ಬಜೆಟ್ 'ಶ್ರೀಸಾಮಾನ್ಯ'ನ ರಕ್ಷಣೆಗಾಗಿ ಏನು ಮಾಡಲಿದೆ ?

ಬಡತನ ರೇಖೆಗಿಂತ ಕೆಳಗಿರುವ ಜನರು ಮತ್ತವರ ಕುಟುಂಬದವರು, ಅತ್ಯಂತ ಕಡಿಮೆ ವರಮಾನದಲ್ಲಿ ಬದುಕು ಸಾಗಿಸುತ್ತಿರುವವರು, ಇವರೆಲ್ಲರನ್ನೂ ಶ್ರೀಸಾಮಾನ್ಯರೆಂದು ಗುರುತಿಸುವುದೇ ಆದರೆ, ಖಂಡಿತವಾಗಿಯೂ ಅವರಿಗೆ ಸಹಾಯಕವಾಗುವಂತಹ ಕೆಲವು ಅಂಶಗಳು ಈ ಬಜೆಟ್‌ನಲ್ಲಿವೆ. ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳಿಗೆ ಬಜೆಟ್ ಈ ಕೆಳಕಾಣಿಸಿದ ಸವಲತ್ತುಗಳನ್ನು ಸೂಚಿಸಿದೆ :

* ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಭರವಸೆ ಕಾಯ್ದೆಗಾಗಿ ಮೀಸಲಾಗಿಟ್ಟಿರುವ ಒಟ್ಟು ಮೊತ್ತವನ್ನು ಶೇ. ೧೪೪ರಷ್ಟು ಹೆಚ್ಚಿಸಲಾಗಿದೆ. ಈ ಕ್ರಮದಿಂದಾಗಿ ಕೃಷಿ ಕೂಲಿಕಾರರಿಗೆ ವರ್ಷಕ್ಕೆ ನೂರು ದಿನಗಳ ಕಾಲ ದುಡಿಯುವ ಅವಕಾಶ ಲಭಿಸಲಿದೆ.
* ಅವರ ದಿನಗೂಲಿಯನ್ನು ಕನಿಷ್ಠ ರೂ. ೧೦೦ಕ್ಕೆ ಏರಿಸಲಾಗಿದೆ. ಇದರಿಂದಾಗಿ ಅವರ ಜೀವನ ಸ್ವಲ್ಪ ಸುಧಾರಿಸಬಹುದಾಗಿದೆ.
* ಈ ಕ್ರಮಗಳು ಬೆಲೆ ಏರಿಕೆಯಿಂದಾಗುವ ದುಷ್ಪರಿಣಾಮಗಳನ್ನು ಸ್ವಲ್ಪಮಟ್ಟಿಗೆ ಕಡಿಮೆ ಮಾಡಲಿವೆ. ಅದೇ ವೇಳೆ ರಾಷ್ಟ್ರೀಯ ಆಹಾರ ಭದ್ರತೆ ಕಾಯ್ದೆಯಡಿ ಪ್ರತಿ ಕುಟುಂಬಕ್ಕೂ ೨೫ ಕೆ.ಜಿ. ಅಕ್ಕಿ ಅಥವಾ ಗೋದಿಯನ್ನು ಒದಗಿಸಲಾಗುತ್ತದೆ.

ಇನ್ನು ದುರ್ಬಲ ಜನವಿಭಾಗಗಳ ಅಭಿವೃದ್ಧಿಗಾಗಿ ಬಜೆಟ್ ಈ ಕೆಳಕಾಣಿಸಿದ ಕ್ರಮಗಳನ್ನು ಸೂಚಿಸಿದೆ :

* ದುರ್ಬಲ ಜನವಿಭಾಗಗಳೇ ಹೆಚ್ಚಾಗಿ ವಾಸಿಸುವ ಪ್ರದೇಶಗಳಲ್ಲಿ ಕೃಷಿ ಅಭಿವೃದ್ಧಿಗಾಗಿ ಹೆಚ್ಚಿನ ಸಾಲ ಸೌಲಭ್ಯಗಳನ್ನು ನೀಡಲಾಗುತ್ತದೆ.
* ಬಹುತೇಕ ವೇಳೆ ರೈತರಿಗೆ ನೀಡಲಾಗುವ ಅನುದಾನದ ಮೊತ್ತ ಮಧ್ಯವರ್ತಿಗಳಿಂದಾಗಿ ಮತ್ತಿತರ ಕಾರಣಗಳಿಂದಾಗಿ ಸೋರಿಹೋಗುತ್ತದೆ. ಆದ್ದರಿಂದ ಇನ್ನು ಮುಂದೆ ಅನುದಾನದ ಮೊತ್ತ ನೇರವಾಗಿ ಅವರಿಗೇ ತಲುಪುವ ಏರ್ಪಾಟು ಮಾಡಲಾಗುತ್ತದೆ.
* ಇಂದಿರಾ ಆವಾಸ್ ಯೋಜನೆಯಡಿ ಶೇ. ೬೩ರಷ್ಟು ಹೆಚ್ಚು ಹಣವನ್ನು ಮೀಸಲಾಗಿಡಲಾಗುತ್ತದೆ.
* ಬ್ಯಾಂಕುಗಳ ಸಹಯೋಗದೊಡನೆ ಸ್ವಯಂ-ಸಹಾಯ ಗುಂಪುಗಳ ವ್ಯಾಪ್ತಿಯನ್ನು ಹೆಚ್ಚಿಸಲಾಗುವುದು ಮತ್ತು ರಾಷ್ಟ್ರೀಯ ಮಹಿಳಾ ಕೋಶ ಯೋಜನೆಗೆ ಹೆಚ್ಚು ಹಣ ಒದಗಿಸಲಾಗುವುದು.
* ಅಲ್ಪಸಂಖ್ಯಾತರ ವ್ಯವಹಾರ ಸಚಿವ ಇಲಾಖೆಗೆ ಹೆಚ್ಚಿನ ಹಣ ನೀಡಲಾಗುವುದು.
* ವೃತ್ತಿಪರ ಸಮುದಾಯಗಳ ಸಂಖ್ಯೆಯನ್ನು ಹೆಚ್ಚಿಸಿ ಕಡಿಮೆ ವರಮಾನದಲ್ಲಿ ಬದುಕುವ ಜನರಿಗೆ ಸಾಮಾಜಿಕ ಭದ್ರತೆ ಯೋಜನೆಯನ್ನು ರೂಪಿಸಲಾಗುವುದು.

ಹಣಕಾಸು ಕೊರತೆಯ ಮಟ್ಟವು ಹೆಚ್ಚಾಗಲಿರುವ ಹಿನ್ನೆಲೆಯಲ್ಲಿ ಈ ಎಲ್ಲ ಸೂಚನೆಗಳು ಬೆಲೆ ಏರಿಕೆಯಿಂದುಂಟಾಗುವ ಆಘಾತವನ್ನು ಸ್ವಲ್ಪಮಟ್ಟಿಗಾದರೂ ಕಡಿಮೆ ಮಾಡುವುದರಲ್ಲಿ ಸಂದೇಹವಿಲ್ಲ. ಆದರೆ ಒಂದು ಮಾತನ್ನು ಇಲ್ಲಿ ಒತ್ತಿಹೇಳುವ ಅವಶ್ಯವಿದೆ. ಬಜೆಟ್‌ನಲ್ಲಿ ಘೋಷಿಸಿರುವ ಇವೆಲ್ಲವೂ ಸೂಚನೆಗಳು ಮಾತ್ರ ಎಂಬುದನ್ನು ನಾವು ನೆನಪಿನಲ್ಲಿಟ್ಟುಕೊಳ್ಳಬೇಕು. ಎಷ್ಟರಮಟ್ಟಿಗೆ ಈ ಪ್ರಸ್ತಾವಗಳು, ಈ ಸೂಚನೆಗಳು ಶ್ರೀಸಾಮಾನ್ಯನನ್ನು ತಲುಪಲಿವೆ ಎಂಬುದು ಅವುಗಳನ್ನು ಎಷ್ಟರಮಟ್ಟಿಗೆ ಪರಿಣಾಮಕಾರಿಯಾಗಿ ಕಾರ್ಯರೂಪಕ್ಕೆ ತರಲಾಗುತ್ತದೆ ಎಂಬುದನ್ನು ಅವಲಂಬಿಸಿರುತ್ತದೆ.

ಪ್ರೊ|| ಅಬ್ದುಲ್ ಅಜೀಜ್
ಇನ್‌ಸ್ಟಿಟ್ಯೂಟ್ ಫಾರ್ ಸೋಷಿಯಲ್ ಅಂಡ್ ಎಕನಾಮಿಕ್ ಚೇಂಜ್, ಬೆಂಗಳೂರು - ೫೬೦ ೦೭೨
ಅನುವಾದ : ಎಸ್. ಸುರೇಂದ್ರ
ನಂ. ೨೪, ೧ನೇ ಕ್ರಾಸ್, ಕೆನರಾ ಬ್ಯಾಂಕ್ ಕಾಲೋನಿ, ೩ನೇ ಬ್ಲಾಕ್ ಈಸ್ಟ್, ಜಯನಗರ, ಬೆಂಗಳೂರು - ೧೧

# ಪಡ್ನೂರಿನ ಪಾಠಗಳು

## ಚರಿತ್ರೆಯಲ್ಲಿ ಅನ್ಯಾಯ

ಎಸ್. ಆರ್. ವಿಜಯಶಂಕರ

**ಚ**ರಿತ್ರೆಯಲ್ಲಿ ಹಿಂದೂಗಳಿಗೆ ಆದ ಅನ್ಯಾಯಗಳು ಮೂರು ಮುಖ್ಯ ನೆಲೆಯಲ್ಲಿ ನಡೆದಿವೆ ಎಂದು ನನ್ನ ಪರಿಚಯದ ಅನೇಕ ಹಿಂದೂಗಳು ಇಂದು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಂಬುತ್ತಾರೆ. ಅವುಗಳಲ್ಲಿ ಮೊದಲನೆಯದು – ಮುಸ್ಲಿಂ ರಾಜರು ಹಿಂದೂಗಳ ಮತಾಂತರ ಮಾಡಿದ್ದಾರೆ ಎಂಬುದು. ಎರಡನೆಯದು, ಹಿಂದೆ ಮುಸ್ಲಿಮರು ಹಿಂದೂ ದೇವಸ್ಥಾನಗಳನ್ನು ನಾಶ ಮಾಡಿದ್ದಾರೆ ಎಂಬುದು. ಮೂರನೆಯದು, ಮುಸ್ಲಿಮರಿಂದ ಹಿಂದೆ ಚರಿತ್ರೆಯಲ್ಲಿ ಹಿಂದೂ ಹೆಣ್ಣುಮಕ್ಕಳ ಮಾನಭಂಗ ನಡೆದಿದೆ ಎಂಬುದು. ಹೀಗೆ ಚರಿತ್ರೆಯಲ್ಲಿ ನಡೆದ ಅನ್ಯಾಯಗಳಿಗೆ ಶಿಕ್ಷೆ ಆಗಬೇಕು ಮತ್ತು ಅಂತಹ ಅನ್ಯಾಯಗಳ ಪುನರಾವರ್ತನೆ ಆಗಕೂಡದು ಎಂಬುದು ಇಂದಿನ ಸಂಬಂಧಗಳ ನಿರ್ಣಾಯಕ ನೆಲೆ ಆಗಬೇಕು ಎಂಬ ಒಂದು ಅಲಿಖಿತ ಅಪೇಕ್ಷೆ.

**ಎಲ್ಲಾ ಧರ್ಮಗಳಲ್ಲೂ ಇರುವ ಮೂಲಭೂತವಾದಿಗಳು**

ಮೂಲಭೂತವಾದಿ ಚಿಂತನೆ ಕೇವಲ ಹಿಂದೂಗಳಲ್ಲಿ ಮಾತ್ರ ಎಂದು ನನಗೆ ತೋರುವುದಿಲ್ಲ. ಮುಸ್ಲಿಂ ಮೂಲಭೂತವಾದಿಗಳೂ ಧಾರ್ಮಿಕ ದ್ವೇಷದ ದಳ್ಳುರಿ ಹೆಚ್ಚಾದಷ್ಟೂ ಸಂತೋಷಪಡುವವರೆ ಎಂದು ನನಗೆ ತೋರಿದೆ. ಮುಸ್ಲಿಂ ಹೆಣ್ಣುಮಕ್ಕಳು ನಮ್ಮ ಊರಿನಲ್ಲಿ 'ಮದರಸಾ' ಧಾರ್ಮಿಕ ಶಾಲೆಗಳಿಗೆ ಹೋಗುವುದೇ ಹೆಚ್ಚು. ಮುಸ್ಲಿಂ ಹೆಣ್ಣುಮಕ್ಕಳು ಸರ್ಕಾರಿ ಶಾಲೆಗೆ ಹೋಗಿ ಕನ್ನಡ ಮಾಧ್ಯಮಗಳಲ್ಲಿ ರಾಜ್ಯದ ಎಸ್.ಎಸ್.ಎಲ್.ಸಿ. ಸಿಲೆಬಸ್ ಓದುವುದು ನಮ್ಮ ಹಳ್ಳಿಯಲ್ಲಿ ಇಲ್ಲವೇ ಇಲ್ಲ ಎಂಬಷ್ಟು ಕಮ್ಮಿ. ಮುಸ್ಲಿಂ ಹೆಣ್ಣುಮಕ್ಕಳು 'ಮದರಸಾ' ಹೊರಗೆ ಓದುವುದಕ್ಕೆ ಮುಸ್ಲಿಂ ಮೂಲಭೂತವಾದಿಗಳ ವಿರೋಧ ಇದೆ.

ಹೆಣ್ಣುಮಕ್ಕಳ ಸ್ವಾತಂತ್ರ್ಯ ಮುಸ್ಲಿಮರಲ್ಲಿ ತುಂಬಾ ಕಷ್ಟ. ನನಗೆ ಒಂದು ಘಟನೆ ನೆನಪಿದೆ. ಸಾಮಾನ್ಯವಾಗಿ ಬುರ್ಖಾ ಹಾಕಿ ಹೊರಗೆ ಹೋಗುವ ಮುಸ್ಲಿಂ ಹೆಣ್ಣುಮಕ್ಕಳ ಫೋಟೋಗಳು ಹೊರಗೆ ಅಚ್ಚಾಗುವ ಸಂದರ್ಭವೇ ಇಲ್ಲ. ೧೯೭೦ರ ದಶಕದ ಕೊನೆಯಲ್ಲಿ ಬರಹಗಾರ ಬೊಳುವಾರು ಮಹಮ್ಮದ್ ಕುಂಞಿ ಮದುವೆಯಾದ ಬಳಿಕ, ಅವರ ಹಾಗೂ ಅವರ ಪತ್ನಿಯ ಫೋಟೋ ವೈವಾಹಿಕ ಅಭಿನಂದನೆಯಾಗಿ ಉದಯವಾಣಿಯಲ್ಲಿ ಅಚ್ಚಾಗಿತ್ತು. ಅದು ಬಹುಶಃ ಆಗ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಾರ್ವಜನಿಕವಾಗಿ ಅಚ್ಚಾದ ಮುಸ್ಲಿಂ ದಂಪತಿಗಳ ಮೊದಲ ಫೋಟೋ. ಮುಸ್ಲಿಂ ಹೆಣ್ಣುಮಕ್ಕಳ ಫೋಟೋ ಪೇಪರಿನಲ್ಲಿ ಅಚ್ಚಾಗುವ ಕ್ರಮವೇ ಇರಲಿಲ್ಲ. ನಮ್ಮ ಊರಿನ ಪರಿಚಯದ ಮೊಯಿಲಾರ್ (ಮೈಲಾರ್ ಎಂದೂ ಹೇಳುತ್ತಾರೆ. ಮುಸ್ಲಿಮರ ಧಾರ್ಮಿಕ ಪಾಠ ಮಾಡುವ ಗುರು) ಒಬ್ಬರು ಬೊಳುವಾರು ದಂಪತಿಗಳ ಫೋಟೋ ಅಚ್ಚಾದ ವಿಚಾರಕ್ಕೆ ಅದು ಧಾರ್ಮಿಕವಾಗಿ ಮಾಡಿದ ತಪ್ಪು. ಬುರ್ಖಾ ಹಾಕಬೇಕಾಗಿರುವ ಹೆಣ್ಣುಮಕ್ಕಳ ಫೋಟೋ ಗಂಡನ ಜೊತೆಗೇ ಆದರೂ ಪೇಪರುಗಳಲ್ಲಿ ಅಚ್ಚಾಗಬಾರದು ಎಂದು ಹೇಳುತ್ತಿದ್ದರು. ಈಗ ಹಿಂತಿರುಗಿ ನೋಡುವಾಗ ಕೆಲವರಿಗೆ ಇದು ಸಣ್ಣ ವಿಚಾರ ಎಂಬಂತೆ ಕಾಣಲೂಬಹುದು. ಆದರೆ ಮೂಲಭೂತವಾದಿಗಳು ಅಂತಹ ಸಣ್ಣಪುಟ್ಟ ವಿಚಾರಗಳಲ್ಲೆ ಜನರನ್ನು ಕೆರಳಿಸುವುದು. ಆಮೇಲೆ ಬೊಳುವಾರು ಕೂಡಾ ಆ ಫೋಟೋಕ್ಕಾಗಿ ತಮ್ಮ ಧಾರ್ಮಿಕ ವಲಯದಲ್ಲಿ ಸಾಕಷ್ಟು ವಿರೋಧ ಎದುರಿಸಿದ್ದಾರೆ ಎಂದು ನಾನು ಕೇಳಿದ್ದೇನೆ.

**ಚರಿತ್ರೆಯ ಅನ್ಯಾಯ ಸ್ವಂತದ ಅನುಭವವೆ ?**

ಟಿಪ್ಪುಸುಲ್ತಾನನ ಹಿಂದೂ ವಿರೋಧದ ನೆಲೆಗಳನ್ನು ಹೇಳಿಯೂ ಮಾಸ್ತಿ ಟಿಪ್ಪುವಿನ ರಂಗನ ಭಕ್ತಿಯನ್ನು ಗುರುತಿಸುತ್ತಾರೆ. ಮುಸ್ಲಿಂ ಅಧಿಕಾರಿ ಹಾಗೂ ಜನರ ನಡುವಿನ ಆಡಳಿತ ಸಂಬಂಧವನ್ನೂ ಗಮನಿಸುತ್ತಾರೆ. ಒಟ್ಟಿನಲ್ಲಿ ಮನುಷ್ಯ ಹಾಗೂ ಸಮಾಜದ ಸಂಕೀರ್ಣ ಸ್ಥಿತಿಯನ್ನು ನಿರುದ್ವಿಗ್ನವಾಗಿ ಸೂಚಿಸುವ ಮಾಸ್ತಿಗೆ ಚರಿತ್ರೆಯ ಅನ್ಯಾಯವನ್ನು ಇಂದು ಸರಿಪಡಿಸುವ ಉದ್ದೇಶ ಇಲ್ಲ. ಸರ್ವಶಕ್ತನೂ ದಯಾಮಯನೂ ಆದ ಬಿಳಿಗಿರಿಯ ರಂಗನನ್ನು, ಅವನ ಸಾನ್ನಿಧ್ಯವನ್ನು ಅನುಭವಿಸಿ ತಲ್ಲೀನನಾಗುವುದೇ ಮುಖ್ಯ. ಮಾಸ್ತಿಯಂತಹವರ ನಂಬುಗೆ, ದೈವಭಕ್ತಿ ನಮ್ಮ ಇಂದಿನ ಇಂಟರ್‌ನೆಟ್ ವೀರರಿಗೆ ಇಲ್ಲ. ಆದರೆ ನಂಬುಗೆಗೆ ಚರಿತ್ರೆಯಲ್ಲಿ ಆದ ಅನ್ಯಾಯಕ್ಕೆ ಉತ್ತರ ಬೇಕು.

ಮಾತು ಬಂದದ್ದು ಹಿಂದೂಗಳಿಗೆ ಚರಿತ್ರೆಯಲ್ಲಾದ ಅನ್ಯಾಯಕ್ಕೆ ಏನು ಮಾಡುವುದು ಎಂಬುದೇ ಸಾರ್ವಜನಿಕವಾಗಿ ಕೇಳುವ ದೊಡ್ಡ ಪ್ರಶ್ನೆಯಾಗಿದೆ ಎಂಬುದರಿಂದ. ಆದರೆ ನಾನು ತಿಳಿದ ಹಾಗೆ ಸಾರ್ವಜನಿಕವಾಗಿ ಎತ್ತುವ ಈ ಚರಿತ್ರೆಗೆ ಸಂಬಂಧಪಟ್ಟ ಪ್ರಶ್ನೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅನೇಕರ ಸ್ವಂತ ಅನುಭವಗಳ ಸಂದರ್ಭದಲ್ಲಿ ಸಾಬೀತಾದ ಪ್ರಶ್ನೆಗಳಲ್ಲ.

ಟಿಪ್ಪುಸುಲ್ತಾನನ ಹಿಂದೂ ವಿರೋಧದ ನೆಲೆಗಳನ್ನು ಹೇಳಿಯೂ ಮಾಸ್ತಿ ಟಿಪ್ಪುವಿನ ರಂಗನ ಭಕ್ತಿಯನ್ನು ಗುರುತಿಸುತ್ತಾರೆ. ಮುಸ್ಲಿಂ ಅಧಿಕಾರಿ ಹಾಗೂ ಜನರ ನಡುವಿನ ಆಡಳಿತ ಸಂಬಂಧವನ್ನೂ ಗಮನಿಸುತ್ತಾರೆ. ಒಟ್ಟಿನಲ್ಲಿ ಮನುಷ್ಯ ಹಾಗೂ ಸಮಾಜದ ಸಂಕೀರ್ಣ ಸ್ಥಿತಿಯನ್ನು ನಿರುದ್ವಿಗ್ನವಾಗಿ ಸೂಚಿಸುವ ಮಾಸ್ತಿಗೆ ಚರಿತ್ರೆಯ ಅನ್ಯಾಯವನ್ನು ಇಂದು ಸರಿಪಡಿಸುವ ಉದ್ದೇಶ ಇಲ್ಲ. ಸರ್ವಶಕ್ತನೂ ದಯಾಮಯನೂ ಆದ ಬಿಳಿಗಿರಿಯ ರಂಗನನ್ನು, ಅವನ ಸಾನ್ನಿಧ್ಯವನ್ನು ಅನುಭವಿಸಿ ತಲ್ಲೀನನಾಗುವುದೇ ಮುಖ್ಯ. ಮಾಸ್ತಿಯಂತಹವರ ನಂಬುಗೆ, ದೈವಭಕ್ತಿ ನಮ್ಮ ಇಂದಿನ ಇಂಟರ್‌ನೆಟ್ ವೀರರಿಗೆ ಇಲ್ಲ. ಆದರೆ ನಂಬುಗೆಗೆ ಚರಿತ್ರೆಯಲ್ಲಿ ಆದ ಅನ್ಯಾಯಕ್ಕೆ ಉತ್ತರ ಬೇಕು.



ಇದನ್ನೊಂದು ಉಡುಪಿಯ ಸಾಮಾನ್ಯ ಗಾದೆಯಂತಹ ಒಂದು ಮಾತಿನಿಂದ ಹೇಳಬಯಸುವೆ.

ಉಡುಪಿಯಲ್ಲಿ ನಾನು ಕೇಳಿದ ತುಳು ಮಾತು: ''ಯಾನು ಸ್ಯಾಬ್ಬರ ಪಡಿಕ್ಕು ಉಂತುದು ಜೀವನ ಕಳೆವೆ. ಎಂಕು ಆಯೆನ ಉಣ್ಪು ಬೋಡು ಅಂದು ಇಜ್ಜಿ'' (ನಾನು ಸಾಯಿಬ್ಬರು ಉಚಿತವಾಗಿ ನೀಡುವ ಅಕ್ಕಿಯ ಸಾಲಲ್ಲಿ ನಿಂತು ಆ ಅಕ್ಕಿ ಪಡೆದು ಅದನ್ನು ಉಂಡು ಜೀವನ ಕಳೆದೇನು, ನನಗೆ ಅವನ ಅನ್ನದ ಹಂಗು ಬೇಡ.) ಈ ಮಾತನ್ನು ತನ್ನ ಮಗನ ಸಂದರ್ಭದಲ್ಲಿ ಹೇಳಿದವಳು ಉಡುಪಿಯ ಒಬ್ಬಳು ನೊಂದ ಮುದುಕಿಯಾದ ತಾಯಿ. ಹೇಳಿಕೊಂಡದ್ದು, ಮೌನವಾಗಿ ಸಮಾಜ ಸೇವೆ ಮಾಡುವ ನನ್ನ ಗೆಳೆಯ ಉಡುಪಿಯ ಬಡಗು ಪೇಟೆಯ ಶ್ರೀ ಜಯವಂತರ ಬಳಿ.

ಆಗ ಉಡುಪಿ ಸಮೀಪದ ಕಲ್ಯಾಣಪುರ ಮಿಲಾಗ್ರೆಸ್ ಕಾಲೇಜಲ್ಲಿ ನಾನು ಕೆಲಸ ಮಾಡುತ್ತಿದ್ದೆ. ಯಾವ ಪ್ರಚಾರ, ಅಧಿಕಾರದ ಆಸೆಯೂ ಇಲ್ಲದ ಪಾಪದವರಿಗೆ, ಬಡಬಗ್ಗರಿಗೆ ತನ್ನ ಕೈಲಾದ ಸಹಾಯ ಮಾಡುತ್ತಾ ಇರುವ ಬಡಗು ಪೇಟೆಯ ಜಯವಂತರನ್ನು ಉಡುಪಿಯಲ್ಲಿದ್ದಾಗ ಪ್ರತಿದಿನವೂ ಭೇಟಿಯಾಗದಿದ್ದರೆ ನನಗೇನೋ ಕಳೆದುಹೋದಂತೆ. ಅವರ ತಮ್ಮ ಜನಪ್ರಿಯ ನಾಯಕ ಶ್ರೀ ಸಭಾಪತಿಯವರ ಹಿಂದೆ ಮುಂದೆ ದೊಡ್ಡ ಜನಸಮೂಹ. ಜಯವಂತರ ಜೊತೆ ಅವರ ಅಂಗಡಿಯ ಒಳಗೋ ಹೊರಗೋ ಯಾವುದೋ ಒಂದು ಕಷ್ಟದಲ್ಲಿರುವವರು ಆಗಾಗ ಬರುತ್ತಿದ್ದರು. ಅವರಲ್ಲಿ ಅನಾರೋಗ್ಯದ ಕಷ್ಟ, ಕೋರ್ಟಿನಲ್ಲಿ ಕೇಸು ಸೋತು ಆದ ಅನ್ಯಾಯ, ಆಕ್ಸಿಡೆಂಟ್ ಆಗಿ ಕೈಕಾಲು ಮುರಿದುಕೊಂಡು ಕೂಲಿ ಕೆಲಸ ಮಾಡಲಾರದೆ ಕಷ್ಟಪಡುವವರು. ಕೌಟುಂಬಿಕ ಕಲಹದಲ್ಲಿ ಸೋತು ಸುಣ್ಣವಾದವರು, ಮಣಿಪಾಲ ಆಸ್ಪತ್ರೆಗೆ ಎಡ್ಮಿಟ್ ಮಾಡಿಸಿಕೊಡಿ ಎಂದು ಬರುವವರು ಹೀಗೆ, ಇನ್ನೂ ಅನೇಕರು.

ಒಂದು ಸಂಜೆ ವೃದ್ಧೆಯೊಬ್ಬಳು ಸಂಜೆ ಏಳುವರೆ ಬಳಿಕ ಜಯವಂತರು ಅಂಗಡಿ ಬಾಗಿಲು ಹಾಕುವುದನ್ನು ಕಾಯುತ್ತಾ ನಿಂತಿದ್ದಳು. 'ಆಂಡ್. ಏನು ಪಣ್ಪೆ. ಈರು ಪೋಲೆ' (ಆಯಿತು. ನಾನು ಹೇಳುತ್ತೇನೆ. ನೀವು ಹೋಗಿ) ಎಂದರೂ ಕೇಳದೆ ಈ ಹೆಣ್ಣುಮಗಳು ಸುಮ್ಮನೆ ಕಾಯುತ್ತಾ ಅಂಗಡಿ ಜಗಲಿಯ ಹೊರಬದಿಯಲ್ಲಿ ನಿಂತಿದ್ದಳು. ಜಯವಂತರ ಸಾಹಿತ್ಯ ಓದಿನ ಆಸಕ್ತಿಯಿಂದ ಮತ್ತು ಪ್ರಗತಿಪರ ಹೋರಾಟಗಳಿಗೆ ನೀಡುವ ಬೆಂಬಲದಿಂದ ಕುದುರಿದ ನನ್ನ ಅವರ ಪರಿಚಯ ಪ್ರೀತಿ, ಜಗಳದ ಆರೋಗ್ಯಕರ ಸ್ನೇಹವಾಗಿ ಪರಿವರ್ತಿತವಾಗಿತ್ತು. ಒಮ್ಮೊಮ್ಮೆ ಅವರು ಅಂಗಡಿ ಬಾಗಿಲು ಹಾಕುವವರೆಗೆ ಕಾದು ಜೊತೆಯಲ್ಲಿ ಸ್ವಲ್ಪ ಸುತ್ತಾಡಿ ಬರುವ ಕ್ರಮವೂ ಇತ್ತು. ಹಾಗೆ ನಾನು ಜಯವಂತರು ತಮ್ಮ ಅಂಗಡಿ ಷಟರ್ ಎಳೆದು ಹೊರಡುವುದನ್ನು ಕಾಯುತ್ತಾ ಕೂತಿದ್ದೆ.

**ಸಾಯಿಬ್ಬರ ಪಡಿ**

ಹಾಗೆ ನಾವಿಬ್ಬರೂ ಅಂಗಡಿಯಿಂದ ಹೊರಬಂದಾಗ ಆ ವೃದ್ಧೆ ತಾಯಿ ಒಮ್ಮೆಲೇ ಕಣ್ಣು ನೀರು ತುಂಬಿಕೊಂಡು 'ಆಯೆ ಇಂಚ ಮನ್ಪೋಲಿಯಾ' (ಅವ ಹೀಗೆ ಮಾಡಬಹುದಾ) ಎಂದು ಜಯವಂತರಲ್ಲಿ ಹೇಳಿ ಮೇಲೆ ನಾನು ಹೇಳಿದ ''ಯಾನು ಸಾಯಿಬ್ಬರ ಪಡಿಕ್ಕು ಉಂತುದು ಜೀವನ ಕಳೆವೆ. ಎಂಕು ಆಯೆನೆ ಉಣ್ಪು ಬೋಡಂದಿಜ್ಜಿ''ಎಂಬ ಮಾತುಗಳನ್ನು ಆಕ್ರೋಶದಲ್ಲಿ, ಸ್ವಾಭಿಮಾನದ ಸ್ವತಂತ್ರ ಮೂರ್ತಿಯಂತೆ ಹೇಳಿದ್ದು ನನ್ನ ಕಿವಿಯಲ್ಲಿನ್ನೂ ಉಳಿದಿದೆ. ಅದರ ಹಿನ್ನೆಲೆ ಹೇಳಿದರೆ ಹಿಂದೂ ಮುಸ್ಲಿಮರ ಚರಿತ್ರೆಯ ಬಗ್ಗೆ

## ನೋಟು






ಹತ್ತೆಂದರೆ ಹತ್ತು
ನೂರೆಂದರೆ ನೂರು
ಅದರದರ ಹಣೆಯ ಮೇಲೆ ಒತ್ತಿದ
ಸಂಖ್ಯೆಗನುಸಾರ
ಚಲಾವಣೆಯಾಗುತ್ತಲೇ ಇರುತ್ತದೆ
ಸರಕಾರದ ಈ ಬಣ್ಣದ ಕಾಗದದ ಚೂರು

ಅವರಿಂದ ಇವರಿಗೆ
ಇವರಿಂದ ಇನ್ಯಾರಿಗೋ !

ಕಲ್ಲು ಕುಟ್ಟುವ ಕೂಲಿಯಿಂದ
ಕಾಳಸಂತೆ ಖದೀಮ ವರ್ತಕನಿಗೆ
ರಾತ್ರಿಯಿಡೀ ನರಳಿ ಗಿರಾಕಿಯಿಂದ
ಪಡೆದವಳ ಕೈಯಿಂದ
ದೇವಸ್ಥಾನದ ಮುಂದೆ ಹೂ ಮಾರುವವಳ ಕೈಗೆ;

ಅಲ್ಲಿಂದ ಇಲ್ಲಿಗೆ
ಇಲ್ಲಿಂದ ಇನ್ನೆಲ್ಲಿಗೋ !
ನಡೆಯುತ್ತಲೇ ಇರುತ್ತದೆ;
ಬಣ್ಣ ಮಾಸಿ ಹರಿದು ಹೋಗುವವರೆಗೆ
ಬದಲಿಸುತ್ತ ಮಾಲಿಕನ

ಕುಡುಕನಿಗೆ ಹೆಂಡವಾಗಿ
ಕಟುಕನಿಗೆ ಖಂಡವಾಗಿ
ಕಾಮುಕನಿಗೆ ಹೆಣ್ಣಾಗಿ
ಕಾಯಿಲೆಯವನಿಗೆ ಹುಣ್ಣಾಗಿ
ರಾಜಕಾರಣಿಗಳ ಪಾಲಿಗೆ ರಸಭರಿತ ಹಣ್ಣಾಗಿ;

ಕೇಳುವುದಿಲ್ಲ ಯಾರನ್ನೂ;
ಎಲ್ಲಿಂದ ತಂದೆ ನನ್ನನ್ನು
ಯಾರಿಗೆ ಕೊಡುವೆಯಿನ್ನು ?

ಹರಿದು ಹೋಗುವವರೆಗೂ
ಹಾರಾಡುತ್ತಲೇ ಇರುತ್ತದೆ
ಭರತಖಂಡದ ಸೀಮೆಯೊಳಗೆ
ಜೇಬಿನಿಂದ ಜೇಬಿಗೆ
ತಿಜೋರಿಯಿಂದ ತಿಜೋರಿಗೆ


ಕು. ಸ. ಮಧುಸೂದನ
ಬ್ಯಾಂಕ್ ಮಹಡಿ, ರಂಗೇನಹಳ್ಳಿ - ೫೭೭೧೪೪, ಚಿಕ್ಕಮಗಳೂರು ಜಿಲ್ಲೆ

ಸಾರ್ವಜನಿಕವಾಗಿ ಕೇಳುವ ಪ್ರಶ್ನೆಯನ್ನು ಬೇರೆ ರೀತಿಯಲ್ಲಿ ನೋಡುವ ಕ್ರಮ ಕಂಡೀತು.

ಸಾಯಿಬ್ಬರು ಎಂಬುದು ಉಡುಪಿಯ ಪ್ರಸಿದ್ಧವಾದ ಶ್ರೀಮಂತ ಮುಸ್ಲಿಂ ಕುಟುಂಬವೊಂದರ ಯಜಮಾನರನ್ನು ಉದ್ದೇಶಿಸಿ ಹೇಳುವ ಮಾತು. ೧೯೮೦ರ ದಶಕದಲ್ಲಿ ನಾನು ಉಡುಪಿಯಲ್ಲಿದ್ದಾಗ ಸಾಯಿಬ್ಬರ ಪಡಿ ಎಂಬುದೊಂದು ಮಾತು. ಆ ಶ್ರೀಮಂತರಾದ ಮುಸ್ಲಿಂ ಸಾಯಿಬ್ಬರು ಹಿಂದೆ ಉಡುಪಿಯ ಸರ್ಕಾರಿ ಆಸ್ಪತ್ರೆಗೆ ಉಚಿತವಾಗಿ ತಮ್ಮ ಭೂಮಿಯನ್ನು ಕೊಟ್ಟವರು. ಧರ್ಮಾಸ್ಪತ್ರೆ ಎಂದು ಕರೆಯುವ ಆ ಸರ್ಕಾರಿ ಆಸ್ಪತ್ರೆ ಉಡುಪಿಯ ರಥಬೀದಿಗಿಂತ ಹೊರಗಿನ ಆವರಣದಲ್ಲಿ ಈಗಿನ ಮುನಿಸಿಪಾಲಿಟಿಯ ಸತ್ಯಮೂರ್ತಿ ಹಾಲ್‌ನ ಎದುರು ಭಾಗದಲ್ಲಿದೆ. ಉಡುಪಿಯ ದೇವಸ್ಥಾನದ ಜಾಗಕ್ಕೆ ಅಷ್ಟು ಹತ್ತಿರ ಅಲ್ಲಿನ ಶ್ರೀಮಂತ ಮುಸ್ಲಿಂ ಕುಟುಂಬಕ್ಕೆ ಭೂಮಿ ಇತ್ತು. ಮತ್ತು ಅದನ್ನವರು ಸರಕಾರಿ ಆಸ್ಪತ್ರೆಗಾಗಿ ಉಚಿತವಾಗಿ ದಾನ ನೀಡಿದರು ಎಂಬುದೂ ದೊಡ್ಡದು.



ಈ ಶ್ರೀಮಂತ ಮುಸ್ಲಿಂ ಸ್ಯಾಬರ ಮನೆಯಲ್ಲಿ ಹಿಂದೆ ಪ್ರತಿದಿನ ಬೆಳಿಗ್ಗೆ ಉಡುಪಿಯಲ್ಲಿ ಊಟಕ್ಕೆ ಅಕ್ಕಿ ಇಲ್ಲದ ಯಾವ ವ್ಯಕ್ತಿಯಾದರೂ ಬೆಳಿಗ್ಗೆ ಹೋಗಿ ಒಂದು ಪಡಿ ಅಕ್ಕಿಯನ್ನು ಆ ದಿನದ ಊಟಕ್ಕೆ ತರಬಹುದಾಗಿತ್ತು. ಗಂಡು, ಹೆಣ್ಣು, ಜಾತಿ, ಮತ ಯಾವ ಭೇದವೂ ಇಲ್ಲದೆ ಆ ದಿನದ ಊಟಕ್ಕೆ ಯಾರು ಬೇಕಾದರೂ ಹೋಗಿ ಅಕ್ಕಿ ತರಬಹುದು. ಪಡಿ ಎಂದರೆ ಪಾತ್ರೆಯ ಆಕಾರದಲ್ಲಿ ಒಂದು ನಿರ್ದಿಷ್ಟ ಅಳತೆಯ ಪರಿಮಾಣ. ಅರ್ಧ ಸೇರು. ಸಾಮಾನ್ಯ ಒಬ್ಬನ ಆಹಾರಕ್ಕೆ ದಿನಕ್ಕೆ ಅಷ್ಟು ಅಕ್ಕಿ ಸಾಕು. ಬಹಳ ಜನ ಬಡವರು ಆ ಸ್ಯಾಬ್ಬರ ಮನೆಗೆ ಹೋಗಿ ಪಡಿ ಅಕ್ಕಿಯನ್ನು ಪಡೆಯುತ್ತಿದ್ದುದರಿಂದ, ಬೆಳಿಗ್ಗೆ ಅವರ ಮನೆ ಎದುರು ಪಡಿಗೆ ನಿಂತವರ ಸಾಲು ಉಂಟಾಗುತ್ತಿತ್ತು. ಆ ವೃದ್ಧೆ ತುಳುವಿನಲ್ಲಿ ''ಪಡಿಕ್ಕು ಉಂತುವೆ'' ಎಂದಾಗ ಆ ಪಡಿ ಅಕ್ಕಿ ಪಡೆಯುವವರ ಸಾಲಿನಲ್ಲಿ ಹೋಗಿ ನಿಲ್ಲುತ್ತೇನೆ ಎಂದು ಅರ್ಥ.

**ಜಯವಂತರು ಹೇಳಿದ ವಿಚಾರ**

ಆಮೇಲೆ ಜಯವಂತರು ನನಗೆ ಹೇಳಿದ ವಿಚಾರ ಎಂದರೆ, ಆ ವೃದ್ಧೆ ಗಂಡ ಸತ್ತ ಮೇಲೆ ಇರುವ ಒಬ್ಬನೇ ಮಗನನ್ನು ಬಹಳ ಕಷ್ಟಪಟ್ಟು ಬೆಳೆಸಿದ್ದಾಳೆ. ಈಗ ಮುದಿವಯಸ್ಸಿನಲ್ಲಿ ಮಗ (ಬಹುಶಃ ಸೊಸೆಯೂ ಸೇರಿ) ತನ್ನನ್ನು ಗೌರವಯುತವಾಗಿ ನೋಡಿಕೊಳ್ಳುವುದಿಲ್ಲ ಎಂಬುದವಳ ಆಕ್ಷೇಪ. ಜಯವಂತರು ''ಮಗನಿಗೆ ಒಂದು ಮಾತು ಹೇಳುತ್ತೇನೆ. ಎಲ್ಲಾ ಸರಿಯಾಗುತ್ತದೆ'' ಎಂದು ಸಮಾಧಾನ ಮಾಡಿದರು.

ಆದರೆ ಗಮನಿಸಿ – ಅನೇಕ ವರುಷಗಳಿಂದ ಉಡುಪಿಯ ತುಳು ಭಾಷೆಯಲ್ಲಿ ಸೇರಿಹೋದ ಸತ್ಯ. ತಾಯಿ ಮಗನಿಗೆ ಆತ್ಮಾಭಿಮಾನದ ವಿಚಾರದಲ್ಲಿ ಜಗಳ ಆದಾಗ, ಒಬ್ಬಳು ವೃದ್ಧ ತಾಯಿ ತಾನು ಭಿಕ್ಷೆ ಬೇಡಿಯೇನು ಎನ್ನುವುದಲ್ಲ. ಊಟಕ್ಕೆ ಇಲ್ಲದವರನ್ನು ಹಸಿವಿನಿಂದ ಸಾಯಲು ಬಿಡದ, ಉಚಿತವಾಗಿ ಅಕ್ಕಿಯನ್ನು ಕೊಡುವ ಸ್ಯಾಯಿಬ್ಬರ ಅಕ್ಕಿ ಪಡಿಗೆ ನಿಂತೇನು ಎನ್ನುವ ಧೈರ್ಯ. ವೃದ್ಧ ತುಳು ಮಾತನಾಡುವ ಶೂದ್ರ ತಾಯಿಯೊಬ್ಬಳಿಗೆ ತನ್ನ ಆತ್ಮಾಭಿಮಾನಕ್ಕೆ ಸ್ಯಾಯಿಬ್ಬರ ಪಡಿಗೆ ನಿಲ್ಲುವುದರಿಂದ ಚ್ಯುತಿ ಬಂದೀತು ಅನ್ನಿಸುವುದಿಲ್ಲ. ಅದೂ ಅಲ್ಲದೆ ಇನ್ನೊಂದು ಮಾತು ಗಮನಿಸಬೇಕು. ಆ ತುಳು ಮಾತನಾಡುವ ಶೂದ್ರ ಮುದಿತಾಯಿ, ಅಲ್ಲೇ ಪಕ್ಕದಲ್ಲಿರುವ ಉಡುಪಿ ಮಠದಲ್ಲಿ ಉಚಿತ ಊಟ ಮಾಡಿ ಜೀವನ ಕಳೆದೇನು, ನನಗೆ ಮಗನ ಹಂಗು ಬೇಡ ಎನ್ನಲಿಲ್ಲ. ತುಳು ಭಾಷೆಯೊಳಗೆ ಮುಸ್ಲಿಂ ಸಾಯಿಬ್ಬರ ಪಡಿ ಭದ್ರವಾಗಿ ನಂಬಲರ್ಹ ಜೀವನದ ಚಾರಿತ್ರಿಕ ಸತ್ಯವಾಗಿ ಉಳಿದುಕೊಂಡಿದೆ.

ಹಾಗೆಯೇ ಉಡುಪಿಯ ದೇವಸ್ಥಾನಗಳ ವಾಸ್ತುಶಿಲ್ಪ ಮೊದಲಾದವುಗಳ ಬಗ್ಗೆ ಸಂಶೋಧನೆ ಮಾಡಿದ ಚರಿತ್ರೆಯ ಬಗ್ಗೆ ವಿಶೇಷ ಅಧ್ಯಯನ ಮಾಡಿದ ಡಾ|| ಪಿ. ಗುರುರಾಜ ಭಟ್ಟರ ಕೃತಿಗಳನ್ನು ನಾವು ನೋಡಬೇಕು. ದಕ್ಷಿಣ ಕನ್ನಡ ಜಿಲ್ಲೆಯ ದೇವಸ್ಥಾನಗಳ ಅಧ್ಯಯನ ಮಾಡುತ್ತಾ ಅವರು ಅನೇಕ ಜೈನ ಬಸದಿಗಳು ಮುಂದೆ ದೇವಸ್ಥಾನಗಳಾಗಿ ಪರಿವರ್ತಿತವಾದ ಬಗ್ಗೆ ಹೇಳುತ್ತಾರೆ. ಶೈವ ದೇವಸ್ಥಾನಗಳನ್ನು ಪರಿವರ್ತಿಸಿ ವೈಷ್ಣವ ದೇವಸ್ಥಾನಗಳನ್ನಾಗಿ ಮಾಡಿದ ಬಗ್ಗೆ ಹೇಳುತ್ತಾರೆ. (ಅವರು ಉಡುಪಿಯ ಶ್ರೀಮದನಂತೇಶ್ವರ ದೇವಸ್ಥಾನದ ಬಗ್ಗೆ ಮಾಡಿದ ಅಧ್ಯಯನ ಈ ಬಗ್ಗೆ ಬಹಳ ಉತ್ತಮವಾದೊಂದು ಓದು.) ಆದರೆ, ಉಡುಪಿಯ ಪ್ರಖ್ಯಾತ ದೇವಸ್ಥಾನಗಳ ಸಮೀಪವೇ ಅಷ್ಟು ಶ್ರೀಮಂತ, ಪ್ರಭಾವಿ ಮುಸ್ಲಿಂ ಮನೆತನಗಳಿದ್ದೂ ಹಿಂದೂ ನಂಬಿಕೆಗಳಿಗೆ, ದೇವಸ್ಥಾನಗಳಿಗೆ ಮುಸ್ಲಿಮರಿಂದ ಅನ್ಯಾಯವಾದುದರ ಬಗ್ಗೆ ಆಧಾರ ಸಿಕ್ಕುವುದಿಲ್ಲ.

**ಬಪ್ಪನಾಡು ದೇವಸ್ಥಾನ**

ಹಿಂದೂ ಮುಸ್ಲಿಂ ಸಾಮರಸ್ಯದ ಸಾರ್ವಜನಿಕ ವಿಶ್ವಾಸ ೧೯೭೦ರ ದಶಕದ ಆಚೀಚೆ ಬಪ್ಪನಾಡಿನ ದೇವಸ್ಥಾನದ ಸಂದರ್ಭದಲ್ಲಿ ವ್ಯಕ್ತವಾಗುತ್ತಿತ್ತು. ಉಡುಪಿಯಿಂದ ಮಂಗಳೂರಿಗೆ ಹೋಗುವ ಹೈವೇನಲ್ಲಿ ಮುಲ್ಕಿ ಎಂಬ ಜಾಗಕ್ಕೆ ಸ್ವಲ್ಪ ಮೊದಲು ಬಪ್ಪನಾಡು ಎಂಬ ಸ್ಥಳ ಬರುತ್ತದೆ. ಅಲ್ಲಿಯ ದೇವಿ ಪ್ರಸಿದ್ಧ. ಬಪ್ಪನಾಡಿನ ದೇವಾಲಯವನ್ನು ಕಟ್ಟಿಸಿದವರು ಬಪ್ಪಬ್ಯಾರಿ ಎಂಬ ಮುಸ್ಲಿಂ. ಆ ದೇವಸ್ಥಾನದ ಬಾಗಿಲು ಪಶ್ಚಿಮಕ್ಕೆ. ವಾಸ್ತುಶಾಸ್ತ್ರ ಪ್ರಕಾರ ದೇವಸ್ಥಾನದಲ್ಲಿ ಪಶ್ಚಿಮ ದ್ವಾರ ಒಪ್ಪಿತವಲ್ಲ. ಆ ಬಪ್ಪನಾಡಿನಲ್ಲಿ ಬಲುದೊಡ್ಡ ಡೋಲುಗಳು (ನಗಾರಿಗಳು) ಇದ್ದವು. ಯಾವ ಕೆಲಸಕ್ಕೂ ಉಪಯೋಗಕ್ಕೂ ಬಾರದವರನ್ನು ''ಬಪ್ಪನಾಡಿಗೆ ಡೋಲು ಗುದ್ದಲಿಕ್ಕೆ ಹೋಗು'' ಎಂದು ಮೂದಲಿಸುವುದು ಇಂದಿಗೂ ದಕ್ಷಿಣ ಕನ್ನಡದಲ್ಲಿ ಉಳಿದಿರುವ ಮಾತು.

ಈ ಬಪ್ಪನಾಡಿನ ದೇವಸ್ಥಾನದ ಕಥೆಯನ್ನು ಆಧಾರವಾಗಿಟ್ಟುಕೊಂಡು 'ಬಪ್ಪನಾಡು ಕ್ಷೇತ್ರ ಮಹಾತ್ಮೆ' ಎಂಬ ಒಂದು ಯಕ್ಷಗಾನ ಪ್ರಸಂಗ ದಕ್ಷಿಣ ಕನ್ನಡ ಜಿಲ್ಲೆಯಾದ್ಯಂತ ೧೯೬೦ರ ಕೊನೆಯಲ್ಲಿ ಬಹಳ ಪ್ರಸಿದ್ಧವಾಗಿತ್ತು. ಅದರಲ್ಲಿ ಪ್ರಸಿದ್ಧ ಯಕ್ಷಗಾನ ಕಲಾವಿದರಾದ ದಿವಂಗತ ಶೇಣಿ ಗೋಪಾಲಕೃಷ್ಣ ಭಟ್ಟರು ಬಪ್ಪಬ್ಯಾರಿಯ ಪಾತ್ರ ಮಾಡುತ್ತಿದ್ದರು. ಪ್ರಸಿದ್ಧ ಹಾಸ್ಯಗಾರ ವಿಟ್ಲ ಜೋಶಿಯವರು ಉಸ್ಮಾನ್‌ನ ಪಾತ್ರ ಮಾಡುತ್ತಿದ್ದರು. ಶೇಣಿಯವರ ಅಭಿನಯದ ಆ ಪ್ರಸಂಗಕ್ಕೆ ಜನ ಕಿಕ್ಕಿರಿದು ಸೇರುತ್ತಿದ್ದರು. ನಾನೇ ಆ ಪ್ರಸಂಗದ ಆಟವನ್ನು ಕೆಲವು ಬಾರಿ ನೋಡಿದ್ದೇನೆ. ಹಿಂದೂ ಮುಸ್ಲಿಂ ಚರಿತ್ರೆಯ ಬಗ್ಗೆ ಸಾರ್ವಜನಿಕವಾಗಿ ಜನ ವಿಶ್ವಾಸ, ನಂಬುಗೆ ವ್ಯಕ್ತಪಡಿಸುತ್ತಿದ್ದ ಕಾಲ ಅದು. ಬಪ್ಪಬ್ಯಾರಿಯ ಪಾತ್ರ ಮಾಡುವಲ್ಲಿ ತಮ್ಮೊಬ್ಬ ಆಪ್ತ ಮುಸ್ಲಿಂ ಸ್ನೇಹಿತನ ಪ್ರಭಾವ ತನ್ನ ಮೇಲೆ ಆಗಿದೆ ಎಂಬುದಾಗಿ ಶೇಣಿಯವರು ಹೇಳಿದ ವಿವರವಾದ ಒಂದು ಚರ್ಚೆಯನ್ನು ನಾನು ಸ್ವಲ್ಪ ಸಮಯದ ಹಿಂದೆ ಇಂಟರ್‌ನೆಟ್‌ನಲ್ಲಿ ಓದಿದ್ದೆ. ಬಹುಶಃ ಈಗ ಅಂತಹ ಒಂದು ಹಿಂದೂ-ಮುಸ್ಲಿಂ ಸಾಮರಸ್ಯದ, ಮುಸ್ಲಿಮನೊಬ್ಬ ಕಟ್ಟಿದ ಹಿಂದೂ ದೇವಸ್ಥಾನದ ಯಕ್ಷಗಾನ ಪ್ರಸಂಗ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಡೆಯುವುದು ಸಾಧ್ಯವಿಲ್ಲದಾಗಿದೆ.

**ಕಲ್ಪಿಸಿ ಅನುಭವಿಸುವ ಚರಿತ್ರೆಯ ಅನ್ಯಾಯ**

ಹಿಂದೂ-ಮುಸ್ಲಿಂ ಸಾಮರಸ್ಯದ ಬಗೆಗಿನ ಅಪನಂಬಿಕೆ ತರ್ಕಬದ್ಧವಾದ ಚರಿತ್ರೆಯ ಸತ್ಯಾನ್ವೇಷಣೆಯ ನಿಜರೂಪವೋ ಎಂಬಂತೆ ಎಲ್ಲಾ ಕಡೆ ವಿಜೃಂಭಿಸುತ್ತಿರುವುದು ನಿರ್ಮೋಹದ, ಸಹಜ ಮನುಷ್ಯ ಪ್ರೀತಿ ಬಗ್ಗೆ ಆಸಕ್ತಿ ಉಳ್ಳವರಿಗೆಲ್ಲಾ ಆತಂಕದ ವಿಚಾರವಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹುಟ್ಟಿ ಬೆಳೆಯದ, ಆದರೆ ತಮ್ಮ ಹಿರಿಯರು ಆ ಮೂಲದವರು ಎಂದುಕೊಳ್ಳುವ ಯುವ ಜನಾಂಗದ ಹೊಸ ಮನಸ್ಸು ಕೂಡಾ ತಾವು ಕಲ್ಪನೆಯಲ್ಲಿ ಮಾತ್ರ ಅನುಭವಿಸುವ ಚರಿತ್ರೆಯ ಅನ್ಯಾಯದ ಬಗ್ಗೆ ತೀವ್ರ ಆತಂಕದಿಂದ ಕೆಲವೊಮ್ಮೆ ಸಿಡಿದೇಳುವ ಧಾಟಿಯಲ್ಲಿ ಮಾತನಾಡುತ್ತಾರೆ. ಕಂಪ್ಯೂಟರ್ ವಿದ್ಯಾಭ್ಯಾಸ ಪಡೆದ, ತಿಂಗಳೊಂದಕ್ಕೆ ಲಕ್ಷಗಟ್ಟಲೆ ಸಂಬಳ ಪಡೆವ, ಬಹು ಬುದ್ಧಿವಂತರೆಂದು ಸಮಾಜದಲ್ಲಿ ಪರಿಗಣಿತರಾದ ಅನೇಕ ಕಂಪ್ಯೂಟರ್ ಪರಿಣತರಲ್ಲೂ ಈ ಚರಿತ್ರೆಯ ಅನ್ಯಾಯಗಳನ್ನು ಸಾಬೀತು ಮಾಡುವ ತುರ್ತು ಯಾಕೆ ಎಂದು ಅನೇಕ ಸಲ ಅರ್ಥವಾಗುವುದಿಲ್ಲ.

[illegible]

ಬುದ್ಧಿವಂತರು ಎಂದು ಅನಿಸಿಕೊಂಡವರ ಇಂಟರ್‌ನೆಟ್ ಪ್ರತಿಲೋಕದಲ್ಲಿ ನಮ್ಮ ಇಂತಹ ಸಾಮಾಜಿಕ ವಿಚಾರಗಳ ಬಗ್ಗೆ ಏನು ಚಿಂತನೆ ನಡೆಯುತ್ತದೆ ಎಂಬುದರ ನಾಡಿಮಿಡಿತದ ಪರಿಚಯ ಇರಬೇಕು ಎಂಬ ಕಾರಣದಿಂದ ನಾನು ಕೆಲವಾರು ಇ-ಮೈಲ್ ಗ್ರೂಪ್‌ಗಳ ಸದಸ್ಯನಾಗಿ ಕಂಪ್ಯೂಟರ್ ಪ್ರತಿಲೋಕದ ಚರ್ಚೆಗಳನ್ನು ಆಗಾಗ ಗಮನಿಸುತ್ತಾ ಇರುತ್ತೇನೆ. ಅಂತಹ ಸದಸ್ಯರು ಎಷ್ಟೇ ವ್ಯಗ್ರರಾದರೂ ನಾನು ಮತೀಯ ಸಾಮರಸ್ಯದ ಮಾನವೀಯ ಅಗತ್ಯದ ಮಾತುಗಳನ್ನು ಆಗಾಗ ಅಲ್ಲಿ ಹೇಳುತ್ತಾ ಇರುತ್ತೇನೆ. ಭಾರತದ ಬಹು ಬುದ್ಧಿವಂತರಿಗೆ ಮಾತ್ರ ಅವಕಾಶ ಸಾಧ್ಯ ಎಂದು ನಂಬಲಾದ ಬಹು ರಾಷ್ಟ್ರೀಯ ಕಂಪೆನಿಗಳಲ್ಲಿ ಕೆಲಸ ಮಾಡುವ ಮಂದಿಯ ಇಂಟರ್‌ನೆಟ್ ಇ-ಮೈಲ್‌ಗ್ರೂಪ್ ಒಂದರಲ್ಲಿ ದಕ್ಷಿಣ ಕನ್ನಡ ಜಿಲ್ಲೆ ಚರಿತ್ರೆ ಬಗ್ಗೆ ಇತ್ತೀಚೆಗೆ ಬರೆದ ಮಾತು ಹೀಗಿದೆ :

"ನಮ್ಮ ಸಂಬಂಧಿಕರ ಊರು ಹೊನ್ನಾವರದ ಬಳಿಯ ಒಂದು ಹಳ್ಳಿ. ಹಿಂದಿನ ಕಾಲದಲ್ಲಿ ಅದು ದುರ್ಗಮ್ಯವಾದ ಜಾಗ. ನನ್ನ ಹಿರಿಯರ ಊರೂ ಒಂದು ಹಳ್ಳಿ. ಅದು ಕುಂದಾಪುರದ ಹತ್ತಿರ ಇದೆ. ಹಿಂದಿನ ಕಾಲದಲ್ಲಿ ಅದು ದುರ್ಗಮ್ಯವಾದ ದ್ವೀಪ. ಈ ಎರಡು ಹಳ್ಳಿಗಳಿಗೂ ಟಿಪ್ಪುವಿನ ಸೈನಿಕರು ಬಂದಿದ್ದರಂತೆ! ನಮ್ಮ ಮಾವನವರ ಈಗಿನ ಮನೆಯ ಹತ್ತಿರ ಒಂದು ಕಾಡುದಾರಿ ಇದೆ. ಅದಕ್ಕೆ ಟಿಪ್ಪೂ ಓಣಿ ಅಂತ ಹೆಸರು. ಟಿಪ್ಪೂವಿನ ಸೈನಿಕರು ಬರುತ್ತಾರೆ ಎಂದು ಗೊತ್ತಾದಾಗ ಊರಿನ ಬ್ರಾಹ್ಮಣರು ರಾತ್ರಿಯ ಹೊತ್ತು ತೆಂಗಿನ ಗರಿಗಳಿಗೆ ಬೆಂಕಿ ಕೊಟ್ಟರಂತೆ. ದೊಡ್ಡ ಬೆಂಕಿಯಾಯಿತಂತೆ. ಅದನ್ನು ಕಂಡು ಸೈನಿಕರು ಬಹಳಷ್ಟು ಜನರಿದ್ದಾರೆ ಎಂದು ಹೆದರಿ ಆ ಓಣಿಯ ಮೂಲಕ ಓಡಿಹೋದರಂತೆ! ಹತ್ತಿರದಲ್ಲೇ ಬಸವರಾಜ ದುರ್ಗ ಅಂತ ಒಂದು ದ್ವೀಪವಿದೆ. ಅಲ್ಲಿ ಒಂದು ದುರ್ಗವಿದೆ. ಅಲ್ಲಿಗೆ ಬಂದಿದ್ದರಂತೆ ಟಿಪ್ಪೂವಿನ ಸೈನಿಕರು.

"ಈಗ ನಮ್ಮೂರಿಗೆ ಟಿಪ್ಪು ಸೈನಿಕರು ಬಂದ ಕತೆ. ಊರಲ್ಲಿ ಬ್ರಾಹ್ಮಣರ ಮನೆಯ ಹಿತ್ತಿಲಿನಲ್ಲಿ ನಾಗರ ಬನವಿರುತ್ತದೆ. ಶಿಲೆಯ ಮೇಲೆ ಹಾವಿನ ಕೆತ್ತನೆ. ಅದನ್ನು ಪೂಜಿಸುತ್ತಾರೆ. ಟಿಪ್ಪು ಸೈನಿಕರು ಆ ಕಡೆಯಲ್ಲಿ ನಾಗರ ಬನವನ್ನು ಹಾಳುಗೆಡವುತ್ತಿದ್ದರಂತೆ. ಅದಕ್ಕೆ ನಮ್ಮ ಮನೆಯ ಹಿಂದಿನ ನಾಗರ ಬನದಲ್ಲಿ ನಮ್ಮ ಹಿರಿಯರು ಮೂಲಶಿಲೆಯನ್ನು ತೆಗೆದು ಒಂದು ಕೆತ್ತನೆ ಇಲ್ಲದ ಶಿಲೆಯನ್ನು ಪ್ರತಿಷ್ಠಾಪಿಸಿ ಅದನ್ನೇ ಗುಟ್ಟಾಗಿ ಪೂಜಿಸುತ್ತಿದ್ದರಂತೆ! ನಮ್ಮ ಹಿರಿಯರಷ್ಟೇ ಅಲ್ಲ. ಎಲ್ಲರೂ. ಈಗ ಉಳಿದಿರುವುದು ನಮ್ಮ ಮತ್ತು ಮತ್ತೊಬ್ಬರ ಮನೆಯಲ್ಲಿ ಮಾತ್ರ.

ಹಳ್ಳಿಹಳ್ಳಿಗಳ ಇತಿಹಾಸದಲ್ಲಿ ಈ ತರಹದ ಇನ್ನೆಷ್ಟು ಕತೆಗಳು ಹುದುಗಿವೆಯೋ ಏನೋ !!"

ತರ್ಕಬದ್ಧವೆಂದು ಮೇಲುನೋಟಕ್ಕೆ ಗೋಚರಿಸುವಂತೆ ಮಂಡಿಸಲ್ಪಟ್ಟ ಈ ವಿಚಾರಗಳನ್ನು ಬರೆದವರ ಹಿರಿಯರು ದಕ್ಷಿಣ ಕನ್ನಡದಿಂದ ಬಂದವರು. ಇದನ್ನು ಬರೆದ ಬಹು ಬುದ್ಧಿವಂತರಾದ ಕಂಪ್ಯೂಟರ್ ಎಂಜಿನಿಯರ್‌ಗಳು ಹುಟ್ಟಿಬೆಳೆದದ್ದು ನಗರಗಳಲ್ಲಿ, ಬೆಂಗಳೂರು, ಬೊಂಬಾಯಿ, ಅಮೆರಿಕಾ ಹೀಗೆ ಕಾರ್ಯವ್ಯಾಪ್ತಿ. ಆದರೆ, ೧೭೯೯ರಲ್ಲಿ ತೀರಿಕೊಂಡ ಟಿಪ್ಪುವಿನ ಸೈನಿಕರು ಮಾಡಿದ ಅನ್ಯಾಯಕ್ಕೆ ಟಿಪ್ಪುವಿನ ಮತಾಂಧತೆಯನ್ನೇ ಕಾರಣಮಾಡಿ ಅದು ನಿನ್ನೆ ಮೊನ್ನೆ ನಡೆದ ಹಾಗೆ ಮತ್ತು ನಂಬುವಂತೆ ಬರೆಯುವ ಧಾಟಿ ನೋಡಿ. ಅದರ ಮೇಲೆ ಹಳ್ಳಿಹಳ್ಳಿಗಳಲ್ಲಿ ಈ ತರಹದ ಇನ್ನೆಷ್ಟು ಕತೆಗಳು ಹುದುಗಿವೆಯೋ ಏನೋ ಎಂಬ ಅಸಂಖ್ಯಾತ ಅನ್ಯಾಯದ ಸೂಚನೆ. ದೇವಸ್ಥಾನಗಳನ್ನು ಲೂಟಿ ಮಾಡುವುದಕ್ಕಿಂತ ಒಂದು ಹೆಜ್ಜೆ ಮುಂದೆ ಹೋಗಿ ಪ್ರತಿ ಬ್ರಾಹ್ಮಣರ ಮನೆಯ ಹಿತ್ತಲಲ್ಲೂ ಇರುವ ನಾಗರಕಲ್ಲನ್ನೂ ಕೂಡಾ ನಾಶಮಾಡುವಷ್ಟು ಮತಾಂಧ ದುಷ್ಟ ಎಂದು ಟಿಪ್ಪುವಿನ ಬಗ್ಗೆ ಪರೋಕ್ಷ ಆರೋಪ.

ಕುಂದಾಪುರದಲ್ಲಿ ಹೇಗೋ ಗೊತ್ತಿಲ್ಲ. ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲೂಕಿನ ನಮ್ಮ ಪಡ್ನೂರು ಗ್ರಾಮದಲ್ಲಿ ಪ್ರತಿ ಬ್ರಾಹ್ಮಣರ ಮನೆಯ ಹಿತ್ತಲಲ್ಲೂ ನಾಗರಬನ ಇಲ್ಲ. ನನ್ನ ಪಡ್ನೂರಿನ ಸರವು ಕುಕ್ಕಿಮನೆ ೧೮೫೮ರಲ್ಲಿ, ಅಂದರೆ ಇಂದಿಗೆ ೧೫೦ ವರುಷಗಳ ಹಿಂದೆ ಕಟ್ಟಿದ. ನನ್ನ ತಂದೆಯವರು ಹಾಗೂ ಇತರ ಸಂಬಂಧಿಕರು ಈಗಲೂ ವಾಸಮಾಡುತ್ತಿರುವ ಎರಡು ಮಾಳಿಗೆಯ ಮನೆ. ಆ ಮನೆ ಹಿತ್ತಲಲ್ಲಿ ನಾಗರಬನ ಅಥವಾ ನಾಗರ ಕಲ್ಲು ಇಲ್ಲ. ನಮ್ಮ ನಾಗರ ಕಲ್ಲುಗಳು ಗದ್ದೆ ತೋಟಗಳ ಬದಿಯ ಬನದಲ್ಲಿ ಇರುತ್ತವೆ. ಗುಡ್ಡದ ಬದಿ, ತೊರೆಯ ತಡಿ ಹೀಗೆ ಮರಗಿಡಗಳು ದಟ್ಟವಾಗಿ ಬೆಳೆದ ಬನದ ಒಳಗೆ ಇರುತ್ತವೆ. ನಮ್ಮ ಹಾಗೂ ಸುತ್ತ ಮುತ್ತಲಿನ ಹಳ್ಳಿಗಳಲ್ಲಿ ಇತ್ತೀಚೆಗೆ ಆ ಬನದ ಮರಗಳನ್ನೆಲ್ಲಾ ಕಡಿದು ಮಾರಿ ಅಥವಾ ಮೋಪು ಮಾಡಿ ಅಲ್ಲಿ ಸಿಮೆಂಟಿನ ಒಂದು ಪುಟ್ಟ ಗುಡಿ ಕಟ್ಟಿಸಿರುವುದನ್ನು ನಾನೀಗ ಹೆಚ್ಚಾಗಿ ಕಾಣುತ್ತೇನೆ. ನಮ್ಮ ಭೂತಸ್ಥಾನದ (ಬದಿ) ಹತ್ತಿರದ ಗುಡ್ಡದ ಬುಡದಲ್ಲೊಂದು ನಾಗರಬನವಿತ್ತು. ಅದನ್ನು ನಮ್ಮೂರ ಹಿಂದೂವೇ ಕಡಿದು ಮಾರಿದ. ಅಲ್ಲೀಗ ನಾಗತಂಬಿಲ ನಿಂತಿದೆ. ಪುಟ್ಟದೊಂದು ಸಿಮೆಂಟಿನ ಪ್ರತಿಷ್ಠಾಪನೆ ಮಾಡಿ, ಸುಬ್ರಹ್ಮಣ್ಯಕ್ಕೆ ಬೆಳ್ಳಿನಾಗರ ಅರ್ಪಿಸಿ ಅವರೆಲ್ಲಾ ದೋಷಮುಕ್ತರಾಗಿದ್ದಾರೆ. ಆ ನಾಗರಬನ ನಾಶ ಮಾಡಿದ ಬಗ್ಗೆ ಒಂದು ಪಬ್ಲಿಕ್ ಇಂಟರೆಸ್ಟ್ ಲಿಟಿಗೇಷನ್ (ಪಿ.ಐ.ಎಲ್.) ಹೈಕೋರ್ಟಿನಲ್ಲಿ ಹಾಕಲು ಸಾಧ್ಯವೋ ಎಂದು ವಿಚಾರಿಸಿದಾಗ, ನಮ್ಮ ಹಳ್ಳಿಯ ಹಿರಿಯರಿಂದ ಆ ಗುಡ್ಡದ ಜಾಗ ಆ ಹಿಂದೂವಿನ ಪಟ್ಟೆಭೂಮಿ (ಸ್ವಂತದ ಭೂಮಿ) ಎಂದು ತಿಳಿದು ಸುಮ್ಮನಾದೆ.

ಟಿಪ್ಪುವಿನ ಸೈನಿಕರು ಕೇವಲ ದೇವಸ್ಥಾನಗಳನ್ನು ನಾಶಮಾಡಿದರೆ ಸಾಕಾಗುವುದಿಲ್ಲ, ಟಿಪ್ಪು ಎಂತಹ ಹಿಂದೂ ವಿರೋಧಿ ಎಂದರೆ ಅವನಿಗೆ ಬ್ರಾಹ್ಮಣರ ಮನೆಯ ಹಿತ್ತಿಲಿನ ನಾಗರಕಲ್ಲುಗಳನ್ನೂ ಬಿಡಲು ಸಾಧ್ಯವಿಲ್ಲ ಎಂಬುದನ್ನು ಸಾಬೀತುಪಡಿಸಬೇಕು. ನಾನು ಕೇಳಿದೆ : ಟಿಪ್ಪುವಿನ ಸೈನಿಕರಿಗೆ ಹೀಗೆ ಹಳ್ಳಿಯ ಬ್ರಾಹ್ಮಣರ ಮನೆ ಮನೆ ಜಾಲಾಡಿ ನಾಗರಕಲ್ಲುಗಳನ್ನು ನಾಶಪಡಿಸುವುದೇ ಕೆಲಸವಾಗಿತ್ತೋ ಅಥವಾ ಅವರು ಬೇರೇನಾದರೂ ಕೆಲಸಕ್ಕೆ ಬಂದಿದ್ದರೋ ? ಹೀಗೆ ಆ ಸೈನಿಕರು ಮನೆ ಹಿತ್ತಲಿಗೆ ಧಾಳಿ ಮಾಡುವಾಗ ಮನೆ ಒಳಗೆ ಇದ್ದವರನ್ನು ಏನು ಮಾಡಿದರು ? ಸೈನಿಕರು ಬರುತ್ತಾರೆ ಎಂದು ತಿಳಿದು ರಾತ್ರೆ ತೆಂಗಿನ ಮರದ ಗರಿಗಳನ್ನು ಸುಡಲು ಮತ್ತು ಸೈನಿಕರನ್ನು ಎದುರಿಸಲು ೧೭೯೯ರ ಮೊದಲು ಆ ಹಳ್ಳಿಯಲ್ಲಿ ಎಷ್ಟು ಬ್ರಾಹ್ಮಣ ಮನೆಗಳಿದ್ದವು. ಮಲೆನಾಡು, ಕಾಸರಗೋಡು, ಗೋಕರ್ಣ ನಡುವಿನ ಚರಿತ್ರೆ ಪ್ರಕಾರ ಕದಂಬರಾಜ ಯಜ್ಞಕ್ಕಾಗಿ ಬ್ರಾಹ್ಮಣರನ್ನು ಕರೆಸಿದ. ಉಡುಪಿಯಲ್ಲಿ ವಾದಿರಾಜರ ಕಾಲದಲ್ಲಿ ಎಷ್ಟು ಕಮ್ಮಿ ಬ್ರಾಹ್ಮಣರಿದ್ದರೆಂದರೆ, ವಾದಿರಾಜರು ಮಟ್ಟಿಯಲ್ಲಿ ಅನೇಕ ಬೆಸ್ತ ಜನಾಂಗದವರನ್ನು ಬ್ರಾಹ್ಮಣರಾಗಿ ಪರಿವರ್ತಿಸಿದರು. ಇಂದಿಗೂ ಉಡುಪಿಯ ಶ್ರೇಷ್ಠ ಬ್ರಾಹ್ಮಣರು ಮದುವೆ ಸಂಬಂಧಗಳಲ್ಲಿ ಮಟ್ಟಿಯ ಬ್ರಾಹ್ಮಣರಿಗೆ ಪ್ರಥಮ ಪ್ರಾಶಸ್ತ್ಯ ಕೊಡುವುದಿಲ್ಲ. ಚರಿತ್ರೆಯ ಅನ್ಯಾಯದ ಬಗ್ಗೆ ಕಣ್ಣು ತೆರೆಸಲು ಪ್ರಯತ್ನಿಸುವ ಈ ನಗರ ಸಂಜಾತರ ಹಿರಿಯರ ಹಳ್ಳಿ ಊರಲ್ಲಿ ೨೫೦ ವರುಷಗಳ ಮೊದಲು ಎಷ್ಟು ಬ್ರಾಹ್ಮಣ ಮನೆಗಳಿದ್ದವು ? ಟಿಪ್ಪುವಿನ ಸೈನ್ಯದಲ್ಲಿ ದೇವಸ್ಥಾನ, ನಾಗರ ಬನಗಳನ್ನು ಒಡೆಯಲು ನಿಯೋಜಿತರಾದ ಕೇವಲ ಮುಸ್ಲಿಂ ಸೈನಿಕರು ಮಾತ್ರ ಇದ್ದರೋ ಅಥವಾ ಆತನ ಸೈನ್ಯದಲ್ಲಿ ಹಿಂದೂ ಮತ್ತಿತರ ಸೈನಿಕರೂ ಇದ್ದರೂ ? ಮನೆ ಮನೆ ಹುಡುಕಿ ನಾಗರ ಬನಗಳಿಗೆ ದಾಳಿ ಮಾಡಿದ ಟಿಪ್ಪು ಸೈನಿಕರು ಮುಸ್ಲಿಮರೊ ? ಹಿಂದೂಗಳೊ ? ಮುಸ್ಲಿಮ್ ಸೈನಿಕರು ಮಾತ್ರ ಧಾಳಿಗೆ ಬಂದಿದ್ದರೆ ಆ ಹೊತ್ತು ಉಳಿದ ಹಿಂದೂ ಸೈನಿಕರು ಏನು ಮಾಡುತ್ತಿದ್ದರು ?

ಚರಿತ್ರೆಯ ಅನ್ಯಾಯವನ್ನು ಸರಿಪಡಿಸಲು ಹೊರಟ ಇಂಟರ್‌ನೆಟ್‌ನ ಪ್ರತಿ ಪ್ರಪಂಚದಲ್ಲಿ ಇವೆಲ್ಲಾ ಅಸಂಬದ್ಧ ಪ್ರಶ್ನೆಗಳು ಅನಿಸೀತು. ಟಿಪ್ಪುವಿನ ದಿವಾನ್ ಕೂಡಾ ಹಿಂದು. ಆದ್ದರಿಂದ ಟಿಪ್ಪು ಸೈನ್ಯದಲ್ಲಿ ಹಿಂದೂಗಳು ಇಲ್ಲದೆ ಇರಲು ಕಾರಣವಿಲ್ಲ ಎಂಬ ವಾದ ಕೂಡಾ ಹುಂಬತನದ್ದು ಅನಿಸೀತು. ಟಿಪ್ಪೂವಿಗೆ ಮೋಸಮಾಡಿದ ಮೀರ್‌ಸಾದಿಕ್ ಮುಸ್ಲಿಂ.

ಆದರೂ ಪಟ್ಟುಬಿಡದೆ ನಾನು ಕೇಳುವ ಪ್ರಶ್ನೆಗಳಿಗೆ ಇಂಟರ್‌ನೆಟ್‌ನ ಹಿಂದೂ ವೀರರ ಕೈಯಲ್ಲಿ ಬೈಗಳು ತಿನ್ನುತ್ತಾ ಅವರ ಚಿಂತನಾಕ್ರಮವನ್ನು ವೈಜ್ಞಾನಿಕವಾಗಿ ಪ್ರೇರೇಪಿಸಲು ಪ್ರಯತ್ನಿಸುತ್ತಾ ಇರುತ್ತೇನೆ. ತನ್ನ ಹಿರಿಯರು ಹುಟ್ಟಿದ ಊರಿಗೆ ಶತಮಾನಗಳ ಹಿಂದೆ ಮಾಡಿದ ಅನ್ಯಾಯಕ್ಕೆ ಸಂಕಟಪಡುವ ದಕ್ಷಿಣ ಕನ್ನಡ ಮೂಲದವರಿಗೆ ಯಾವುದೂ ಅಷ್ಟು ಸರಳವಾಗಿರುವುದಿಲ್ಲ ಎಂದು ನಾನು ಹೇಳುತ್ತಾ ಇರುತ್ತೇನೆ. ಒಬ್ಬ ರಾಜನಿಗೆ ಅವನ

ವೈಯಕ್ತಿಕ ನಂಬುಗೆ ಹಾಗೂ ಆಡಳಿತದ ಅಗತ್ಯ ಎರಡೂ ಇರುತ್ತವೆ. ವೈಯಕ್ತಿಕ ನಂಬುಗೆಯಲ್ಲೂ ಹಿಂದೂ ದ್ವೇಷ ಸರಳವಾಗಿರುವುದಿಲ್ಲ ಅದಕ್ಕೆ ಅನೇಕ ಮಿಶ್ರಣದ ಛಾಯೆಗಳಿರುತ್ತವೆ. ಉದಾಹರಣೆಗೆ, ಟಿಪ್ಪುಗೆ ಶ್ರೀರಂಗಪಟ್ಟಣದ ಆರಾಧ್ಯದೈವ 'ಶ್ರೀರಂಗ'ನಲ್ಲಿ ಅಪಾರ ನಂಬುಗೆ ಇತ್ತು. ಔಷಧಗಳ ದೇವರು ಎಂದು ನಂಜನಗೂಡಿನ ದೇವರನ್ನು ನಂಬಿ ಆತನನ್ನು ಹಕೀಮ್ ನಂಜುಂಡ ಎಂದೇ ಕರೆಯುತ್ತಿದ್ದ. ಇಂಟರ್‌ನೆಟ್ ಜ್ಞಾನಿಗೆ ಒಪ್ಪಿಗೆ ಆಗದಿದ್ದರೂ ನನ್ನ ಸಮಾಧಾನಕ್ಕಾಗಿ ಹಿರಿಯ ಸಾಹಿತಿ ಮಾಸ್ತಿ ವೆಂಕಟೇಶ್ ಅಯ್ಯಂಗಾರರ 'ಬಿಳಿಗಿರಿ ರಂಗ' ಕಥೆಯ ಮೊದಲ ಪ್ಯಾರಾದ ಈ ಕೆಳಗಿನ ಭಾಗ ಮುಸ್ಲಿಮನಾದ ಟಿಪ್ಪುವಿನ ಸಂಕೀರ್ಣ ಮನಸ್ಥಿತಿಯನ್ನು ಹೇಗೆ ಸೂಚಿಸುತ್ತದೆ ನೋಡಿ ಎಂದೆ.

ಮಾಸ್ತಿ ಬರೆಯುತ್ತಾರೆ: ''ಬೆಟ್ಟದ ಮೇಲೆ ಶ್ರೀನಿವಾಸನ ದೇವಾಲಯವಿದೆ. ಇವನೇ ಬಿಳಿಗಿರಿ ರಂಗ. ಟಿಪ್ಪು ಸುಲ್ತಾನ ತನ್ನ ಅಧಿಕಾರಿಗಳಿಗೆ ''ಯಾವ ಊರಿನಲ್ಲೇ ಆಗಲಿ ರಂಗನಾಥನ ದೇವಾಲಯಕ್ಕೆ ತಂಟೆ ಮಾಡಬೇಡಿ'' ಎಂದು ಹೇಳಿದ್ದನಂತೆ. ಮುಸ್ಲಿಂ ಅಧಿಕಾರಿ ಬಂದು, ಇಲ್ಲಿ ಯಾವ ದೇವರು ಎಂದು ಕೇಳಿದಾಗ, ''ರಂಗನಾಥ ಎಂದರೆ ದೇವಾಲಯ ಉಳಿಯಿತು; ಶ್ರೀನಿವಾಸ ಎಂದರೆ ಉಳಿಯುವುದೋ ಇಲ್ಲವೋ ಸಂದೇಹ. ''ರಂಗನಿಗೇ ಶ್ರೀನಿವಾಸ ಎಂದು ಇನ್ನೊಂದು ಹೆಸರು, ಆದ್ದರಿಂದ ಇದೂ ರಂಗನಾಥನ ದೇವಾಲಯವೇ'', ಎಂದು ವಿವರಿಸಿ ಹೇಳಬಹುದು. ಅಧಿಕಾರಿ ಒಪ್ಪಿದರೆ ಸಮ; ''ಸುಳ್ಳು ಹೇಳುತ್ತಿದ್ದೀರಿ'' ಎಂದರೆ ಸಮರ್ಥನೆ ಯಾರು ಹೇಳಬೇಕು? ಶ್ರೀನಿವಾಸ, ರಂಗನಾಥ ಎರಡೂ ಒಂದೇ ಆಗಿರುವಾಗ ಶ್ರೀನಿವಾಸ ಎಂದು ಹೇಳಿ ಚರ್ಚೆಯಲ್ಲಿ ತೊಡಗಿಕೊಳ್ಳುವುದಕ್ಕಿಂತ ರಂಗನಾಥ ಎಂದು ಹೇಳಿ ಅದರಿಂದ ತಪ್ಪಿಸಿಕೊಳ್ಳುವುದು ಸುಖ ಎಂದು ಜನರಿಗೆ ಕಂಡಿತು. ಆದ್ದರಿಂದಲೇ ಬಿಳಿಗಿರಿ, ಮಾಗಡಿ ದೇವಾಲಯಗಳ ಶ್ರೀನಿವಾಸನೂ ಶೀಬಿಯ ನರಸಿಂಹನೂ ರಂಗನೆಂದು ಪ್ರಸಿದ್ಧರಾದರು.''

ಇದು ದಕ್ಷಿಣ ಕನ್ನಡದಲ್ಲಿ ಹುಟ್ಟದೆ ದೂರದಲ್ಲಿ ಹುಟ್ಟಿ ಬೆಳೆದ ದಕ್ಷಿಣ ಕನ್ನಡದವರ ಮನೋಭಾವವಾಯಿತು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೯೭೦ರ ಬಳಿಕ ಹುಟ್ಟಿ ಬೆಳೆದ ಅನೇಕ ಯುವಕರ ಮನಃಸ್ಥಿತಿ ಯಾಕೆ ಕೋಮು ಸಾಮರಸ್ಯದಿಂದ ಹಿಂದೂ ಮೂಲಭೂತವಾದದ ಕಡೆಗೆ ಹೆಚ್ಚು ವಾಲಿದೆ? ಆ ಮೊದಲು ಅಂದರೆ ಸ್ವಾತಂತ್ರ್ಯಪೂರ್ವ ಹಾಗೂ ಅನಂತರದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅನೇಕ ಹಿಂದೂಗಳು ಹಾಗೂ ಮುಸ್ಲಿಮರು ಹಳ್ಳಿಗಳಲ್ಲಿ ಸ್ನೇಹದಿಂದ ಒಂದೇ ತಾಯಿ ಮಕ್ಕಳಂತೆ ಬದುಕಿದ್ದ ಸೂಚನೆಯನ್ನು ದಿವಂಗತ ಕಡೆಂಗೋಡ್ಲು ಶಂಕರ ಭಟ್ಟರ 'ಚೂರಿಯ ಕತೆ'ಯಲ್ಲಿ ನಾವು ನೋಡಬಹುದು. ಆಗ ಗೇಣಿ ಒಕ್ಕಲುಗಳು ಹೆಚ್ಚಾಗಿದ್ದ ದಕ್ಷಿಣ ಕನ್ನಡ ಜಿಲ್ಲೆ ಭೂ ಸುಧಾರಣೆ ಕಾನೂನು ಬಂದ ಬಳಿಕ ತುಂಬಾ ಬದಲಾಯಿತು.

ಭೂ ಸುಧಾರಣೆ ಕಾನೂನು ಬಂದಾದ ಬಳಿಕ ಸುಮಾರು ಮೂರು ಲಕ್ಷಕ್ಕೂ ಅಧಿಕ ಒಕ್ಕಲು ಅರ್ಜಿಗಳು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇತ್ಯರ್ಥವಾದವು. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಜನಸಂಖ್ಯೆ ಒಟ್ಟು ೩೨ ಲಕ್ಷ ಎಂಬುದನ್ನು ನೆನಪಿಸಿಕೊಂಡಾಗ ಅದು ಎಷ್ಟು ಅಗಾಧವಾದ ಜನಸ್ತೋಮದ ಮೇಲೆ ಪ್ರಭಾವ ಬೀರಿದೆ ಎಂಬುದನ್ನು ಊಹಿಸಬಹುದು. ೧೯೭೪ರಿಂದ ೧೯೮೭ರವರೆಗೆ ದಕ್ಷಿಣ ಕನ್ನಡ ಜಿಲ್ಲೆಯ ಒಕ್ಕಲುಗಳೂ-ದನಿಗಳೂ ಹೈಕೋರ್ಟಿನಲ್ಲಿ ಹೋರಾಡಿ ಉಳಿದ ದಕ್ಷಿಣ ಕನ್ನಡ ಜಿಲ್ಲೆಯ ಕೇಸುಗಳೇ ೩೭ ಸಾವಿರ. ೧೯೮೭ರಲ್ಲಿ ಭೂ ಮಸೂದೆ ಕೇಸುಗಳಿಗೆ ಅಪಲೇಟ್ ಟ್ರಿಬ್ಯೂನಲ್‌ಗಳಾದಾಗ ಪ್ರತಿ ಜಿಲ್ಲೆಗೂ ಒಂದೇ ಅಪಲೇಟ್ ಟ್ರಿಬ್ಯೂನಲ್ ಸಾಕಾಗುವಷ್ಟು ಮಾತ್ರ ಕೇಸುಗಳಿದ್ದರೆ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಗೆ ಪುತ್ತೂರು, ಮಂಗಳೂರು, ಉಡುಪಿಗಳಲ್ಲಿ ಒಟ್ಟು ಮೂರು ಅಪಲೇಟ್ ಟ್ರಿಬ್ಯೂನಲ್‌ಗಳು. ಅಂದರೆ ಭೂ ಮಸೂದೆ ದಕ್ಷಿಣ ಕನ್ನಡ ಜಿಲ್ಲೆಯ ಗೇಣಿದಾರರಿಗೆ ಕೇವಲ ಭೂಮಿ ಮಾತ್ರವಲ್ಲ, ಅವರ ಆತ್ಮಾಭಿಮಾನವನ್ನು ನೀಡಿದ ಮಸೂದೆ. ಅವರಿಗೆ ಅದು ಸಮಾನತೆಯನ್ನೂ, ಆರ್ಥಿಕ ಸ್ವಾತಂತ್ರ್ಯದ ಅನೇಕ ಕಲ್ಪನೆಗಳನ್ನೂ ಕಲಿಸಿಕೊಟ್ಟ ಮಸೂದೆ.

ಆ ಗೇಣಿ ಮಸೂದೆ ಕಾಲದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಾದ್ಯಂತ ಕಾಂಗ್ರೆಸ್ ಪಾರ್ಟಿ ಅತ್ಯಂತ ಜನಪ್ರಿಯ. ಅದಲ್ಲದೆ ಎರಡೂ ಕಮ್ಯೂನಿಸ್ಟ್ ಪಾರ್ಟಿಗಳಿಂದ (ಸಿ.ಪಿ.ಐ. ಹಾಗೂ ಸಿ.ಪಿ.ಎಂ.) ಎಂ.ಎಲ್.ಎ.ಗಳು ಆಯ್ಕೆಯಾಗುತ್ತಿದ್ದರು. ಆಗ ಮುಸ್ಲಿಮರೂ ಹಿಂದೂಗಳೂ ಕ್ರಿಶ್ಚಿಯನರೂ ಜೊತೆ ಜೊತೆಯಾಗಿ ಭೂ ಮಸೂದೆಗಾಗಿ ಕೆಲಸ ಮಾಡಿದರು. ಉಡುಪಿ ಸಮೀಪ ಕ್ರಿಶ್ಚಿಯನ್ ವಕೀಲ ಶಿರ್ವಾಡಿ ವಿಲಿಯಂ ಪಿಂಟೋ ಭೂ ಮಸೂದೆ ಬಗ್ಗೆ ಪುಸ್ತಕ ಬರೆದರು. ಉಚಿತ ಕಾನೂನು ಸಲಹೆ ನೀಡಿದರು. ಕ್ರಿಶ್ಚಿಯನರಲ್ಲದೆ ಅನೇಕ ಹಿಂದೂಗಳೂ ಮುಸ್ಲಿಮರೂ ಪಿಂಟೋರ ಬಳಿ ಸಲಹೆ ಪಡೆಯುತ್ತಿದ್ದರು.

ವಿಟ್ಲದಲ್ಲಿ ನನ್ನ ಸಹಪಾಠಿ ಇಬ್ರಾಹಿಂನ ಮಾವ ಖಾದರ್ ಕಾಂಗ್ರೆಸ್ ನಾಯಕ. ನಮ್ಮ ಪಡ್ನೂರು ಗ್ರಾಮದ ಅನೇಕ ಹಿಂದೂ ಒಕ್ಕಲುಗಳೂ ಖಾದರ್ ಬಳಿ ಹೋಗುತ್ತಿದ್ದರು. ನಮ್ಮ ಊರ ಅನೇಕ ಮುಸ್ಲಿಂ ಒಕ್ಕಲುಗಳು ಹೈಕೋರ್ಟಿನಲ್ಲಿ ಹಿಂದೂ ವಕೀಲರ ಬಳಿ ಹೋಗುತ್ತಿದ್ದರು.

ಹೀಗೆ ಒಂದು ಒಕ್ಕಲು ಮಸೂದೆಯ ಹೋರಾಟದಲ್ಲಿ ಪ್ರಗತಿಪರ ಚಿಂತನೆಯಲ್ಲಿ ಬೆಳೆದ ಒಂದು ಜಿಲ್ಲೆ ಒಕ್ಕಲು ಮಸೂದೆಯಲ್ಲಿ ಉಳುವವರೆಲ್ಲಾ ಹೊಲದೊಡೆಯರಾದ ಬಳಿಕ ಮುಂದಿನ ಜನಾಂಗ ಯಾಕೆ ಬಹುತೇಕ ಮತೀಯ ಭಾವನೆಗಳನ್ನು ಬೆಳೆಸಿಕೊಂಡಿತು? ಒಂದು ಜನಾಂಗವನ್ನು ವೈಯಕ್ತಿಕ ವ್ಯಕ್ತಿಗಳನ್ನಾಗಿ ಕಲ್ಪಿಸಿಕೊಳ್ಳದೆ ಒಂದು ವ್ಯಕ್ತಿರಹಿತ, ಮುಖರಹಿತ ಸಮುದಾಯದ ಧಾರ್ಮಿಕ ಪ್ರತಿನಿಧಿಗಳಂತೆ ಮಾತ್ರ ಕಾಣಲು ತೊಡಗಿತು. ಯುವಕರು ಹೋಗಿ ವ್ಯಾಯಾಮ ಮಾಡುತ್ತಿದ್ದ ಅನೇಕ ಹನುಮಾನ್ ಗರಡಿಗಳು ಇಂದು ಯಾಕೆ ಹಿಂದೂ ಭಜನಾ ಮಂದಿರಗಳಾಗಿ ಪರಿವರ್ತಿತವಾದವು? ಗರಡಿಯ ವ್ಯಾಯಾಮ ಎಲ್ಲಿ ಹೇಗೆ ಬದಲಾಯಿತು?

ಪ್ರಶ್ನೆ ಕೇಳುವುದು ಸುಲಭ. ಉತ್ತರ ಅನೇಕ ದಿಕ್ಕುಗಳಲ್ಲಿ ಗೋಚರಿಸಬಹುದು. ಆದರೂ ಕೋಮು ಸೌಹಾರ್ದತೆಯ ಆಸೆ ಇರುವ ನನಗೆ ಈ ಭೂಸುಧಾರಣೆ ಬಂದ ಬಳಿಕದ ಯುವ ಜನಾಂಗ, ಸರಿಯಾದ ಕೆಲಸ ಸಿಕ್ಕದ ಹತಾಶೆಯಿಂದಲೋ, ಮತ್ತಿತರ ಭ್ರಮೆಗಳಿಂದಲೋ ಪ್ರಚಾರಕ್ಕೆ ಮೈಮರೆತು ಮತೀಯವಾದದ ಮೌಢ್ಯ ಆರಾಧಕರಾಗುವ ಬದಲು, ವೈಜ್ಞಾನಿಕ ಚಿಂತಕರಾಗಿ, ಪ್ರಗತಿಪರ ಯುವ ಜನಾಂಗವಾಗಿ ಹೆಚ್ಚಿನ ಸಂಖ್ಯೆಯಲ್ಲಿ ಬೆಳೆದಿದ್ದರೆ, ಪ್ರಗತಿ ವಿರೋಧಿಗಳನ್ನು ಎದುರಿಸುವ ಸಾಮೂಹಿಕ ಶಕ್ತಿಯನ್ನು ಪಡೆದುಕೊಂಡ ಸಂಘಟನೆಯಾಗಿ ಬೆಳೆದಿದ್ದರೆ ಎಷ್ಟು ಚೆನ್ನಾಗಿತ್ತು ಎಂಬ ಆಸೆ ಉಂಟಾಗುತ್ತದೆ.

ಎಸ್. ಆರ್. ವಿಜಯಶಂಕರ
ಸಿ-೨/೧೦೩
ಓಂಕಾರ್ ಅಪಾರ್ಟ್‌ಮೆಂಟ್
[illegible]
[illegible]
ಬೆಂಗಳೂರು - [illegible]

## ಚಿಟ್ಟೆ

ನೀನು
ಯಾವಾಗಲೂ
ನವ ನವೀನ
ವರ್ಣ ವಿನ್ಯಾಸಗಳ
ಉಡುಪುಧರಿಸಿ
ಬಂದು
ಉತ್ಸವ ನಡೆಸಿ
ಸಂತಸದ ಸಡಗರದಿ
ಮುಳುಗಿಸಿ
ಹೋಗುವೆ

ಕಮಲಾಂಬಿಕ



# ಚಪ್ಪಲಿ ಪುರಾಣ



ಆ ದಿನ ಆಫೀಸು ಬಿಡುವ ಹೊತ್ತಿಗೆ ಚಿಗರೆಯಂತೆ ನನ್ನ ಹತ್ತಿರ ಓಡಿ ಬರುವ ಕೂಸಪ್ಪ ಮಂಕಾಗಿ ಕುಳಿತಿದ್ದ. ನಾನೇ ಕೇಳಿದೆ:

''ಏನಪ್ಪಾ ಕೂಸಪ್ಪ, ಗಂಟೆ ಐದೂ ಕಾಲಾಯ್ತು. ಆಫೀಸೂ ಬಿಟ್ಟಾಯಿತು. ನೀನೇನು ಇಂದು ನಾವೆ ಮುಳುಗಿದ ನಾವಿಕನಂತೆ ಯೋಚಿಸ್ತಾ ಕೂತಿದ್ದೀಯಾ ?''

''ಓ, ಐದೂ ಕಾಲಾಯ್ತು, ಗೊತ್ತೇ ಆಗ್ಲಿಲ್ಲ. ಹೊರಡ್ತಿನಿ ಸರ್. ನಿಮ್ಮ ಸರ್ಕಲ್‌ವರೆಗೆ ನಿಮ್ಮ ಸ್ಕೂಟರ್‌ನಲ್ಲೇ ಬರ್ತೇನೆ. ಅಲ್ಲಿಂದ ನನ್ಮನೆ ಹತ್ತಿರ ಅಲ್ವಾ ?'' ಬಂದವನೇ ಪಟಕ್ಕನೇ ಎದ್ದು ಪೆನ್ನು ಕಾಗದ ಇತ್ಯಾದಿಗಳನ್ನು ಜೇಬಲ್ಲಿ ಹಾಕೊಂಡು ಹೊರಟ.

ಇದ್ದ ರಸ್ತೆ ಮಧ್ಯೆನೇ ರೋಡ್ ಬ್ಲಾಕ್ ಆಗಿತ್ತು. ಯಾವುದೋ ಮಂತ್ರಿ ಆ ರಸ್ತೆಯಿಂದ ಉಡುಪಿ ಶ್ರೀ ಕೃಷ್ಣನ ದರ್ಶನಕ್ಕೆ ಬರುವುದಂತೆ. ನೂರಾರು ಸ್ಕೂಟರು, ಬೈಕು, ಕಾರು, ಬಸ್ಸು, ಲಾರಿಗಳು ಆ ಮಂತ್ರಿಗಳ ಅಂತಿಮ ಪ್ರಯಾಣ - ಅಂದ್ರೆ ಆ ರಸ್ತೆಯಲ್ಲಿ ಅವರ ಕಾರು ಹೋಗಿ ಮತ್ತೆ ಹಿಂದೆ ಬರದೆ ಅಜ್ಜರಕಾಡಿನ ಹೆಲಿಪ್ಯಾಡಿಗೆ ತೆರಳುವುದರಿಂದ ಈ ರಸ್ತೆ ಅವರ ಇಂದಿನ ಅಂತಿಮ ಪ್ರಯಾಣ ಅಂತಾ ನನಗನಿಸಿದ್ದು. ಆದರೆ ನನಗನಿಸಿದ್ದನ್ನು ಕೂಸಪ್ಪನ ಜತೆ ಹೇಳಿದರೆ ಅವನು ಅದರ ವಿಚಾರವಾಗಿ ಇಪ್ಪತ್ತೂರು ರೀಲಿನ ತಮಿಳು ಸಿನೇಮಾದಂತೆ ಒಂದು ಗಂಟೆ ಕೊರೀತಾನೆ.

ಆದರೆ ನನ್ನ ಎಣಿಕೆ ತಪ್ಪಾಯ್ತು. ಸ್ಕೂಟರಿಗೆ ಸ್ಟ್ಯಾಂಡ್ ಹಾಕಿ ನಿಲ್ಲಿಸುವ ಮೊದಲೇ ಆತನ ಪುರಾಣ ಆರಂಭವಾಯ್ತು.

''ಸರ್, ಈ ಮಂತ್ರಿ ಮಾಗಧರು ಬಂದ್ರೆ ನಮಗೇಕೆ ಹಿಂಸೆ ಕೊಡ್ತಾರೆ ಸರ್ ? ಅಲ್ಲಿ ನೋಡಿ ಒಂದು ಆಂಬ್ಯೂಲೆನ್ಸ್ ಕೂಡಾ ಇಂಜಿನ್ ಆಫ್ ಮಾಡದೆ ಕಿರಿಚ್ತಾ ಇದೆ. ಪಾಪ! ಯಾರೊ ರೋಗಿಗಳ ರೋಗ ಉಲ್ಬಣವೋ ಅಥವಾ ಆಸ್ಪತ್ರೆಯಿಂದ ಮನೆಗೆ ಅಂತಿಮ ಪ್ರಯಾಣವೋ ಗೊತ್ತಿಲ್ಲ. ಆ ಆಂಬ್ಯೂಲೆನ್ಸನ್ನಾದ್ರೂ ಬಿಡ್ಬೋದಲ್ಲ ಈ ಪೋಲೀಸರು. ಆ ರೋಗಿಯ ನರಳುವಿಕೆಗಿಂತಲೂ ಈ ಮಂತ್ರಿಗಳ ದೇವಸ್ಥಾನದ ಭೇಟಿ ಮುಖ್ಯವೆ? ಒಂದು ನಿಮಿಷ ಅವರ ಕಾರು ನಿಂತರೆ ಆಕಾಶವೇ ಬಿದ್ಹೋಗ್ತದಾ ? ಎಲ್ಲಾ ದೊಂಬರಾಟ ಸರ್.''

''ನಾವೇನು ಮಾಡೋಕಾಗ್ತದೆ ಕೂಸಪ್ಪಾ ? ಚೂರಿಯ ಹಿಡಿ ಅವರ ಕೈಯಲ್ಲಿದೆ. ಚೂರಿ ನಾವೆಳೆದರೂ ಅಥವಾ ಅವರೆಳೆದರೂ ಗಾಯವಾಗೋದು ನಮ್ಮ ಕೈಗೆ ಅಲ್ವಾ ?''

''ಹ... ಹೌದು ಸರ್. ಅಂದ ಹಾಗೆ ನಾನೇನು ಹೇಳ್ಬೇಕೆಂದಿದ್ದೆನೋ ಅದೇ ಮರೆತುಹೋಗಿತ್ತು. ಸರ್ ಕೆಲವು ವರ್ಷಗಳ ಹಿಂದೆ ಭಾಷಣ ಮಾಡುವವರಿಗೆ ಓಟು ಬೇಡುವವರಿಗೆ ಕಲ್ಲು, ಮೊಟ್ಟೆ, ಟೊಮೇಟೋ ಬಿಸಾಡೋ ಕ್ರಮ ಇತ್ತು. ಹೋಗಲಿ ಅದರಿಂದ ಇಬ್ಬರಿಗೂ ಏನೂ ಹೆಚ್ಚಿನ ನಷ್ಟವಿಲ್ಲ. ಮೊಟ್ಟೆ ಟೊಮೇಟೋಗಳ ಏಟಿನಿಂದ ಇವರಿಗೆ ಮೊಟ್ಟೆ ಟೊಮೇಟೋಗಳಾಗಿ ಐದು ರೂಪಾಯಿ ಸಾಕಾಗಿತ್ತು. ಎಸೆದುಕೊಂಡವರಿಗೆ ಮಾನಹಾನಿ (ಮಾನ ಇದ್ದರೆ ಮಾತ್ರ) ಹಾಗೂ ಡ್ರೆಸ್ ಒಗೆಯೋಕೆ ಸ್ವಲ್ಪ ಸೋಪು ಇಷ್ಟೇ ಸಾಕಿತ್ತು. ಆದರೆ ಆ ಎಸೆತ ಈಗ ದುಬಾರಿಯಾಗಿದೆ. ಚಪ್ಪಲಿಗೆ ಕನಿಷ್ಠ ನೂರು ರೂಪಾಯಿ ಬೇಕು. ಆದರೆ ಒಂದೊಂದು ಚಪ್ಪಲಿ ಬಿಸಾಕೋದ್ರಿಂದ ಏನು ಪುರುಷಾರ್ಥವಾಯಿತು ಸರ್ ? ಅವರಿಗೆ ಚಪ್ಪಲಿ ಏಟು ತಿಂದ ಅವಮರ್ಯಾದೆ. ಇವರಿಗೆ ? ಒಂದು ಮೆಟ್ಟು ಇಲ್ಲ. ಬಿಸಾಡಿದವನಿಗೂ ಒಂದೇ ಮೆಟ್ಟು, ಪೆಟ್ಟು ತಿಂದವನಿಗೂ ಒಂದೇ ಮೆಟ್ಟು. ಯಾರಿಗೂ ಉಪಕಾರವಿಲ್ಲದ ಈ ಪ್ರತಿಭಟನೆಗೆ ಅರ್ಥವೇನು ಸರ್ ? ಅದಕ್ಕಿಂತ ಎರಡೂ ಮೆಟ್ಟು ಬಿಸಾಡಿದ್ರೆ ಪೆಟ್ಟು ತಿಂದವನಿಗೂ ಒಂದು ಜತೆ ಮೆಟ್ಟು ಲಾಭ. ಬಿಸಾಡಿದವನಿಗೂ ಹೊಸ ಚಪ್ಪಲಿ ಖರೀದಿಸ ಬಹುದು. ಇಬ್ಬರಿಗೂ ಲಾಭವಿಲ್ಲದ ಚಪ್ಪಲಿ ಸೇವೆ ಯಾಕೆ ಸಾರ್ ? ಎಸೆಯೋದು ಒಂದೇ ಎಸೆದರೆ ಇನ್ನೊಂದು ಉಪಯೋಗಕ್ಕೆ ಬರೋದಿಲ್ಲ. ಎಸೆದುಕೊಂಡವನ ಮರ್ಯಾದೆಗೂ ಹಾನಿ. ಅಲ್ವಾ ಸಾರ್ ?''

''ಅದೇನೋ ನಿಜ ಕೂಸಪ್ಪ, ನೋಡು, ನಮ್ಮ ಕಲ್ಸಂಕ ಸರ್ಕಲ್ ಹತ್ತಿರ ಬರ್‍ತಾ ಇದೆ. ನಿನ್ನ ಕತೆ ಉದ್ದ ಇದ್ರೆ ನಾಳೆ ಮುಂದುವರಿಸು.''

''... ಇಲ್ಲ ಇಲ್ಲ ಸರ್... ಉದ್ದಾನೂ ಇಲ್ಲ ಅಗಲಾನೂ ಇಲ್ಲ... ಆದ್ರೆ ಹಿಂದೆ ಟೊಮೇಟೋ, ಬಟಾಟೆ, ಮಾತ್ರ ಎಸೆಯುತಿದ್ರು. ಈಗ ಚಪ್ಪಲಿನೂ ಎಸೀತಾರೆ. ಆ ರೀತಿ ಚಪ್ಪಲಿ ಬಿಸಾಕೋ ಇರಾದೆ ಇದ್ರೆ ಅಂಥವರು ಎರಡೂ ಮೆಟ್ಟುಗಳನ್ನೂ ಬಿಸಾಡಿದ್ರೆ ಒಳ್ಳೇದು. ಒಂದು ಎಸೆದ್ರೂ ಎರಡೂ ಎಸೆದ್ರೂ ವೇದಿಕೆಯ ಮೇಲೆ ಎಸೆದುಕೊಂಡು ವ್ಯಕ್ತಿಗೆ ಮರ್ಯಾದೆ ಹೋಗೋದಂತೂ ಖಾತ್ರಿ. ಅಲ್ಲದೆ ಎಸೆದವನೂ ಒಂದು ಮೆಟ್ಟು ಹಿಡಿಕೊಂಡು ಏನು ಮಾಡಬಹುದು ? ಅದ್ರಿಂದ ನನ್ನ ಸಲಹೆ ಇಷ್ಟೆ. ಎಸೆಯಲೇಬೇಕಾದ ಸಂದರ್ಭ ಬಂದಾಗ ಎರಡೂ ಚಪ್ಪಲಿಗಳನ್ನೂ ಬಿಸಾಡಿದ್ರೆ ಇಬ್ಬರಿಗೂ ಲಾಭ. ಎಸೆದವನಿಗೆ ಸ್ವಲ್ಪ ನಷ್ಟವಾದರೂ ಬಿಸಾಡಿಸಿ ಕೊಂಡವನಿಗೆ ಒಂದು ಜತೆ ಚಪ್ಪಲಿ ಪುಗುಸಟ್ಟೆ ಸಿಗುತ್ತಲ್ಲಾ. ಹಿಂದಿನ ಹಾಗೆ ಮೊಟ್ಟೆ, ಟೊಮೇಟೊಗಳಂತೆ ಬಟ್ಟೆ ಕೊಳೆ ಆಗುವುದಿಲ್ಲ. ಮನಸ್ಸಿಗೆ ಸ್ವಲ್ಪ ಕಷ್ಟವಾಗಬಹುದು. ಆದರೆ ಹೀಗೆ ಮೂರು ನಾಲ್ಕು ಮಂದಿ ಜತೆ ಚಪ್ಪಲಿ ಎಸೆದರೆ ಅವನಿಗೆ ಎರಡು ವರ್ಷ ಚಪ್ಪಲಿ ಕೊಂಡುಕೊಳ್ಳೋ ಅಗತ್ಯ ಇಲ್ಲವಲ್ಲ ?

''ನೀನನ್ನೋದು ನಿಜವೇ. ಆದರೆ ಅದಕ್ಕೆ ನಾಳೆ ಬೆಳಿಗ್ಗೆ ಮಂಗಳ ಹಾಡೋಣ. ಮಂತ್ರಿಗಳು ಹೋಗಿರಬೇಕು ಅಂತ ಕಾಣತ್ತೆ, ಸ್ಕೂಟರ್, ಆಟೋ ಎಲ್ಲಾ ಹೊರಟಿದ್ದಾವೆ. ನಾವೂ ಹೊರಡೋಣ. ಕಲ್ಸಂಕ ಸರ್ಕಲಲ್ಲಿ ಇಳಿಸ್ತೇನೆ. ಆಮೇಲೆ ತೀರ್ಥ ಸೇವಿಸಿದ ಮೇಲೆ ಮತ್ತೆ ಮನೆಗೆ ಬರೋದು ಬೇಡ. ನನ್ಗೆ ಬೇರೆ ಕೆಲ್ಸ ಇದೆ. ಏನಿದ್ರೂ ಇದರ ಉಪಸಂಹಾರ ನಾಳೆ ಆಫೀಸಿನಲ್ಲೇ ಮಾಡಿಬಿಡು.''

''ಆಯ್ತು ಸರ್, ಕಲ್ಸಂಕದಲ್ಲೇ ಇಳೀತೇನೆ. ಇದು ಕತೆಯಲ್ಲ ಸರ್. ಉಪಸಂಹಾರಾನೂ ಇಲ್ಲ. ಚಪ್ಪಲಿ ಬಿಸಾಕೋರ್ಗೆ ಒಂದು ಸಲಹೆ ಅಷ್ಟೆ. ಎಸೀಲೇಬೇಕಾಗಿದ್ರೆ ಒಂದನ್ನು ಎಸೀಬೇಡಿ. ಉಳಿದ ಇನ್ನೊಂದು ನಿಮಗೆ ಉಪಯೋಗಕ್ಕೆ ಬರೋಲ್ಲಾ, ಎರಡನ್ನೂ ಬಿಸಾಡಿ ಪುಣ್ಯ ಕಟ್ಟಿಕೊಳ್ಳಲಿ ಅಂತ ಅಷ್ಟೆ. ಕಲ್ಸಂಕ ಬಂತು ಸರ್. ನಾನಿಳೀತೇನೆ ನಮಸ್ಕಾರ.''

ಕೂಸಪ್ಪನ ಚಪ್ಪಲಿ ಪುರಾಣ ಮುಗಿಯಿತು. ನಿಮಗೂ ಇದು ಹೌದೆಂದು ಅನ್ನಿಸೋಲ್ವೆ ?

**ಕೆ. ರಾಘವೇಂದ್ರ ಭಟ್**
ಶಾಮಲ ಸದನ, ೮.೩-೫, ಕೆ.ಎ ಮಾರ್ಗ, ಕುಂಜಿಬೆಟ್ಟು
ಉಡುಪಿ - ೫೭೬೧೦೨

# ತ್ಯಾಗ - ಸ್ವಾರ್ಥ ಇತ್ಯಾದಿ...

ನಾ. ದಿವಾಕರ

"ಏನಪ್ಪ ಗೋಪಾಲ, ನನ್ನ ಗುರುತು ಪತ್ತಿಲ್ವಾ, ನೋಡಿದ್ರೂ ಹಾಗೆ ಹೋಗ್ತಾ ಇದ್ದೀ ?"

ಬೆನ್ನ ಹಿಂದಿನಿಂದ ಹಠಾತ್ತನೆ ಬಂದ ಸ್ವರ ನನ್ನನ್ನು ಬೆಚ್ಚಿ ಬೀಳಿಸಿತ್ತು. ಮೊದಲೇ ಇಂದಿರಾನಗರದ ಕೆಲವು ಬೀದಿಗಳು ಸಂಜೆಯ ಸ್ಮಶಾನಮೌನ ತಾಳಿರುತ್ತವೆ. ಮುದುಕರನ್ನು ನೋಡಿದಾಕ್ಷಣ ಹೊಳೆಯಿತು.

"ಓ ಹೋ ಹೋ. ಏನ್ಸಾರ್ ಸಮಾಚಾರ, ನಾನು ನಿಮ್ಮನ್ನ ನೋಡ್ಲಿಲ್ಲ ಅಷ್ಟೆ. ಸುಮ್ನೇ ಹಾಗೆ ಅಡ್ಡಾಡಿಕೊಂಡು ಬರೋಣ ಅಂತ ಹೊರಟಿದ್ದೆ."

"ಹೇಗಿದ್ದಾರೆ ನಿಮ್ಮಪ್ಪ, ರಿಟೈರ್ ಆದ್ಮೇಲೆ ಎಲ್ಲಾದ್ರೂ ಕೆಲಸ ಮಾಡ್ತಾರೋ ಅಥವಾ ಆರಾಮ ಖುರ್ಚಿನೋ"

"ಮನೇಲೇ ಇದ್ದಾರೆ ಸಾರ್. ನಾನೇ ಎಲ್ಲಿಗೂ ಕಳಿಸೋಲ್ಲ. ಎಷ್ಟು ಸಂಪಾದಿಸಿದ್ರೂ ನಮಗಂತೂ ಸಾಕಾಗಲ್ಲ, ಬಂದಿದ್ರಲ್ಲೇ ತೃಪ್ತಿಯಾಗಿರೋಣ ಅಂತ ನಾನೇ ಹೇಳ್ದೆ. ಅದ್ಸರಿ ಸಾರ್. ನೀವೇನೋ ಸಮೀಕ್ಷೆ ಮಾಡ್ತಾ ಇರೋ ಹಾಗಿದೆಯಲ್ಲಾ?, ಆ ಕಡೆ, ಈ ಕಡೆ ನೋಡ್ತಾ ಹೋಗ್ತಾ ಇದ್ರಿ, ಅದಕ್ಕೇ ನಂಗೂ ತಕ್ಷಣ ಗುರುತು ಸಿಕ್ಲಿಲ್ಲ ನೋಡಿ."

"ಇನ್ನೇನು ಕೆಲಸ ಮನೇಲಿ, ಇಬ್ಬರು ಮಕ್ಕಳು ಸಂಪಾದಿಸ್ತಾರೆ, ಸೊಸೇರೂ ಕೆಲಸಕ್ಕೆ ಹೋಗ್ತಾರೆ, ಸುಖ ಹೆಚ್ಚಾಗ್ತಿಲ್ಲ. ಜೀರ್ಣಿಸಿಕೊಳ್ಳೋಕೆ ತಿರುಗಾಡ್ತೋದು ಅಷ್ಟೆ. ಅಂದಹಾಗೆ ಸಮೀಕ್ಷೆ ಅಂದ್ಯಲ್ಲಾ ಅದನ್ನ ಸರ್ವೇ ಅನ್ನು ನಮ್ಮಲ್ಲಿ ಹೇಳ್ತಾರಲ್ಲ ಸರ್ವೇಜನಾ ಸುಖಿನೋ ಭವಂತು ಅಂತ. ನಾನು ಹೀಗೆ ಸರ್ವೇ ಮಾಡ್ತಾ ಇದ್ರೆ ಸುಖವಾಗಿರ್ತೀನೇನೋ ಅಂತ ಒಂದು ಪ್ರಯತ್ನ, ಹ್ಹಹ್ಹಹ್ಹ" ಎಂದು ತಮ್ಮ ಎಂದಿನ ಅಟ್ಟಹಾಸದ ನಗೆ ಬೀರುತ್ತಾ, "ಮುಂದಿನ ಶನಿವಾರ ಮನೆಗೆ ಬಾರಯ್ಯ, ನಿಮ್ಮಪ್ಪನನ್ನೂ ಕರ್ಕೊಂಡು ಬಾ ಏನೋ ಮಾತಾಡೋದಿದೆ" ಎಂದು ಹೇಳಿ ರಾಜಾರಾಯರು ಮುಂದೆ ಹೊರಟರು.

ರಾಜಾರಾಯರು ನಿವೃತ್ತ ಆದಾಯ ಇಲಾಖೆ ಅಧಿಕಾರಿಗಳು, ನಮ್ಮಪ್ಪನ ಸಹೋದ್ಯೋಗಿ. ಸದ್ಯಕ್ಕೆ ಇಲ್ಲೇ ಅಪಾರ್ಟ್‌ಮೆಂಟ್ ತೊಗೊಂಡು ಹಾಯಾಗಿದ್ದಾರೆ. ಮಕ್ಕಳು ಸೊಸೆಯಂದಿರು ತಿಂಗಳಿಗೆ ಮೂರು ಲಕ್ಷ ಸಂಬಳ ತರ್ತಾರೆ. ಸಾಲ ಇಲ್ದೆ ಮನೆ ಕೊಂಡಿದ್ದೂ ಆಗಿದೆ. ಸ್ವಲ್ಪ ರಾಜಕೀಯ ಅಂತ ಅಲ್ಲಿಲ್ಲಿ ಓಡಾಡ್ತಾ ಇರುತ್ತಾರೆ. ಇತ್ತೀಚೆಗಷ್ಟೆ ರಾಮೇಶ್ವರಕ್ಕೆ ಹೋಗಿ ಸೇತುವೆ ಉಳಿಸೋಕೆ ಹೋರಾಟ ಮಾಡಿ ಬಂದಿದ್ದರು. ಈಗಲೂ ಧಾರ್ಮಿಕ ಕಾರ್ಯಕ್ರಮಗಳು ಅಂದರೆ ಅವರ ಹಾಜರಿ ಕಾಯಂ ಆಗಿರುತ್ತದೆ.

* * *

ಬೆಂಗಳೂರಿನ ಪ್ರತಿಷ್ಠಿತ ಬಡಾವಣೆಗಳಲ್ಲೊಂದಾದ ಇಂದಿರಾನಗರದ ಸುಸಜ್ಜಿತ, ಅತ್ಯಾಧುನಿಕ ಓಂ ಶಾಂತಿ ಅಪಾರ್ಟ್‌ಮೆಂಟ್‌ನಲ್ಲಿ ಇರುವ ೪೦ ಮನೆಗಳಲ್ಲಿ ರಾಜಾರಾಯರದ್ದೂ ಒಂದು. ಮಾಲೀಕರೆಲ್ಲರೂ ಗಣ್ಯ ಅಂದರೆ ಶ್ರೀಮಂತ ವ್ಯಕ್ತಿಗಳೇ. ಇದಕ್ಕೆ ೪೦ ಮನೆಗಳ ಕಟ್ಟಡದಲ್ಲಿ ೫೨ ಕಾರುಗಳು, ೧೮ ಬೈಕುಗಳು ಇರುವುದೇ ನಿದರ್ಶನ. ಬೆಂಗಳೂರಿನಲ್ಲಿ ಇತ್ತೀಚಿನ ಟ್ರೆಂಡ್ ಎಂದರೆ ಅಪಾರ್ಟ್‌ಮೆಂಟ್‌ಗಳಲ್ಲೇ ಅಂಗಡಿ ಮಳಿಗೆಗಳನ್ನೂ ನಿರ್ಮಿಸುವುದು. ಒಂದು ರೀತಿಯಲ್ಲಿ ಗ್ರಾಹಕರನ್ನು ಹಿಡಿದಿಟ್ಟುಕೊಂಡು, ಗ್ರಾಹಕ ಸಂಸ್ಕೃತಿಯನ್ನು ಬೆಳೆಸುವುದೂ ಈ ವಿದ್ಯಮಾನದ ವೈಶಿಷ್ಟ್ಯ. ಇಲ್ಲಿ ನೆಲೆಸುವವರು ಯಾವುದೇ ವಸ್ತುವನ್ನು ಕೊಳ್ಳಲೂ ಹೊರಗೆ ಹೋಗುವಂತಿಲ್ಲ. ಮನೆಯಲ್ಲೇ ಕುಳಿತು ಮೊಬೈಲ್ ರಿಂಗಣಿಸಿದರೆ ಅಥವಾ ಎಸ್.ಎಂ.ಎಸ್. ಮಾಡಿದರೆ ಕ್ಷಣಾರ್ಧದಲ್ಲೇ ಬಾಗಿಲಲ್ಲಿ ವಸ್ತು ಬಿದ್ದಿರುತ್ತದೆ. ಒಂದು ತಿಂಗಳ ನಂತರ ಕ್ರೆಡಿಟ್ ಕಾರ್ಡ್ ಬಿಲ್ ಬಂದಾಗ ಬ್ಯಾಂಕಿನ ಮೂಲಕ ಪಾವತಿ. ಅಲ್ಲಿ ಒಂದು ವಿದೇಶಿ ಖಾಸಗಿ ಬ್ಯಾಂಕು ಸಹ ಇದೆ. ಒಂದು ರೀತಿಯಲ್ಲಿ ಶಾಪಿಂಗ್ ರೆಸಿಡೆನ್ಸಿ ಎಂಬ ಹೊಸ ಪೀಳಿಗೆಯ ಈ ಅಪಾರ್ಟ್‌ಮೆಂಟ್‌ನ ಬೆಲೆ ಕೇಳುವಂತೆಯೇ ಇಲ್ಲ. ಸೌಲಭ್ಯಗಳಿಗೆ ಮಿತಿಯಿಲ್ಲ. ಹಾಗಿದ್ದರೂ ಎಲ್ಲಾ ಮನೆಗಳೂ ಭರ್ತಿ.

ಈ ಮನೆಗಳಲ್ಲಿ ನೆಲೆಸಿರುವವರೆಲ್ಲರೂ ಹೊಸ ಆರ್ಥಿಕ ನೀತಿಯ ಫಲಾನುಭವಿಗಳೆಂದು ಹೇಳಬೇಕಿಲ್ಲ. ನಿವೃತ್ತ ಅಧಿಕಾರಿಗಳು, ವೃತ್ತಿಪರರು ಮತ್ತು ಎರಡನೇ ಪೀಳಿಗೆಯ ೩೦-೪೦ ವರ್ಷದ ಒಳಗಿನವರೇ ಹೆಚ್ಚು. ಪ್ರತಿಯೊಬ್ಬರ ಸಂಬಳ ವರ್ಷಕ್ಕೆ ೧೦ ಲಕ್ಷಕ್ಕೆ ಕಡಿಮೆ ಇಲ್ಲ. ಐಷಾರಾಮ ಜೀವನದ ಪರಾಕಾಷ್ಠೆಯನ್ನು ಇಲ್ಲಿ ಕಾಣಬಹುದೇನೋ. ಒಂದು ದಿನ ಲಿಫ್ಟ್ ಕೆಟ್ಟುಹೋದರೆ, ಎರಡನೇ ಮಹಡಿಯ ಮೇಲೆ ಇರುವವರೆಲ್ಲಾ ಗೃಹಬಂಧನಕ್ಕೊಳಗಾದಂತೆಯೇ ಸರಿ. ಮನೆಯಿಂದಲೇ ಆಫೀಸ್ ಕೆಲಸ, ಎಲ್ಲಾದರೂ ಲ್ಯಾಪ್‌ಟಾಪ್‌ಗಳಿರುತ್ತವಲ್ಲ. ಇತರ ವೃತ್ತಿಗಳಲ್ಲಿರುವವರಿಗೆ ರಜೆ. ವೈದ್ಯರು ಮಾತ್ರ ದೇವಾಯನಸಲೇಬೇಕು. ಪೇಷೆಂಟ್‌ಗಳು ಕಾಯುತ್ತಿರುತ್ತಾರೆ. ಒಟ್ಟಿ ತಪ್ಪಿ ಹೋದರೂ ಸಾವಿರಾರು ರೂಪಾಯಿಗಳ ನಷ್ಟ. ಹಾಗಾಗಿ ಅನಿವಾರ್ಯವಿದ್ದವರು ಮಾತ್ರ ಲಿಫ್ಟ್ ಅವಲಂಬಿತರಲ್ಲ.

ದಿನವಿಡೀ ಕೆಲಸದಿಂದ ಬೇಸತ್ತು, ಮನರಂಜನೆ ಎಂದರೆ ಏನೆಂದು ಕೇಳುವ ಸ್ಥಿತಿ ತಲುಪಿದ್ದ ಈ ಮೂಳೆ ಮಾಂಸ ಹೊತ್ತ ಯಂತ್ರಗಳಿಗೆ ಹೊತ್ತು ಕಳೆಯಲು ಒಂದು ಸಂಘವೂ ಬೇಕಾಗುವ



[illegible] ವರ್ಷಕ್ಕೊಮ್ಮೆ ಗುಂಡು-ತುಂಡುಗಳೊಂದಿಗೆ ಹ್ಯಾಪಿ ನ್ಯೂ ಇಯರ್ ಆಚರಣೆ, ಸಾಮೂಹಿಕ ಗಣೇಶ ಹೀಗೆ ಆಗಾಗ್ಗೆ ಎಲ್ಲರೂ ಸೇರಲು ಒಂದು ವೇದಿಕೆಯಾಗಿ ಸಂಘವೂ ಸ್ಥಾಪಿತವಾಗಿದೆ. ಇಲ್ಲಿ ಇರುವವರೆಲ್ಲಾ ಸಮಾನಮನಸ್ಕರೇ ಎಂದು ಹೇಳಲಾಗುವುದಿಲ್ಲ ವಾದರೂ, ಒಂದು ರೀತಿಯಲ್ಲಿ ಸಮಾನ ಚಿಂತನೆ ಉಳ್ಳವರೇ. ಆಧುನಿಕತೆಯ ನಗರಿ, ಸಿಲಿಕಾನ್ ಸಿಟಿ ಎಂದೆಲ್ಲಾ ಹೆಸರಾಂತವಾಗಿರುವ ಬೆಂಗಳೂರಿನಲ್ಲಿ, ಅಪಾರ್ಟ್‌ಮೆಂಟ್ ಸಂಸ್ಕೃತಿಯಿಂದ, ಪುರಾತನ ಕಾಲದ ಅಗ್ರಹಾರ ಸಂಸ್ಕೃತಿ ಪುನರ್ಜನ್ಮ ಪಡೆದಿರುವುದು ಗುಟ್ಟಿನ ಮಾತೇನೂ ಅಲ್ಲ. ಕಟ್ಟಡ ನಿರ್ಮಾಣ ಪ್ರಾರಂಭವಾಗುವ ಮುನ್ನವೇ ನಿರ್ಮಾತೃಗಳು, "ಎಲ್ಲಾ ನಿಮ್ಮವರಿಗೇ ಕೊಟ್ಟಿದೀವಿ ಸಾರ್" ಎಂದು ಆಶ್ವಾಸನೆ ನೀಡಿಯೇ ವ್ಯವಹಾರ ಕುದುರಿಸುತ್ತಾರೆ. ಹಾಗಾಗಿ ಆಹಾರ ಪದ್ಧತಿಗಳಿಂದ ಹಿಡಿದು, ಸಂಪ್ರದಾಯ-ಆಚಾರಗಳ ವರೆಗೆ ಸಮಾನಮನಸ್ಕರು ಎಲ್ಲಾ ಅಪಾರ್ಟ್‌ಮೆಂಟ್‌ಗಳಲ್ಲೂ ಕಂಡುಬರುತ್ತಾರೆ. 'ನಮ್ಮವರು' ಎನ್ನುವ ಪದಕ್ಕೆ ಸಮಾನಾರ್ಥಕ ಪದ ನಿಘಂಟಿನಲ್ಲಿ ಸಿಗದಿದ್ದರೂ, ಬೆಂಗಳೂರಿನ ಅಪಾರ್ಟ್‌ಮೆಂಟ್‌ಗಳಲ್ಲಿ ಸಿಗುತ್ತದೆ. ಜಾತ್ಯತೀತತೆಯ ಹೊಸ ಸ್ವರೂಪ. ಒಂದು ರೀತಿಯಲ್ಲಿ ಒಮ್ಮತಸ್ಥ ಸಮುದಾಯ ಎಂದರೂ ಅಡ್ಡಿಯಿಲ್ಲ. ಹಾಗಾಗಿ ಈ ಅಪಾರ್ಟ್‌ಮೆಂಟಿನ ನಿವಾಸಿಗಳ ಸಂಘದಲ್ಲಿ ಯಾವುದೇ ಕಾರ್ಯಕ್ರಮ ನಡೆದರೂ ಒಮ್ಮತವಿದ್ದೇ ಇರುತ್ತದೆ. ಅನೇಕ ವೇಳೆ ಚುನಾವಣೆಯಲ್ಲಿ ಮತ ನೀಡುವಾಗಲೂ ಇದೇ ಪ್ರವೃತ್ತಿಯನ್ನು ಕಾಣಬಹುದೇನೋ.

ರಾಜಾರಾಯರು ಕರೆದಿದ್ದಾರಲ್ಲಾ ಅಂತ ಒಂದು ಶನಿವಾರ ಮನೆಗೆ ಹೋದೆ. ತಮ್ಮೊಳಗಿನ ಸಮಸ್ಯೆಗಳನ್ನು, ಕಟ್ಟಡದ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಅಂದು ಸಂಘದ ಸರ್ವ ಸದಸ್ಯರ ಸಭೆ ಕರೆಯಲಾಗಿತ್ತು. ಎರಡು ದಿನ ರಜೆ ಇದ್ದುದರಿಂದ ಎಲ್ಲರೂ ಹಾಜರಿದ್ದರು. ಒಂದೆಡೆ ಮಕ್ಕಳ ಆಟಪಾಠಗಳಾದರೆ, ಇನ್ನೊಂದೆಡೆ ಮಹಿಳಾಮಣಿಗಳ ತಿಂಡಿ ವಗೈರೆಗಳ ತಯಾರಿ. ಟಿ.ವಿ. ಚಾನೆಲ್‌ಗಳಲ್ಲಿ ಬರುವ ಹೊಸರುಚಿಗಳೆಲ್ಲಕ್ಕೂ ಅಂದು ಮನೆಯಲ್ಲಿನ ಜನ ಪ್ರಯೋಗಾಸ್ತ್ರಗಳಾಗಿದ್ದರು. ನಿಗದಿತ ಅವಧಿ, ವಿಷಯ ಇಲ್ಲವಾದರೂ ಮಾತುಕತೆ ಹಿಗ್ಗಾಮುಗ್ಗಾ ಖಾಸಗಿ ಬಸ್ಸಿನಂತೆ ಸಾಗಿತ್ತು. ಹರ್‌ಭಜನ್‌ಸಿಂಗ್‌ನ ಕೋತಿ ಪ್ರಕರಣದಿಂದ ಪ್ರಾರಂಭವಾಗಿ, ಉಡುಪಿಯ ಪರ್ಯಾಯ ವಿವಾದವನ್ನು ಸುತ್ತುವರಿದು, ಕೊಂಕಣ ಸುತ್ತಿ ಮೈಲಾರಕ್ಕೆ ಬಂದಂತೆ, ಹನುಮಾನ್ ಕೇಂದ್ರಿತ ರಾಮಸೇತುವರೆಗೆ ವಾದವಿವಾದಗಳು ಬಂದುನಿಂತಿದ್ದವು. ಏತನ್ಮಧ್ಯೆ ಜಾಗತೀಕರಣ, ಉದಾರೀಕರಣ, ಜಾತೀಯತೆ (?), ಮೀಸಲಾತಿ, ಪ್ರಸ್ತುತ ರಾಜಕೀಯ, ಭಯೋತ್ಪಾದನೆ ಇತ್ಯಾದಿಗಳು ಸುಳಿದು, ಪಟ್ಟ ರಣರಂಗವೇ ಸಜ್ಜಿತವಾದಂತಿತ್ತು.

ಎಲ್ಲರನ್ನೂ ಬಡಿದೆಬ್ಬಿಸಿದ ವಿಷಯ ನಂದಿಗ್ರಾಮದ ಬೆಳವಣಿಗೆಗಳು. ಮೊದಲೇ ಹೇಳಲಿಲ್ಲವೇ ಎಲ್ಲಾ ಸಮಾನ ಚಿಂತಕರು ಎಂದು. ಹಾಗೇ ನಂದಿಗ್ರಾಮ ಎಂದಾಕ್ಷಣ ದನಿಗಳು ಮುಗಿಲು ಮುಟ್ಟಿದ್ದವು. ಖಂಡನೆಗೆ ಮಿತಿ ಇರುವುದಿಲ್ಲವಲ್ಲಾ, ಹಾಗಾಗಿ ನಂದಿಗ್ರಾಮ ಸ್ವಾಭಾವಿಕವಾಗಿ ಖಂಡನಾಪ್ರಪಂಚದ ವೇದಿಕೆಯಾಗಿ ಬಿಟ್ಟಿತ್ತು. ಅಪ್ಪಂದಿರು ಕಿರುಚಾಡುವುದನ್ನು ನೋಡಿ ಮನೆಯೊಳಗೆ ಓಡಿಹೋದ ಮಕ್ಕಳಿಗೂ ಕೊರತೆಯಿರಲಿಲ್ಲ. ಹಿಂತಿರುಗುವಾಗ ಬಜ್ಜಿ ಬೋಂಡಾಗಳು ಅವರ ಬಾಯಿ ಮುಚ್ಚಿಸಿದ್ದವು. ನಂದಿಗ್ರಾಮದ ಬೆನ್ನಲ್ಲೇ ಬರುವ ವಿಷಯ ಅಭಿವೃದ್ಧಿ-ಪ್ರಗತಿಯ ಪರಿಕಲ್ಪನೆಗಳಲ್ಲವೇ ? ಜಾಗತೀಕರಣ ಪ್ರಕ್ರಿಯೆ ನಿಂತಿರುವುದೇ ಈ ಪರಿಕಲ್ಪನೆಗಳ ಮೇಲೆ.

"ನೀವೇನಾದ್ರೂ ಹೇಳಿ ಸಾರ್, ದೇಶದ ಪ್ರಗತಿ ಆಗಬೇಕೂಂದ್ರೆ ನಾವು ಜಾಗತೀಕರಣವನ್ನು ಒಪ್ಪಿಕೊಳ್ಳಲೇಬೇಕು." ನಾಥ್ವಾನೀರ್ ತರುಣನೊಬ್ಬನ ಉವಾಚ.

"ನೋಡಿ ನಮ್ಮ ದೇಶದಲ್ಲಿ ಈ ತರಹದ ಒಂದು ಕಟ್ಟಡ ಕಟ್ಟಿಸಲು ಸಾಧ್ಯವಿತ್ತೇ. ಕೂತ ಕಡೆಯಲ್ಲೇ ಎಲ್ಲಾ ಸೇವೆಗಳು ಎಂದಾದರೂ ಸಿಗುತ್ತಿದ್ದವೇಯೇ" ವೃದ್ಧರ ಅಭಿಪ್ರಾಯ.

"ಗಂಡಸರಿಗೆ ಮನೆಯಲ್ಲಿ ಕೂತ ಕಡೇನೇ ಎಲ್ಲವೇ ಸೇವೆಯಾಗೋದು. ಆಗ್ಲೂ ಅಷ್ಟೆ ಈಗ್ಲೂ ಅಷ್ಟೆ, ಅಂಗಡಿಗೆ ಹೋಗೋದು ತಪ್ಪು ಅಂತ ಹೇಗೆ ಒಪ್ಕೊಳ್ಳೋಣ."

"ಆದ್ರೂ ನೋಡಿ ಸಾರ್, ನಮ್ಮ ಬುದ್ಧಿಜೀವಿಗಳಿದ್ದಾರಲ್ಲ, ತಾವು ಹೇಳಿದ್ದೇ ಸತ್ಯ ಅಂದ್ಕೊಂಡಿರ್ತಾರೆ. ಎಲ್ಲಾ ಯೋಜನೆಗೂ ಕಲ್ಲುಹಾಕೋದೇ ಹವ್ಯಾಸ ಮಾಡ್ಕೊಂಡಿದ್ದಾರೆ."

"[illegible] ಜಯರಾಂ. ಆ ನಂದಿಗ್ರಾಮದಲ್ಲಿ ನೋಡಿ, ಸಾಮಾನ್ಯ ಜನರಿಗೋಸ್ಕರ ಆಗದ್ರ ಕಾರು ಕೊಡ್ತೇನೆ, ಭೂಮಿ ಕೊಡ್ರಿ ಅಂದ್ರೆ ಅಷ್ಟೊಂದಾ ಗಲಾಟೆ ಮಾಡೋದು. ಕೈಗಾರಿಕೆ ಬೆಳೀದೆ ಇದ್ರೆ ದೇಶ ಹೇಗೆ ಬೆಳೆಯುತ್ತೇ ಹೇಳಿ ? ಚೀನಾದವರನ್ನ ನೋಡಿ ನಾವು ಕಲೀಬೇಕು."

"ನೋಡಿ ತಾತಾಚಾರ್ರೆ, ನಂದಿಗ್ರಾಮದಲ್ಲಿ ಜನ ಸತ್ತಿದ್ದು ಅನ್ಯಾಯವೇ. ಆದ್ರೆ ಅವರನ್ನ ಎತ್ತಿ ಕಟ್ಟೋರು ಬದುಕೇ ಇದ್ದಾರಲ್ಲ, ಅವರನ್ನ ಮೊದಲು ತರಾಟೆಗೆ ತೊಗೋಬೇಕು. ಇಷ್ಟು ವರ್ಷ ಆದ್ಮೇಲೆ ತಮ್ಮ ಸ್ವರೂಪ ಬದಲಾಯಿಸ್ತಾ ಇರೋ ಪಕ್ಷಕ್ಕೆ ಬದಲಾವಣೆ ಆಗ್ಬೇಡ ಅನ್ನೋದು ಎಷ್ಟು ಸರಿ ಹೇಳಿ."

"ನೋಡಿ ಸಾರ್, ಬದಲಾವಣೆ ಅನಿವಾರ್ಯ ಅಂತ ಹೇಳ್ತಾರಲ್ಲ, ಅದೇನೂ ಸುಳ್ಳಲ್ಲ. ನಾವು ಬದಲಾಗೋದೆ ಇಲ್ಲ, ಹೀಗೇ ಇರ್ತೀವಿ ಅಂದ್ರೆ ಆಗುತ್ತಾ ? ತಾತಾಚಾರ್ರು ಹೇಳಿದ್ದು ಸರಿಯಾಗೇ ಇದೆ. ರಾಜಕೀಯವಾಗಿ ಆ ಪಕ್ಷದೋರನ್ನ ನಾವು ವಿರೋಧಿಸ್ತೀವಿ. ಆದ್ರೂ ಅವ್ರು ಮಾಡ್ತಾಯಿರೋ ಕೆಲ್ಸ ಉತ್ತಮವಾದ್ದೇ ಅಲ್ವೇ. ನಾಳೆ ನಮ್ಮೋರು ಬಂದ್ರೂ ಅದನ್ನೇ ಮಾಡ್ತಾರಲ್ವಾ ?"

"ಕೃಷಿ ಭೂಮಿ ಕೊಡೋದಿಲ್ಲಾ ಅಂತಾರೆ, ಹಾಗಾದ್ರೆ ಐ.ಟಿ.-ಬಿ.ಟಿ. ಕಂಪನಿಗಳು ಎಲ್ಲಿಗೆ ಹೋಗ್ಬೇಕು. ಐ.ಟಿ. ಬರದೇ ಇದ್ದಿದ್ರೆ ನಮ್ಮ ಸೆನ್ಸೆಕ್ಸ್ ಇಪ್ಪತ್ತು ಸಾವಿರ ಮುಟ್ತಾ ಇತ್ತಾ. ಬೆಂಗಳೂರೇ ನೋಡಿ ಹೇಗಾಗಿದೆ ? ಒಳ್ಳೆ ಸಿಂಗಪೂರ್ ಥರಾ ಇದೆ. ಬರೀ ಕೃಷೀನೇ ನಂಬ್ಕೊಂಡಿದ್ರೆ ಆಗ್ತಿತ್ತಾ ರಮೇಶ್ ಅವರೇ ?"

"ನಾನಂತೂ ಈ ಬುದ್ಧಿಜೀವಿಗಳನ್ನ ವಿರೋಧಿಸ್ತೀನಿ ಸುರೇಶ್. ಇವರೆಲ್ಲಾ ರೈತರಿಗೆ ತಲೆ ಕೆಡಿಸ್ತಾರೆ. ಅವರು ಸಾಲ ಮಾಡಿ ಸತ್ರೂ ಜಾಗತೀಕರಣಾನೇ ಕಾರಣ ಅಂತ ಬೊಬ್ಬೆ ಹಾಕ್ತಾರೆ. ಪ್ರಾಣ ಹೋದ್ರೂ ಭೂಮಿ ಬಿಡಲ್ಲ ಅಂತ ಪ್ರಚೋದನೆ ಮಾಡ್ತಾರೆ. ಇವರಿಗೇನು ಪರಿಹಾರ ಸಿಗೋದಿಲ್ವ ? ಲಕ್ಷಾಂತರ ಸಿಗುತ್ತೆ. ಈ ಕಡೆ ಕೃಷಿ ಮಾಡೋದು ಕಷ್ಟ ಅಂತಾರೆ, ಭೂಮೀನೂ ಬಿಡೋಲ್ಲ ಅಂತಾರೆ, ಹಿಂಗಾದ್ರೆ ಉದ್ಯಮ ಬೆಳೆಯೋದು ಹೇಗೆ ?"

ಈ ವಾಗ್ವಾದಗಳ ನಡುವೆಯೇ ಗೋಬಿಮಂಚೂರಿ, ಬಜ್ಜಿ, ಬೋಂಡ, ಹೊಸ ತಿನಿಸುಗಳ ಪ್ರಯೋಗವೂ ನಡೆದುಹೋಗಿತ್ತು. ಬಾಯಲ್ಲಿ ಬಿಸಿ ಬಜ್ಜಿ ಇದ್ರೂ ಮಾತಾಡಲು ಹೋಗಿ ಬ್ಬಾ ಬ್ಬಾ ಎಂದವರು ಪುಕ್ಕಟೆ ಮನರಂಜನೆ ಒದಗಿಸಿದ್ದರು. ರಾತ್ರಿ ಹನ್ನೊಂದಾದರೂ ಮಾತುಕತೆಗಳು ನಿಲ್ಲುವ ಲಕ್ಷಣಗಳು ಕಾಣುತ್ತಿರಲಿಲ್ಲ. ಮರುದಿನ ರಜೆ ಅಲ್ಲವೇ, ಹಾಗಾಗಿ ಎಲ್ಲರಿಗೂ ಆರಾಮ. ಊಟ ಮುಗಿದ ನಂತರ ಪುನಃ ಶುರುವಾಯಿತು ಹರಟೆ. ತಾತಾಚಾರ್ರೇ ಪ್ರಾರಂಭಿಸಿದ್ರು. ತಾತಾಚಾರ್ರು ಆಗ ತಾನೇ ರಾಮೇಶ್ವರಕ್ಕೆ ಹೋಗಿ ಸೇತುವೆ ಕಾರ್ಯವನ್ನು ತಡೆಗಟ್ಟುವ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಬಂದಿದ್ದರು. ಇಡೀ ಅಪಾರ್ಟ್‌ಮೆಂಟಿನಲ್ಲೇ ವಾಗ್ವಾದಕ್ಕೆ ಹೆಸರುವಾಸಿ ಎಂದರೆ ಇವರೇ ಎಂದು ಹೇಳಬಹುದು. ಸ್ವಲ್ಪ ರಾಜಕೀಯ ಸಾನ್ನಿಧ್ಯವೂ ಇದ್ದುದರಿಂದ ಪ್ರಖರವಾಗಿ ಮಾತನಾಡುತ್ತಿದ್ದರು.

"ನೋಡಿ ಫ್ರೆಂಡ್ಸ್, ನಂಗಂತೂ ಈ ಕೃಷಿ ಬಿಕ್ಕಟ್ಟೇ ಅರ್ಥ ಆಗೋಲ್ಲ. ದೇಶದಲ್ಲಿ ಆಹಾರ ಉತ್ಪಾದನೆ ಏನಾದ್ರೂ ಕಡಿಮೆ ಆಗಿದ್ಯೇ ? ಯಾರೋ ರೈತರು ಸಾಲ ಮಾಡಿ ಸತ್ರೆ ಅದಕ್ಕೆ ಸರ್ಕಾರಾನ ದೂಷಿಸೋಕಾಗುತ್ಯೇ ಹೇಳಿ. ದೇಶ ಪ್ರಗತಿ ಆಗಬೇಕಿದ್ರೆ ನಾವೂ ಸ್ವಲ್ಪ ತ್ಯಾಗ ಮಾಡ್ಬೇಕಲ್ವಾ ? ಈಗ ನೋಡಿ ನಮ್ಮನೇ ರೋಡನ್ನೇ ತೊಗೋಳ್ಳೋಣ. ಈಗ ಎಷ್ಟು ವಿಶಾಲವಾಗಿದೆ ನೋಡಿ. ಇಲ್ಲಿದ್ದ ಅಂಗಡಿಗಳನ್ನ ತೆಗೆಸೋಕೂ ಇದೇ ಬುದ್ಧಿಜೀವಿಗ್ಳೇ ಅಲ್ವಾ ವಿರೋಧಿಸಿದ್ದು. ಅಲ್ಲಿ ಕೃಷಿ ಭೂಮಿ ಬಿಡೋಲ್ಲಂತಾರೆ, ಇಲ್ಲಿ ಅಂಗಡಿ, ರಸ್ತೆ ಬದಿ ವ್ಯಾಪಾರಿಗಳನ್ನ ಎತ್ತಂಗಡಿ ಮಾಡೋಕೆ ಬಿಡೋಲ್ಲ ಅಂತಾರೆ, ಇನ್ನೊಂದು ಕಡೆ ಅರಣ್ಯ ಬಿಡೋಲ್ಲ ಅಂತಾರೆ, ಹೀಗಾದ್ರೆ ದೇಶ ಉದ್ಧಾರ ಆಗೋದು ಹೇಗೆ ?"

"ಅಲ್ಲೇ ಇರೋದು ಪಾಯಿಂಟು ತಾತಾಚಾರ್ರೇ" ಎಂದು ಹೇಳುತ್ತಲೇ ಗರ್‌ರ್‌ರ್ ಎಂದು ತೇಗುತ್ತಾ ಬಂದ ಜಯರಾಂ ತಮ್ಮ ವಾದಸರಣಿ ಮುಂದುವರಿಸಿದರು. "ಈಗ ನೋಡಿ, ಬೆಂಗಳೂರಿನ ಪಕ್ಕದಲ್ಲಿರೋ ನಂದಗುಡೀಲಿ ಎಸ್.ಇ.ಝಡ್. ಪ್ರಾರಂಭಿಸ್ತಾ ಇದ್ದಾರೆ. ಅದಕ್ಕೇನು ಗಲಾಟೆ ಅಂತೀರಿ. ಅಲ್ಲೇನು ಮಹಾ ತರಕಾರಿ, ರೇಷ್ಮೆ ಬೇಳೀತಾರೆ. ಅದನ್ನು ಬಿಟ್ಟುಕೊಡೋಕಾಗಲ್ವ ? ರಾಷ್ಟ್ರೀಯ ನಾಯಕರೂ ಬಂದು ಅಲ್ಲಿ ಧರಣಿ ಮಾಡಿ ಅದನ್ನ ನಿಲ್ಲಿಸಿಬಿಟ್ಟಿದ್ದಾರೆ. ಮೈಸೂರು-ಬೆಂಗಳೂರು ನೈಸ್ ಕಾರಿಡಾರ್‌ಗೂ ಇದೇ ಗತಿ ಬಂದಿದೆ. ಕೃಷಿ ಭೂಮಿ ಒಂದನ್ನೇ ನಂಬಿಕೊಂಡಿದ್ರೆ ನಾವು ಪ್ರಗತಿ ಹೊಂದೋದಾದ್ರೂ ಹೇಗೆ, ಅಲ್ವೇ ಸೀತಾರಾಂ ?"

"ಇವೆಲ್ಲಾ ಈ ವಿಚಾರವಾದಿಗಳ ಕುತಂತ್ರ. ಸ್ವಾತಂತ್ರ್ಯ ಬರೋಕ್ಕೆ ಮುಂಚಿನಿಂದ್ಲೂ ಇದೇ ಕೆಲಸ ಇವರದ್ದು. ಸರ್ಕಾರ [illegible]

## ಆತ್ಮಕಥನ

ಆತ್ಮಕಥನವೆಂದರೆ
ಗೊತ್ತೇನೊ ಗೆಳೆಯ ?
ಮತ್ತೊಬ್ಬರ ಪ್ರೀತಿಯ
ವಿಷಯ ಅದರಲ್ಲಿ
ಏಕೆ ತುರುಕಿದ್ದೀಯ ?

ಡಿ. ಬಿ. ಬಡಿಗೇರ
ತೆಗ್ಗಿನಪೇಟೆ ಓಣಿ
ಗದಗ- ಬೆಟಗೇರಿ - ೫೮೨ ೧೦೨

ಮಾಡಿದ್ರೂ ವಿರೋಧಿಸೋದು. ಒಂದು ರೀತಿ ವ್ಯವಸ್ಥೆ ವಿರೋಧಿ ಚಟ. ಎಲ್ಲವನ್ನೂ ಸರ್ಕಾರವೇ ಮಾಡ್ಬೇಕು ಅಂದ್ರೆ ಸಾಧ್ಯಾನಾ ಹೇಳಿ. ನಾವೂ ಸ್ವಲ್ಪ ಬಿಟ್ಟುಕೊಡ್ಬೇಕಲ್ವಾ. ಸರ್ಕಾರ ಅಂದ್ರೆ ನಾವೇ ತಾನೆ. ಅದನ್ನೇ ಅಲ್ವಾ ಪ್ರಜಾತಂತ್ರ ಅನ್ನೋದು.''

''ಅಷ್ಟೇ ಅಲ್ಲ ಸೀತಾರಾಂರವರೇ, ಸರ್ಕಾರ ಈ ರೈತರಿಗೆ ಪರಿಹಾರಾನೂ ಕೊಡ್ತಾರಲ್ಲ. ಇನ್ನೇನು ಬೇಕು ಇವರಿಗೆ. ಬೇರೆ ಎಲ್ಲಾದ್ರೂ ನೆಲೆಸಲು ಆಗಬಹುದಲ್ವಾ. ಸಬ್ಸಿಡಿ ಸಿಗುತ್ತೆ, ಬ್ಯಾಂಕುಗಳಿಂದ ಸಾಲ ಸಿಗುತ್ತೆ, ಯಾವ್ದೋ ಒಂದು ಭೂಮಿ ಸಿಗುತ್ತೆ, ಕೈಗೆ ದುಡ್ಡೂ ಬರುತ್ತೆ. ಇಷ್ಟಾದ್ರೂ ನಮ್ಮದನ್ನೆಲ್ಲಾ ಕಿತ್ಕೋತಾ ಇದ್ದಾರೆ ಅಂತ ಬೊಬ್ಬೆ ಹೊಡೆಯೋದು ನ್ಯಾಯಾನಾ ಹೇಳಿ. ನಾಳೆ ಇವರ ಮಕ್ಕಳೆಲ್ಲಾ ವ್ಯವಸಾಯಾನೇ ಮಾಡ್ತಾರಾ ? ಅವರಿಗೂ ದೇಶದ ಅಭಿವೃದ್ಧಿ ಬಗ್ಗೆ ಚಿಂತೆ ಇರಬೇಕು ತಾನೆ ? ಏನಂತೀರಿ ರಾಜಾರಾಯ್ರೇ, ನೀವು ನಮಗೆಲ್ಲಾ ಹಿರಿಯೋರು, ಯಾಕೋ ಬಾಯೇ ಬಿಡ್ತಾ ಇಲ್ಲ'' ಪ್ರೇರೇಪಿಸಿದರು ತಾತಾಚಾರ್ರು.

''ನಮ್ಮದು ಮೊದ್ಲೇ ಒಮ್ಮತಸ್ಥ ಸಂಘ, ನಾನಿನ್ನೇನು ಹೇಳೋದಿದೆ. ಒಂದು ದೇಶ ಬೆಳೀಬೇಕು ಅಂತಿದ್ರೇ ಅಲ್ಲಿನ ಜನಾನೇ ತ್ಯಾಗ ಮಾಡ್ಬೇಕಲ್ವಾ ? ನಮಗೋಸ್ಕರ ಚೀನೀಯರು ತ್ಯಾಗ ಮಾಡೋಕಾಗುತ್ತಾ. ನಾಳೆ ಅದರ ಸುಖ ಅನುಭವಿಸೋದೂ ನಾವೇ ತಾನೆ ? ಆದ್ರೆ ಏನ್ಮಾಡ್ತೀರಿ ನಮ್ಮ ವಿಚಾರವಾದಿಗಳಿಗೆ ಇವೆಲ್ಲಾ ಅರ್ಥ ಆಗೋಲ್ಲ. ಸಿದ್ಧಾಂತಗಳಿಗೆ ನೇತಾಕ್ಕೊಂಡಿರ್ತಾರೆ. ನರ್ಮದಾ ಅಣೆಕಟ್ಟಿನಲ್ಲಿ ನೋಡ್ಲಿಲ್ವೇ. ನಾವು ಈ ಅಪಾರ್ಟ್‌ಮೆಂಟ್‌ನಲ್ಲಿ ಇನ್ನೂರು ಜನ ಇದ್ದೀವಿ. ನಾವ್ಯಾಕೆ ನಮ್ಮ ಸಂಘದ ಮೂಲಕ ಇಂಥ ಪ್ರಚಾರ ಮಾಡ್ಬಾರ್ದು ಸಮಯ ಇದ್ದಾಗ ಮಾಡೋಣ, ಏನಂತೀರಿ ಜಯರಾಂ ?''

ರಾಜಾರಾಯರ ಅನುಭವೀ ಮಾತುಗಳಿಗೆ ಎಲ್ಲರೂ ತಲೆದೂಗುವವರೇ. ''ನಾವೆಲ್ಲಾ ಸೇರಿ ಒಂದು ನಿರ್ಣಯಕ್ಕೆ ಬಂದಾಗಿದೆ. ನಾಳೆಯೇ ವಾಚಕರವಾಣಿಗೆ ಒಂದು ಪತ್ರ ಬರೀತೀನಿ, ನೀವೆಲ್ಲಾ ಸಹಿ ಮಾಡಿ, ಎಲ್ಲಾ ಪತ್ರಿಕೆಗಳಿಗೂ ಕಳಿಸೋಣ. ಸಂಘದ ಲೆಟರ್ ಹೆಡ್ ಹೇಗಾದ್ರೂ ಇದ್ದೇ ಇದೆ. ನಮ್ಮ ಸಂಘಕ್ಕೂ ಸ್ವಲ್ಪ ಘನತೆ ಹೆಚ್ಚಾಗುತ್ತೆ. ಏನಂತೀರಪ್ಪಾ ?''

ಜಯರಾಂರವರ ಅಂತಿಮ ಘೋಷಣೆಗೆ ಎಲ್ಲರೂ ತಲೆದೂಗಿದರು. ಅಷ್ಟರಲ್ಲಿ ಮಧ್ಯರಾತ್ರಿಯಾಗಿತ್ತು. ಇನ್ನೇನು ಹೆಂಡತಿ ಮಕ್ಕಳು ಘರ್ಷಣೆಗೆ ಸಿದ್ಧವಾಗುವ ಹೊತ್ತಿಗೆ ಸಭೆ ಮುಕ್ತಾಯ ವಾಗಿತ್ತು. ಎಲ್ಲರೂ ತಮ್ಮ ಮುಖಗಳಲ್ಲಿ ಏನೋ ಸಾಧಿಸಿದ ಸಂಭ್ರಮವನ್ನು ಹೊತ್ತು ತಂತಮ್ಮ ಮನೆಗಳಿಗೆ ತೆರಳಿದರು. ನಾನೂ ಮನೆ ಸೇರಿದಾಗ ಮಧ್ಯರಾತ್ರಿಯಾಗಿತ್ತು. ಹೆಂಡತಿಯಿಂದ ಸಹಸ್ರನಾಮಾರ್ಚನೆಯ ನಂತರ ತೆಪ್ಪಗೆ ಮಲಗಿದೆ.

**ಒಂದು ತಿಂಗಳ ನಂತರ :**

**ಬೆಂಗಳೂರು ಮೆಟ್ರೋ ರೈಲಿಗಾಗಿ ಭೂಸ್ವಾಧೀನ ಕ್ರಿಯೆ ಪ್ರಾರಂಭ** ಎಂಬ ದಿನಪತ್ರಿಕೆಗಳ ದೊಡ್ಡ ಬಣ್ಣಬಣ್ಣದ ತಲೆಬರಹಗಳು ಓಂ ಶಾಂತಿ ಅಪಾರ್ಟ್‌ಮೆಂಟಿನವರ ಹಣೆಬರಹವನ್ನೇ ಬದಲಾಯಿಸುವುದರಲ್ಲಿತ್ತು. ಈಗಾಗಲೇ ಅನೇಕ ರಸ್ತೆಗಳಲ್ಲಿ ಧ್ವಂಸಕಾರ್ಯ ಪ್ರಾರಂಭಗೊಂಡಿತ್ತು. ಅನೇಕ ಬಡಾವಣೆಗಳಲ್ಲಿ ಜನರ ಪ್ರತಿಭಟನೆಯೂ ಜೋರಾಗಿತ್ತು. ಒಂದು ಇಡೀ ಕಾಲೋನಿಯೇ ಖಾಲಿಯಾಗುವ ಬಗ್ಗೆ ಜನರಲ್ಲಿ ಗುಸುಗುಸು ಪ್ರಾರಂಭವಾಗಿತ್ತು. ಮೆಟ್ರೋ ಬಂದರೆ ಬೆಂಗಳೂರಿನ ಸಂಚಾರ ಸುಗಮವಾಗುತ್ತದೆ ಎಂದು ಕನಸು ಕಾಣುತ್ತಿದ್ದವರಿಗೆ, ಜೀವನ ಪರ್ಯಂತ ಸಂಚಾರಿಗಳಾಗುವ ಸ್ಥಿತಿ ತಲುಪುವ ಸಂದರ್ಭ ಹೆಚ್ಚಾಗಿತ್ತು. ಓಂ ಶಾಂತಿ ಅಪಾರ್ಟ್‌ಮೆಂಟ್‌ನಲ್ಲಿ ಆ ಸಂಜೆಯೇ ತುರ್ತುಸಭೆ ಏರ್ಪಡಿಸಲಾಗಿತ್ತು. ಎಲ್ಲಾ ಸದಸ್ಯರೂ ಕುಟುಂಬಸಮೇತರಾಗಿ ಹಾಜರಿದ್ದರು.

''ನೋಡಿ ಫ್ರೆಂಡ್ಸ್, ನಾವೆಲ್ಲಾ ಈಗ ಸಂಕಷ್ಟಕ್ಕೆ ಸಿಲುಕಿಬಿಟ್ಟಿದ್ದೀವಿ'' ಎನ್ನುತ್ತಾ ಜಯರಾಂ ತಮ್ಮ ಭಾಷಣ ಪ್ರಾರಂಭಿಸಿದರು.

''ನಮಗೇನ್ರಿ ತೊಂದ್ರೆ, ಮೆಟ್ರೋ ರೈಲುಮಾರ್ಗದಲ್ಲಿ ಅಡ್ಡ ಬರೋ ಕೆಲವು ಕಟ್ಟಡಗಳನ್ನು ಧ್ವಂಸ ಮಾಡ್ತಾರೆ. ರಸ್ತೆ ಅಗಲೀಕರಣದ ಹಾಗೇ ಇದೂ ನಡೆಯುತ್ತೆ ಬಿಡಿ. ಆಗಾಗ್ಗೆ ಈ ರೀತಿ ಧ್ವಂಸ ಮಾಡ್ತಾ ಇದ್ರೆ ತಾನೆ ಆ ದೈತ್ಯ ಜೆ.ಸಿ.ಬಿ. ತಯಾರಿಸೋರಿಗೆ ಲಾಭ ಬರೋದು ?'' ಎಂದ ಸೀತಾರಾಂರವರ ಮಾತುಗಳು ಯಾರನ್ನೂ ನಗಿಸದೆ, ತಾತಾಚಾರ್ಯರನ್ನು ಸಿಟ್ಟಿಗೆಬ್ಬಿಸಿತ್ತು.

''ನೀವು ಸ್ವಲ್ಪ ಸೀರಿಯಸ್ಸಾಗಿ ಥಿಂಕ್ ಮಾಡಿ ಸೀತಾರಾಂ, ಇದು ಬರೇ ರಸ್ತೆ ಅಗಲೀಕರಣ ಅಲ್ಲ. ಮೆಟ್ರೋ ರೈಲು ಬರೋ ಮಾರ್ಗದಲ್ಲಿ ಎಷ್ಟೋ ಬಡಾವಣೆಗಳು ಅಡ್ಡ ಬರುತ್ತೆ ಅಂತಲೇ ಇವತ್ತಿನ ಮುಖ್ಯ ಸುದ್ದಿಯಾಗಿರೋದು, ಕಾಣ್ತಾ ಇಲ್ವೆ ?'' ಎನ್ನುತ್ತಾ ತಾತಾಚಾರ್ ಪತ್ರಿಕೆಯನ್ನು ಎಲ್ಲರಿಗೆ ಕಾಣುವಂತೆ ಹಿಡಿದರು.

''ಏನ್ಮಾಡೋಕಾಗುತ್ತೆ ತಾತಾಚಾರ್ರೇ, ಕಳೆದ ಮೀಟಿಂಗ್‌ನಲ್ಲಿ ನಾವು ಇದನ್ನೇ ತಾನೆ ಚರ್ಚೆ ಮಾಡಿದ್ದು, ಕೆಲವೊಮ್ಮೆ ಅಭಿವೃದ್ಧಿ ಕಾಣ್ಬೇಕೂ ಅಂದ್ರೆ ಇವೆಲ್ಲಾ ಸಹಜ ಅಲ್ವೇ ? ಅಲ್ಲೊಂದು ಕಡೆ ನೋಡಿ, ಪಾಪ ನಮ್ಮ ಪೊಲೀಸ್ ಪೇದೆಗಳು ಮೂವತ್ತು ವರ್ಷಗಳಿಂದ ವಾಸಿಸ್ತಾ ಇರೋ ಕ್ವಾರ್ಟರ್ಸ್ ಕೂಡ ಈಗ ನೆಲಸಮ ಆಗ್ತಾ ಇದೆಯಂತೆ'' ಸುರೇಶ್ ರಾಜಾರೋಷವಾಗಿ ತಮ್ಮ ಅಭಿಪ್ರಾಯ ಮಂಡಿಸಿದರು.

''ನೀವೆಲ್ಲಾ ಸ್ವಲ್ಪ ಸುಮ್ಮನಿದ್ರೆ ಸತ್ಯಾಂಶ ಏನು ಅಂತ ಹೇಳ್ತೀನಿ, ಆಮೇಲೆ ನಿಮ್ಮ ನಿಮ್ಮ ಪ್ರತಿಪಾದನೆ ಮಾಡುವಿರಂತೆ'' ಎನ್ನುತ್ತಾ ತಾತಾಚಾರ್ ವಾದವಿವಾದಗಳಿಗೆ ಇತಿಶ್ರೀ ಹಾಡಿ, ಮುಂದುವರಿಸಿದ್ದರು.

''ನೋಡಿ ಈಗ ಬರ್ತಾ ಇರೋದು ಮೆಟ್ರೋ ರೈಲಲ್ಲ, ನಮ್ಮ ಪಾಲಿಗೆ ಪೆಟ್ರೋ ರೈಲಾಗಿದೆ. ನಾವೆಲ್ಲಾ ಮೆಟ್ರೋ ಬಂದ್ರೆ ಬೆಂಗಳೂರು ಜಪಾನ್ ಆಗುತ್ತೆ, ನಮಗೆ ಈ ಕೆಟ್ಟ ಹವೆ ಸೇವಿಸಿ ಓಡಾಡೋದು ತಪ್ಪುತ್ತೆ ಅಂದುಕೊಂಡಿದ್ವಿ ಅಲ್ವಾ. ಆದ್ರೆ ಅದಕ್ಕೂ ಮುಂಚೆ



ನಾವೆಲ್ಲಾ ಇಲ್ಲಿಂದ ಕಂಬಿ ಕೀಳಬೇಕಾಗುತ್ತೆ. ನಮ್ಮ ಈ ಅಪಾರ್ಟ್‌ಮೆಂಟೂ ಮೆಟ್ರೋ ರೈಲು ಮಾರ್ಗದಲ್ಲೇ ಬರುತ್ತೇಂತ ನೀಲನಕ್ಷೆಯಲ್ಲಿ ಕ್ಲೀನಾಗಿ ಗುರುತುಹಾಕಿ ಪ್ರಕಟಿಸಿದ್ದಾರೆ 'ಪ್ರಜಾತಂತ್ರ' ಪತ್ರಿಕೆಯೋರು. ನೀವು ಹೇಳ್ತಾ ಇರೋ ಜೆ ಸಿ ಬಿ ಅನ್ನೋ ದೈತ್ಯ ಇಲ್ಲಿಂದ ಒಂದು ಕಿಲೋಮೀಟರ್ ದೂರದಲ್ಲಿ ತನ್ನ ಕೆಲಸ ಮಾಡ್ತಾ ಇದೆ. ನಮ್ಮ ಸಂಘಕ್ಕೂ ನೋಟೀಸ್ ಬಂದಿದೆ ನೋಡಿ'' ಎಂದು ಹೇಳುತ್ತಾ ನೋಟೀಸಿನ ಜೆರಾಕ್ಸ್ ಪ್ರತಿಯನ್ನು ಎಲ್ಲರಿಗೂ ಹಂಚಿದರು ತಾತಾಚಾರ್.

ನೋಟೀಸನ್ನು ನೋಡುತ್ತಿದ್ದಂತೆಯೇ ಎಲ್ಲರ ಮುಖದಲ್ಲಿದ್ದ ಮಂದಹಾಸ ಮಾಯವಾಗಿತ್ತು. ಗುಸುಗುಸು ಹೆಚ್ಚಾಗಿತ್ತು. ಎಲ್ಲರೂ ತಂತಮ್ಮ ಮೊಬೈಲ್‌ಗಳಿಂದ ಹತ್ತಿರ ಸಂಬಂಧಿಗಳಿಗೆ ಫೋನಾಯಿಸಲಾರಂಭಿಸಿದರು. ಹೆಂಗಸರಲ್ಲಿ ತೀವ್ರವಾದ ಚರ್ಚೆಯೇ ಶುರುವಾಗಿತ್ತು. ತಮ್ಮ ಜೀವನದ ದುಡಿಮೆಯೆಲ್ಲವನ್ನೂ ಸುರಿದು, ೩೦-೪೦ ಲಕ್ಷ ರೂ.ಗಳನ್ನು ಕೊಟ್ಟು ಖರೀದಿಸಿದ ಆಲಿಶಾನ್ ಮಕಾನ್‌ಗಳು ಕೈಬಿಟ್ಟು ಹೋಗುವುದು ಎಲ್ಲರಲ್ಲಿ ಗಾಬರಿ ಹುಟ್ಟಿಸಿತ್ತು. ಒಂದಿಬ್ಬರು ಆಗಲೇ ಹೋರಾಟಕ್ಕೆ ತಯಾರಾದ ವರಂತೆಯೇ ನಟಿಸಿದ್ದೂ ಉಂಟು. ಪರಿಹಾರ ಎಷ್ಟು ಸಿಗಬಹುದು, ಸಿಗುವುದೋ

ಇನ್ನೇನು ಎಂಬುದರ ಬಗ್ಗೆ ಒಳಗೊಳಗೇ ಚರ್ಚೆ ಪ್ರಾರಂಭವಾಗಿತ್ತು.

"ನೋಡಿ ಸ್ನೇಹಿತರೇ, ಸರ್ಕಾರ ನಮ್ಮ ಅಪಾರ್ಟ್‌ಮೆಂಟನ್ನು ಕೆಡವೋದಂತೂ ನಿಶ್ಚಿತ. ಪರಿಹಾರವಾಗಿ ಸ್ವಲ್ಪ ಕೊಡುತ್ತೇವೆಂದು ಹೇಳಿದ್ದಾರೆ. ಆದರೆ ಇನ್ನು ಒಂದು ತಿಂಗಳೊಳಗಾಗಿ ನಾವೇ ಖಾಲಿ ಮಾಡದಿದ್ದಲ್ಲಿ ಜೆ.ಸಿ.ಬಿ. ಪ್ರಯೋಗಿಸಲಾಗುವುದೆಂಬ ಎಚ್ಚರಿಕೆಯನ್ನೂ ನೀಡಿದ್ದಾರೆ" ಎನ್ನುತ್ತಾ ಜಯರಾಂ ಗುಸುಗುಸು ಮಾತುಗಳಿಗೆ ಕಡಿವಾಣ ಹಾಕಿದ್ದರು.

"ಅವರು ಕೊಡೋ ಪರಿಹಾರ ನೆಕ್ಕೋಳಕ್ಕೂ ಸಾಕಾಗೋಲ್ಲ ಜಯರಾಂರವರೇ. ನಾವು ನಮ್ಮ ದುಡಿದ ಹಣವನ್ನೆಲ್ಲಾ ಸುರಿದು, ಲಕ್ಷಾಂತರ ಖರ್ಚುಮಾಡಿ ಈ ಮನೆ ಕೊಂಡಿದ್ದೇವೆ. ಇದನ್ನು ಬಿಟ್ಟು ಎಲ್ಲಿಗೆ ಹೋಗೋದು. ಅವರಿಗೇನು ಅನ್ಯಮಾರ್ಗವೇ ಇರಲಿಲ್ಲವೇ? ನಾಳೆ ನಮ್ಮನ್ನೇ ನಂಬಿರೋ ಹೆಂಡ್ರು ಮಕ್ಕಳ ಗತಿಯೇನು ಅಂತ ಯೋಚಿಸಬೇಕಲ್ವೇ. ಇನ್ನೊಂದ್ಸಾರಿ ಇಂಥ ಮನೆ ಕಟ್ಟೋಕಾಗುತ್ಯೇ. ಅದೂ ಅಲ್ಲದೆ ಈ ಮನೆ ತೊಗೋಳ್ಳೋಕೆ ಬ್ಯಾಂಕಿನಲ್ಲಿ ಪಡೆದಿರೋ ಸಾಲ ತೀರಿಸೋದು ಹ್ಯಾಗೆ? ಬ್ಯಾಂಕಿನೋರು ನಮ್ಮ ಕಷ್ಟಾನ ಕೇಳ್ತಾರ, ಇವನ್ನೆಲ್ಲಾ ಯೋಚಿಸಬೇಕಲ್ವೇ?" ಅನುಭವೀ ರಾಜಾರಾಯರ ಮಾತುಗಳು ಎಲ್ಲರನ್ನೂ ಇನ್ನೂ ಗಾಬರಿಗೊಳಿಸಿತ್ತು.

"ಈಗ ಹೆಚ್ಚು ಮಾತಿನಲ್ಲೇ ಕಾಲ ಕಳೆಯೋಕೆ ಆಗೋಲ್ಲ. ಏನಾದ್ರೂ ತೀರ್ಮಾನ ತೊಗೋಬೇಕಲ್ವ? ನೀವೆಲ್ಲ ಒಪ್ಪೋದಾದ್ರೆ ಮುಂದಿನ ಭಾನುವಾರ ನಮ್ಮ ಮನೆ ಇರೋ ರಸ್ತೆಯಲ್ಲೇ ರಸ್ತೆ ತಡೆ ಚಳುವಳಿ ಮಾಡೋಣ, ಏನಂತೀರ?"

ತಾತಾಚಾರ್ ಮಾತಿಗೆ ಎಲ್ಲರೂ ತಲೆದೂಗಿದರು.

**ಮುಂದೊಂದು ದಿನ**

ಬೆಳ್ಳಂಬೆಳಗ್ಗೆ ಓಂ ಶಾಂತಿ ಅಪಾರ್ಟ್‌ಮೆಂಟ್‌ನ ಇಡೀ ಸದಸ್ಯವರ್ಗ ರಸ್ತೆಯಲ್ಲಿ ಠಿಕಾಣಿ ಹೂಡಿತ್ತು. ೪೦ ಕುಟುಂಬಗಳೂ ಹಾಜರಿದ್ದವು. ಒಂದೊಂದು ಕುಟುಂಬಕ್ಕೆ ಒಂದೊಂದು ಘೋಷಣಾ ಫಲಕಗಳು ರಾರಾಜಿಸುತ್ತಿದ್ದವು. ಅಲ್ಲಲ್ಲಿ ಕಾಣುತ್ತಿದ್ದ ಕೆಂಬಾವುಟ. ಪುಟ್ಟ ಮಕ್ಕಳ ಕೈಯಲ್ಲಿ ಬರೆಸಿದ ನರ್ಮದಾ ಅಣೆಕಟ್ಟಿನ ಚಿತ್ರ. **ಬೆಂಗಳೂರು ಮೆಟ್ರೋ ವಿರೋಧಿ ಸಮಿತಿ** ಎಂಬ ಬ್ಯಾನರ್ ಕಂಗೊಳಿಸುತ್ತಿತ್ತು. ಜೊತೆಯಲ್ಲಿ **"ಪ್ರಖ್ಯಾತ ಬುದ್ಧಿಜೀವಿ, ವಿಚಾರವಾದಿ ಬಿ.ಕೆ.ಸಿ.ಯವರಿಗೆ ಸುಸ್ವಾಗತ"** ಎಂಬ ಬ್ಯಾನರ್ ಸಹ ಕಂಗೊಳಿಸುತ್ತಿತ್ತು. ಪುಟ್ಟ ಮಕ್ಕಳ ಕೈಗಳಲ್ಲೂ ಪ್ರತಿಭಟನಾ ಸಂಕೇತಗಳಾದ ಘೋಷಣಾ ಫಲಕಗಳು. ತಲೆ ಬೋಳಿಸಿಕೊಂಡವರೂ ಹಲವರು. ಅರೆನಗ್ನರಾದ ಪುರುಷರು ಹಲವರು. ಬಿಳಿ ಸೀರೆ ಉಟ್ಟ ನೀರೆಯರು.

'ಜಾಗತೀಕರಣಕ್ಕೆ ಧಿಕ್ಕಾರ', 'ಜನವಿರೋಧಿ ಅಭಿವೃದ್ಧಿ ನೀತಿಗೆ ಧಿಕ್ಕಾರ', 'ಪ್ರಾಣ ಕೊಟ್ಟೇವು ಜಾಗ ಕೊಡೆವು', 'ನಮ್ಮ ಮನೆ ನಮ್ಮ ಆಸ್ತಿ, ನಮ್ಮ ಹಕ್ಕು', 'ಮೇಧಾ ಪಾಟ್ಕರ್ ಜಿಂದಾಬಾದ್', 'ಬುದ್ಧಿಜೀವಿಗಳ ಹೋರಾಟಕ್ಕೆ ಜಯವಾಗಲಿ', 'ಮೆಟ್ರೋ ರೈಲು ಬೇಡವೇ ಬೇಡ', 'ನರ್ಮದಾ ಹೋರಾಟಗಾರರೇ ನಮಗೆ ಸ್ಫೂರ್ತಿ, ಜನಬಲವೇ ನಮ್ಮ ಆಸ್ತಿ', ಇತ್ಯಾದಿ ಘೋಷಣೆಗಳು ಮುಗಿಲುಮುಟ್ಟಿದ್ದವು. ಜಯರಾಂ, ತಾತಾಚಾರ್ ಮತ್ತಿತರರು ಗಂಟಲು ಹರಿಯುವಂತೆ ಘೋಷಣೆಗಳನ್ನು ಕೂಗುತ್ತಲೇ ಇದ್ದರು. ರಾಜಾರಾಯರು ಗಾಂಧಿಗಿರಿಯಂತೆ ಉಪವಾಸ ಸತ್ಯಾಗ್ರಹ ಪ್ರಾರಂಭಿಸಿದ್ದರು. ಪೊಲೀಸರ ಬಂದೋಬಸ್ತ್ ಇದ್ದಾಗ್ಯೂ ರಸ್ತೆ ತಡೆ ನಡೆದಿತ್ತು. ರಸ್ತೆ ತಡೆಯಿಂದ ಸ್ಥಗಿತಗೊಂಡಿದ್ದ ವಾಹನಗಳಲ್ಲಿ ಜೆ.ಸಿ.ಬಿ.ಯೂ ಒಂದಾಗಿತ್ತು.

ನಾ. ದಿವಾಕರ
ನಂ. ೫೦೪, 'ಚಿರಂತನ', ೧೨ನೇ ಕ್ರಾಸ್, ೨ನೇ ಹಂತ
ಶ್ರೀರಾಮಪುರ, ಮೈಸೂರು - ೫೭೦೦೨೩.

# ಕಳೆದೇ ಹೋಗುತ್ತಿದೆ ಬದುಕು



**ಕ**ಳೆದೇ ಹೋಗುತ್ತಿದೆ ಬದುಕು...!
ಈ ಕ್ಷಣದಲ್ಲಿ,
ಕೈಯಿಂದ ಜಾರುತ್ತಿರುವ,
ಈ ಕ್ಷಣದ ಕಣ ಕಣದಲ್ಲಿ॥

ಸದಾ ಬೆಂಬತ್ತಿದ ಭೂತ,
ಇಲ್ಲವೇ, ಭವಿಷ್ಯದ ನೀರ್ಗುಳ್ಳೆಯ
ವಿಸ್ಮೃತಿ!
ಇವೆರಡರ ನಡುವೆ ತೇಲಾಡುವ,
ಇವೆರಡರ ನಡುವೆ ತೂರಾಡುವ
ಗೆಳೆಯ!
ಎಲ್ಲಿದೆ ಹೇಳು ಈ ಕ್ಷಣದ ಬದುಕು? ॥
ಮುದುಡುತ್ತಿವೆ ಈ ಕ್ಷಣದಲ್ಲಿ
ಅಸಂಖ್ಯಾತ ಹೂವುಗಳು,
ಮಕ್ಕಳ ಮುಗ್ಧ ನಗು,
ನಲ್ಲೆಯರ ಕಣ್ಣ ನಕ್ಷತ್ರಗಳ ಮಿನುಗು,
ಯಾರ ಕಣ್ಣಿಗೂ ಬೀಳದ,
ಪ್ರಕೃತಿಯ
ಒನಪು, ವಯ್ಯಾರ, ಬೆಡಗು! ॥

ನಮಗೋ, ಅಯ್ಯೋ ವಿಸ್ಮೃತಿ!
ಯಾವುದೂ ಕಾಣುತ್ತಿಲ್ಲ! ಭ್ರಮಿತರಾಗಿದ್ದೇವೆ!
ಹೊರಗಣ್ಣು ತೆರೆದಿದ್ದರೂ, ಒಳಗಣ್ಣ ಬಿರಗ ಮುಚ್ಚಿದ್ದೇವೆ!

ನಮ್ಮದೇ ನಿದ್ರೆಯಲಿ ನಾವಿದ್ದೇವೆ!
ನಿದ್ರಿಸುತ್ತಲೇ ಜೀವಿಸಿದ್ದೇವೆ ಅನುಕ್ಷಣ,
ನಿದ್ರಿಸುತ್ತಲೇ ಸಾಯುತ್ತೇವೆ, ಎಂದೋ ಒಂದು ದಿನ!

ಕಳೆದೇ ಹೋಗುತ್ತಿದೆ ಬದುಕು...!
ಈ ಕ್ಷಣದಲ್ಲಿ,
ಕೈಯಿಂದ ಜಾರುತ್ತಿರುವ,
ಈ ಕ್ಷಣದ ಕಣ ಕಣದಲ್ಲಿ!!

**ಡಾ॥ ಡಿ. ಟಿ. ಕೃಷ್ಣಮೂರ್ತಿ**
ಡೆಪ್ಯುಟಿ ಮೆಡಿಕಲ್ ಸೂಪರಿಂಟೆಂಡೆಂಟ್, ಕರ್ನಾಟಕ
ವಿದ್ಯುತ್ ನಿಗಮ ನಿಯಮಿತ, ಕಾರ್ಗಲ್ - ೫೭೭ ೪೨೧
ಸಾಗರ ತಾಲ್ಲೂಕು. ಶಿವಮೊಗ್ಗ ಜಿಲ್ಲೆ.

# ಆಕ್ಟೇವಿಯಾ ಪಾಜ್

## ನೊಬೆಲ್ ಪುರಸ್ಕೃತ ಕವಿ



**ಮ**ನುಷ್ಯನು ಧೂಳಾದರೆ
ಬಯಲ ನಡುವೆ ನಡೆಯುವವರೆಲ್ಲರೂ
ಮನುಷ್ಯರೇ ?

೧೯೬೨ರಿಂದ ೬೮ರವರೆಗೆ ಭಾರತದಲ್ಲಿ ಮೆಕ್ಸಿಕೋದ ರಾಯಭಾರಿಯಾಗಿದ್ದ ನೊಬೆಲ್ ಪುರಸ್ಕೃತ ಕವಿ ಆಕ್ಟೇವಿಯಾ ಪಾಜ್ ತನ್ನ ಬರಹಗಳಲ್ಲಿ ಇಪ್ಪತ್ತನೆಯ ಶತಮಾನದ ತಲ್ಲಣಗಳನ್ನು ಅನನ್ಯ ರೀತಿಯಲ್ಲಿ ಮೂಡಿಸಿದ್ದಾನೆ. ಸ್ಪಾನಿಷ್ ಭಾಷೆಯಲ್ಲಿ ಬರೆಯುವ ಪ್ರಮುಖ ಕವಿಯಾದ ಈತ ೧೯೯೦ನೇ ಸಾಲಿನ ನೊಬೆಲ್ ಪುರಸ್ಕಾರ ಪಡೆದ ಮೆಕ್ಸಿಕೋ ದೇಶದವನು. ಕಾವ್ಯದಲ್ಲಿ ಆಧುನಿಕ ಸಂವೇದನೆಗಳು ಲೋಕದ ಅನೇಕ ತಿಳುವಳಿಕೆಗಳು ಹಾಸುಹೊಕ್ಕಾಗಿವೆ. ಲೇಖನ, ಉಪನ್ಯಾಸ, ವಿಮರ್ಶೆ ಇವುಗಳ ಮೂಲಕ ಗಮನಾರ್ಹ ಸ್ಥಾನ ಪಡೆದ ಪಾಜ್ ಇತಿಹಾಸವನ್ನು ಕಲಾತ್ಮವಾಗಿ ನಿರ್ಮಿಸುವ ಪ್ರತಿಭೆಯನ್ನು ಕಾವ್ಯದಲ್ಲಿ ತೋರಿಸಿದ್ದಾನೆ. ಇತಿಹಾಸ ಬಿಟ್ಟು ಕಾವ್ಯವಿಲ್ಲ, ಇತಿಹಾಸದ ಕುಲುಮೆಯಲ್ಲೇ ಜೀವತಳೆದ ಕಾವ್ಯ ನಿಜವಾದ ಕಾವ್ಯವೆಂದಿದ್ದಾನೆ. ಇತಿಹಾಸಕಾರನಿಗೆ ನಿರ್ಧರಿತ ಮಾನದಂಡಗಳಿಲ್ಲ, ಕವಿ ಹಾಗೂ ವಿಜ್ಞಾನಿಗೆ ಕಾಣ್ಕೆಗಳಿವೆ. ಕಾಲದ ಘಟನೆಗಳನ್ನು ಸನ್ನಿವೇಶಕ್ಕೆ ತಕ್ಕಂತೆ ವಿಂಗಡಿಸಿ ಅಭಿವ್ಯಕ್ತಿಸುವದೇ ಕವಿಯ ಕೆಲಸ. ಆಚರಣೆಗಳು ಬದಲಾಗದೆ ಸ್ಥಿರವಾಗಿ ಉಳಿಯುತ್ತವೆ. ನಂಬಿಕೆಗಳು ಚಲನಶೀಲವಾಗಿವೆ, ಕಾಲಕಾಲಕ್ಕೆ ಬದಲಾಗುತ್ತವೆ. ಇದನ್ನು ಕುರಿತಾಗಿ ಕವಿ ಹೀಗೆ ಹೇಳುತ್ತಾನೆ:

ಒಳಿತಿನಿಂದ ಮತ್ತೊಂದು ಒಳಿತನ್ನು ಹುಡುಕುವೆವು
ಜಗತ್ತನ್ನು ಅದು ನೇರಗೊಳಿಸುವದು.
ನಂಬುಗೆ ಕಳೆದುಕೊಳ್ಳದ ಪರಿಪೂರ್ಣರು ನಾವು
ತೇಜೋವಧೆಗೆ ಗುರಿಯಾಗಿ ತೀರಾ ನೊಂದವರು
ನಮಗೆ ಸಿಗಬೇಕಾದದ್ದು ಸಿಗಲಿ; ಮುಗ್ಧರು ನಾವಲ್ಲ.

ಇಂತಹ ಜಗದ ಕವಿ ಪಾಜ್ ಮಾರ್ಚ್ ೩೧, ೧೯೧೪ರಲ್ಲಿ ಮೆಕ್ಸಿಕೋದಲ್ಲಿ ಜನಿಸಿದ. ತಾಯಿ ಸ್ಪಾನಿಷ್ ಹೆಂಗಸು. ತಂದೆ ವಕೀಲ, ಕ್ರಾಂತಿಯಲ್ಲಿ ಭಾಗವಹಿಸಿದವ. ತಾತ ಪತ್ರಿಕೋದ್ಯಮಿ; ಫ್ರೆಂಚರ ವಿರುದ್ಧ ಸೆಣಸಿದ ವೀರ. ಪಾಜ್ ೧೯೬೨ರಲ್ಲಿ ಮೆಕ್ಸಿಕೋದ ರಾಯಭಾರಿಯಾಗಿ ಭಾರತಕ್ಕೆ ಬಂದ. ಮೆರಿಜೋಸಿ ಟ್ರಾಮಿನಿ ಎಂಬ ಹೆಣ್ಣನ್ನು ಮದುವೆಯಾದ. ಭಾರತದ ಕಲೆ, ಸಂಸ್ಕೃತಿ, ತತ್ವಶಾಸ್ತ್ರ ಕಾವ್ಯ ರಾಜಕೀಯಗಳ ಗಂಭೀರ ಅಧ್ಯಯನ ನಡೆಸಿದ ಪಾಜ್ ಹತ್ತು ವರ್ಷಗಳಲ್ಲಿ ಎಂಟು ಕವನ ಸಂಗ್ರಹಗಳನ್ನು ಪ್ರಕಟಿಸಿದ. ಭಾರತೀಯ ಚಿಂತನೆ, ಸಂಸ್ಕೃತಿಗಳಿಂದ ತನ್ನ ಸೃಜನಶೀಲತೆಗೆ ಸಮೃದ್ಧತೆ ತಂದುಕೊಂಡಿದ್ದಾನೆ. ದೇಶದ ಹಲವೆಡೆ ಪ್ರವಾಸ ಮಾಡಿದ ಫಲವಾಗಿ ಹಲವಾರು ಕವಿತೆಗಳಲ್ಲಿ ತನ್ನ ಅನುಭವವನ್ನು ದಾಖಲಿಸಿದ್ದಾನೆ :

ಸ್ಫಟಿಕ ಶಿಲೆ, ಶ್ವೇತ ಅರಮನೆ
ಬಿಳುಪಿನ ಮೇಲೆ ಕಪ್ಪುಕೊಳ
ಲಿಂಗ ಮತ್ತು ಯೋನಿ
('ಉದಯಪುರದಲ್ಲಿ ಒಂದು ದಿನ' ಕವಿತೆಯಲ್ಲಿ)

ಭಾರತದಲ್ಲಿದ್ದಾಗ ಹೃಷಿಕೇಶ, ಕನ್ಯಾಕುಮಾರಿ ಬಳಿ ಉದಕಮಂಡಲ, ಹಿಮಾಚಲ ಪ್ರದೇಶ, ಮೈಸೂರು ಹಾಗೂ ಅಲ್ಲಿನ ಬೃಂದಾವನ, ಎಲಿಫೆಂಟಾ, ಉದಯಪುರ, ಮಧುರೆ, ಕೊಚ್ಚಿನ್ ಹೀಗೆ ಅನೇಕ ಸ್ಥಳಗಳಿಗೆ ಭೇಟಿ ನೀಡಿ ಅಲ್ಲಿನ ಕಲೆ, ಪರಿಸರ, ಸಂಸ್ಕೃತಿ, ಜನಜೀವನಗಳನ್ನು ತನ್ನ ಕಾವ್ಯದಲ್ಲಿ ಅದ್ಭುತವಾಗಿ ಮೂಡಿಸಿದ್ದಾನೆ. ಆತ ಬಳಸಿದ ಪ್ರತಿಮೆಗಳು, ಕಾವ್ಯ ಪ್ರತಿಭೆ ಬೆರಗು ಮೂಡಿಸುವಂತಿದೆ. ಹಿಮಾಚಲ ಪ್ರದೇಶಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಬರೆದ ಮೂರು ಕವಿತೆಗಳು ಹೀಗಿವೆ:

ಆ ಪರ್ವತದ ತುಂಬೆಲ್ಲ ಸಾಧು ಸಂತರು
ಗಾಳಿ ಅಟ್ಟಾಡಿಸುವ ರಣ ಹದ್ದುಗಳು
ಅಸ್ಥಿಪಂಜರದೆಲುಬು ಗೂಡಿನ ಹುಡುಗಿ, ಮುದುಕಿ
ಹೊತ್ತು ತರುತ್ತಿದ್ದಾರೆ ಪರ್ವತಕ್ಕಿಂತ ದೊಡ್ಡ ಭಾರ
ಚೀಲಗಳು
(ಹಿಮಾಲಯ ಪ್ರದೇಶ - ೧. ಕವಿತೆ)

ಈ ನೆಲದ ಮೇಲೆ
ಚರಚರಗುಟ್ಟುವ ಚಪ್ಪಲಿ ಸದ್ದು
ಒಣ ಜಾಲಿ ಮುಳ್ಳುಗಳು
(ಹಿಮಾಲಯ ಪ್ರದೇಶ - ೨. ಕವಿತೆ)

ಪೈನ್ ಮರದ ನೆರಳುಗಳ ಬೆಟ್ಟಸಾಲು
ಧೂಳಿಗಾಗಿ ಅಳುವ ಹಕ್ಕಿ
ಸುಟ್ಟಂಥ ಆ ಸಂಜೆ
(ಹಿಮಾಲಯ ಪ್ರದೇಶ - ೩. ಕವಿತೆ)

ಕವಿ ಪಾಜ್ ಹೃಷಿಕೇಶ ಸಂದರ್ಶಿಸಿದ ಸಮಯದಲ್ಲಿ ರಚಿಸಿದ ಕವಿತೆಯಲ್ಲಿ ಪರಿಸರದ ರಮ್ಯತೆಯನ್ನು ಅದ್ಭುತವಾಗಿ ಚಿತ್ರಿಸಿದ್ದಾನೆ:

''ಹೃಷಿಕೇಶ ದಾಟಿ ಹರಿವ''
ಗಂಗೆ ಹಚ್ಚ ಹಸಿರು
ನೀರವ ಮೌನ ಜಲಸಂಧಿಯಲ್ಲಿ
ನೀಲಶೂನ್ಯದ ನಡುವೆ
ಬಿಳಿಯ ಹೆಬ್ಬಂಡೆ ಕಪ್ಪು ಮೋಡ
ನೀನು ಹೇಳಿದೆ.
ಆ ರಾತ್ರಿ ನನ್ನ ಕೈಗಳು ನಿನ್ನ ಸ್ತನಮಂಡಲದ ಮೇಲೆ

ಕನ್ಯಾಕುಮಾರಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಮೂಡಿದ ಕವಿತೆಯಲ್ಲಿ ನಿಸರ್ಗ ಪ್ರಕ್ರಿಯೆ ರೋಮಾಂಚನಕಾರಿಯಾಗಿದೆ.

ದ್ವಿದಳ ಧಾನ್ಯದ ನೆಲೆಯ ಮುಖ ಆಕಾಶದತ್ತ
ಸೂರ್ಯ ಚಂದ್ರರ ಸಮ್ಮಿಲನದ ರಾತ್ರಿ
ಮಿಂಚುಳ್ಳ ಹಕ್ಕಿಯ ವರ್ಣಪಾರದರ್ಶಕ ಹೊಳಪು

ಉದಕಮಂಡಲ ಕುರಿತಾದ ಕವಿತೆಯಲ್ಲಿ ನೀಲಗಿರಿ ಬೆಟ್ಟಗಳ ವರ್ಣನೆ ಜನರ ಬದುಕನ್ನು ಕಾವ್ಯದಲ್ಲಿ ಹರಡಿದ್ದಾನೆ :

ನೀಲಗಿರಿ ಬೆಟ್ಟಗಳ ಮೇಲೆ
ತೋಡರಿಗಾಗಿ ಹುಡುಕಾಡಿದೆ
ಅವರದು ಕೋನದೇಗುಲಲಾಯ
ಮೂಳೆ ಎದ್ದು ಗಡ್ಡದ ನಿಗೂಢ ಮುಖ
ತಮ್ಮ ಪವಿತ್ರ ಎಮ್ಮೆಗಳ ಹಾಲು ಕರೆದು
ರಾಗಗಳ ಗೊಣಗುತ್ತಾರೆ.

ಮೈಸೂರಿನ ಬೀದಿ ಹಾಗೂ ಬೃಂದಾವನ ಸಂದರ್ಶನದ ಕವಿತೆಗಳಲ್ಲಿ ಅಲ್ಲಿನ ಸಾಮಾಜಿಕ ಬದುಕನ್ನು ಸವಿರಾಗಿ ಹೆಣೆದಿದ್ದಾನೆ :

ಕನಸು ಕಟ್ಟಲು ತಕ್ಕ ಊರು; ಕುದುರೆ ಸವಾರರ ಬೀಡು
ಸೊಂಪಾಗಿ ಬೆಳೆದ ಹೆಂಗಸು ಮತ್ತು ಮಕ್ಕಳು
ದುಂಡುಮೊಲೆ, ದಪ್ಪ ಪೃಷ್ಟ, ಆಭರಣ ತೊಟ್ಟರೂ
ಬರಿಗಾಲ ನಡಿಗೆ
ಹಚ್ಚೆ ಹೊಯಿಸಿಕೊಂಡ ಹೆಣ್ಣು, ಗಂಡುಗಳು
ಅಸಂಖ್ಯ ಕಣ್ನೋಟಗಳ ಮಿಲನ, ತಣ್ಣನೆಯ ನೋಟ
ಆದರೆ ಟಿಪ್ಪು ಸುಲ್ತಾನ ಆವ ಮೈಸೂರ ಹುಲಿ.
('ಮೈಸೂರಿನ ಬೀದಿಯಲ್ಲಿ' ಕವಿತೆ)

ಬೃಂದಾವನದ ತಳಕು - ಬೆಳಕು ನೆನೆಯುತ್ತ ಕವಿ
ಮಧ್ಯರಾತ್ರಿ ಪಾರ್ಟಿಗಳ ನಗೆ
ಗಂಟೆಗಟ್ಟಲೆ ನೃತ್ಯ

ವೀರಣ್ಣ ವಾಲಿ

ನಕ್ಷತ್ರ ಪುಂಜದ ಮೆರವಣಿಗೆ
ನಾನು ನಂಬಲೇ ಮನುಷ್ಯರನ್ನು ?
ಅಥವಾ ನಕ್ಷತ್ರಗಳನ್ನು ?

('ಬೃಂದಾವನ' ಕವಿತೆ)

'ಎಲಿಫೆಂಟಾದಲ್ಲಿ ಭಾನುವಾರ' ಎಂಬ ಕವಿತೆಯಲ್ಲಿ ಅವರು ಬಳಸಿದ ಪ್ರತಿಮೆ, ಕಾವ್ಯದ ಕಸೂತಿ ಆಗಾಧವಾಗಿವೆ :

ಭವ್ಯ ಶಿಲ್ಪಕೃತಿಯ ಪಾದದಡಿಯಲ್ಲೇ ಪ್ರಾತಃ ಕಾಲ
ಮಹಮ್ಮದೀಯ, ಪೋರ್ಚುಗೀಸರಿಂದ ಭಗ್ನಭಿನ್ನ
ಆಕೃತಿಯ ಊನಾಂಗಗಳು ಕಾಗೆ ಕುನ್ನಿಗಳ ತಿನಿಸು ತಾಣ

'ಮಧುರೆ ಸಂದರ್ಶಿಸಿದ ಕಾಲ'ದ ಕವಿತೆಯಲ್ಲಿ ಮೂಡಿದ ಸಾಲುಗಳು:

ಬ್ರಿಟಿಷರ ಬಾರೊಂದರಲ್ಲಿ
ತಂಪು ಪಾನೀಯಗಳು, ಬ್ರಿಟಿಷರೇ ಅಲ್ಲಿಲ್ಲ
ಈ ಪವಿತ್ರ ಊರಿನಲ್ಲಿ ಗಗನಕ್ಕೇರಿದ ಬೆಲೆ

ಕೊಚ್ಚಿನ್ ಸಂದರ್ಶಿಸಿದ ಕಾಲದಲ್ಲಿ ರಚಿಸಿದ ಕವಿತೆಯಲ್ಲೂ ಪದ ಪ್ರಯೋಗ ಅತ್ಯಂತ ಸೊಗಸಾಗಿದೆ:

ಕ್ರಿಶ್ಚಿಯನ್ ಸ್ಮಶಾನಗಳ ಸಮಾಧಿಯ ಬಳಿಯಲ್ಲಿ
ಮೇಯುತಿವೆ ಅಲ್ಲಲ್ಲಿ
ಶೈವರ ಹಸುಗಳೇ ಇರಬೇಕು.

ಚಿತ್ರಕಲಾಕಾರ ಸ್ವಾಮಿನಾಥನ್ ಕುರಿತು ಬರೆಯುತ್ತಾ ಆತನ ಚಿತ್ರಗಳನ್ನು ವೀಕ್ಷಿಸಿ ಹೀಗೆ ಬರೆಯುತ್ತಾನೆ:

ಹಾವು ಹೆಜ್ಜೆಯ ಜಲತರಂಗದ ಅಲೆ ಮುನ್ನುಗ್ಗಿ
ಆ ಅಲೆಗಳು ಇನ್ನೂ ಹತ್ತಿರ ಕಂಡಂತೆ ಕಾಣ್ಕೆ ಹೊಳಹು
ಅದರ ಮೈ ಬಣ್ಣ ಚಿತ್ರ ವಿನ್ಯಾಸಗಳು
ಒಡೆಯಲಾಗದ ಒಗಟು. ನಗ್ನ ವೇಷ.

ಹೀಗೆ ಆಕ್ಟೇವಿಯಾ ಪಾಜ್ ಭಾರತದ ನಿಸರ್ಗ, ರಮ್ಯತೆ ಬದುಕನ್ನು ಕಣ್ಣಾರೆ ಕಂಡ ಕವಿ. ಆತನು ತನ್ನ ಕಾವ್ಯದಲ್ಲಿ ಇವುಗಳನ್ನು ಅದ್ಭುತವಾಗಿ ಕಾವ್ಯೀಕರಿಸಿದ್ದಾನೆ. ಮೆಕ್ಸಿಕನ್ ವಿದ್ಯಾರ್ಥಿಗಳು ತಮ್ಮ ಸರಕಾರದ ವಿರುದ್ಧ ಪ್ರತಿಭಟಿಸಿ ಚಳುವಳಿ ನಡೆಸಿದ ಕಾರಣ ಇಂಡಿಯಾದಲ್ಲಿ ರಾಯಭಾರಿ ಕೆಲಸಕ್ಕೆ ರಾಜೀನಾಮೆ ಸಲ್ಲಿಸಿ ತನ್ನ ದೇಶಕ್ಕೆ ಮರಳಿದ. ೧೯೭೦ರಲ್ಲಿ ಏಳು ಪ್ರಭಾವಶಾಲಿ ಪುಸ್ತಕಗಳನ್ನು ಪ್ರಕಟಿಸಿದ. ಅವೆಂದರೆ ೧. ಮೆಕ್ಸಿಕನ್ ರಾಜಕೀಯ ೨. ಮೆಕ್ಸಿಕನ್ ಕವಿ ಕ್ಷೇವಿಯರ್ ಎಲ್ಲರುಟಿಯಾ ೩. ಚಾರ್ಲ್ಸ್ ಪೋರರ್ ಸಮಗ್ರ ಕಾವ್ಯ ೪. ದಿ ಚಿಲ್ಡ್ರನ್ ಆಫ್ ದಿ ಮಯರ್ ೫. ಹೋವರ್ಡ್ ಭಾಷಣ ಮಾಲೆ ೬. ರಮ್ಯ ಪಂಥ ೭. ದಿ ಮಂಕೀ ಗ್ರೆಮೆರಿಯನ್ ೮. ಕಂಜಕ್ಷನ್ ಅಂಡ್ ಡಿಸ್‌ಜೆಂಕ್ಷನ್. ಈತನ ಸಾಹಿತ್ಯ ಸೇವೆಯನ್ನು ಪರಿಗಣಿಸಿ ೧೯೬೩ರಲ್ಲಿ ಗ್ರಾಂಡ್ ಪ್ರೀ ಪ್ರಶಸ್ತಿ, ೧೯೭೭ರಲ್ಲಿ ಜರೂಸಲೆಮ್ ಪ್ರಶಸ್ತಿ ಮತ್ತು ೧೯೯೦ರಲ್ಲಿ ನೊಬೆಲ್ ಪ್ರಶಸ್ತಿಗಳನ್ನು ನೀಡಿ ಗೌರವಿಸಲಾಯಿತು.

ಸೌಜನ್ಯ : **ನೊಬೆಲ್ ಪುರಸ್ಕೃತರ ಸಾಹಿತ್ಯ ಮಾಲೆ**

ವೀರಣ್ಣ ವಾಲಿ
ಅಧ್ಯಾಪಕರು, ಸ.ಪ.ಪೂ.ಕಾಲೇಜು, ಹೊಸಬಂಡಿ, ಹರ್ಲಾಪೂರ,
ತಾ॥ಜಿ॥ ಕೊಪ್ಪಳ, ಅಂಚೆ: ಹೊಸಬಂಡಿ ಹರ್ಲಾಪೂರ





## ಸುದ್ದಿ ಚಿತ್ರ



ದಿನಾಂಕ ೧೨.೭.೦೯ ರಂದು ಬೆಂಗಳೂರಿನಲ್ಲಿ ನವಕರ್ನಾಟಕದ ನಾಲ್ಕು ಕೃತಿಗಳ ಲೋಕಾರ್ಪಣೆ ಸಮಾರಂಭ ನಡೆಯಿತು. ಪ್ರೊ॥ ಜಿ. ವೆಂಕಟಸುಬ್ಬಯ್ಯ ಅವರ 'ಇಗೋ ಕನ್ನಡ - ೩' ನಿಘಂಟು, ಡಾ॥ ಎಮ್. ಎನ್. ಕೇಶವ ರಾವ್ ಅವರ 'ಸೀತಾಕಾವ್ಯ ಕಥನ' ಮತ್ತು 'ಜೀವೋಪನಿಷತ್' ಕವನ ಸಂಕಲನಗಳು ಹಾಗೂ ಎಸ್. ಮಂಜುನಾಥ ಅವರ 'ವೈಚಾರಿಕ ಕವನಗಳು' – ಇವುಗಳು ಅನಾವರಣಗೊಂಡವು. ಪ್ರೊ॥ ಎಂ. ಎಚ್. ಕೃಷ್ಣಯ್ಯ ಸಮಾರಂಭದ ಅಧ್ಯಕ್ಷತೆ ವಹಿಸಿ ಪುಸ್ತಕಗಳನ್ನು ಅನಾವರಣಗೊಳಿಸಿದರು.

ಕಾರ್ಯಕ್ರಮದ ಅಂಗವಾಗಿ 'ಸೀತಾಕಾವ್ಯ ಕಥನ'ದ ಕೆಲವು ಭಾಗಗಳ ವಾಚನ ಮತ್ತು ವ್ಯಾಖ್ಯಾನ ಸಹ ಜರುಗಿತು.

ಮೇಲಿನ ಚಿತ್ರ ಎಡ – (ಎಡದಿಂದ ಬಲಕ್ಕೆ) ಶ್ರೀ ಆರ್. ಎಸ್. ರಾಜಾರಾಮ್, ಪ್ರೊ॥ ಜಿ. ವೆಂಕಟಸುಬ್ಬಯ್ಯ, ಪ್ರೊ॥ ಎಂ. ಎಚ್. ಕೃಷ್ಣಯ್ಯ, ಡಾ॥ ಎಮ್. ಎನ್. ಕೇಶವರಾವ್ ಮತ್ತು ಶ್ರೀ ಎಸ್. ಮಂಜುನಾಥ

(ಬಲ ಚಿತ್ರ) ಕಾವ್ಯ ವಾಚಿಸುತ್ತಿರುವವರು ಶ್ರೀಮತಿ ಶೋಭಾ ಶಶಿಧರ್ ಮತ್ತು ವ್ಯಾಖ್ಯಾನ ಮಾಡುತ್ತಿರುವವರು ಶ್ರೀಮತಿ ಬಿ. ಜಿ. ಕುಸುಮ.

# ಧರ್ಮ ಹಾಗೂ ತತ್ತ್ವಜ್ಞಾನಗಳ ಮೇಲೆ ಡಾರ್ವಿನ್‌ರ ಪ್ರಭಾವ

ದೇವಿಪ್ರಸಾದ್ ಚಟ್ಟೋಪಾಧ್ಯಾಯ



ಆರಂಭದಲ್ಲೇ ಒಂದು ವಿಷಯವನ್ನು ಒತ್ತಿ ಹೇಳಬೇಕು – ಡಾರ್ವಿನ್‌ರ ನಿಜವಾದ ಕಾಳಜಿ ಇದ್ದುದು ಧರ್ಮದಲ್ಲೂ ಅಲ್ಲ, ತತ್ತ್ವಜ್ಞಾನದಲ್ಲೂ ಅಲ್ಲ. ಅವರು ಖಂಡಿತ ಮತಧರ್ಮಶಾಸ್ತ್ರಜ್ಞರೂ ಆಗಿರಲಿಲ್ಲ, ತತ್ತ್ವಜ್ಞಾನಿಯೂ ಆಗಿರಲಿಲ್ಲ. ಬದಲು ಹೀಗೆ ತುಂಬ ಸೂಕ್ತವಾಗಿ ವರ್ಣಿಸಬಹುದಾದರೆ ಅವರೊಬ್ಬ ಮೆಕ್ಕಲು ಮನಸ್ಕರಾಗಿದ್ದರು – ಅಂದರೆ ವಾಸ್ತವಾಂಶಗಳು ಮನಸ್ಸಿನಲ್ಲಿ ಗುಡ್ಡೆಗೂಡಲು ಬಿಟ್ಟುಕೊಟ್ಟು ಅನಂತರ ಅವು ತಮ್ಮವೇ ಆದ ನಿರ್ದಿಷ್ಟ ರೂಪ ತಳೆಯಲು ಅವಕಾಶ ಮಾಡಿಕೊಡುವಂಥ ಮನಸ್ಸಿನವರಾಗಿದ್ದರು, ಎಂದು ಸರಿಯಾಗಿ ವರ್ಣಿಸಬಹುದು. ತುಂಬ ಚೆನ್ನಾಗಿಯೇ ತಿಳಿದು ಬಂದಿರುವಂತೆ, ಡಾರ್ವಿನ್‌ರು ತಮ್ಮ ಮನಸ್ಸಿನಲ್ಲಿ ಸಾಕ್ಷ್ಯಾಧಾರಗಳು ವರ್ಷಗಟ್ಟಲೆ ಸಂಗ್ರಹವಾಗಲು ಸುಮ್ಮನೆ ಬಿಟ್ಟುಕೊಟ್ಟರು. ಕೊನೆಯಲ್ಲಿ ಈ ಸಾಕ್ಷ್ಯಾಧಾರಗಳ ಬೃಹತ್ ಸಂಗ್ರಹವೇ ಅವರಿಗೆ ಒಂದು ತೀರ್ಮಾನಕ್ಕೆ ಬರಲು, ಅಥವಾ ಇನ್ನೂ ಹೆಚ್ಚು ಸೂಕ್ತವಾಗಿ ಹೇಳಬಹುದಾದರೆ, ಅವುಗಳಿಗೆ ಒಂದು ಸಾಮಾನ್ಯ ನಿಯಮಗಳ ತಾತ್ತ್ವಿಕ ರೂಪ ನೀಡಲು, ಸಾಧ್ಯ ಮಾಡಿಕೊಟ್ಟಿತು. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಅವರು ಮೂಲತಃ ಒಬ್ಬ ವೀಕ್ಷಕರಾಗಿದ್ದರು. ಇತಿಹಾಸಕ್ಕೆ ತಿಳಿದುಬಂದಿರುವಂಥ ಅತ್ಯಂತ ತಾಳ್ಮೆಯ ಅತ್ಯಂತ ವಿಸ್ಮಯಕಾರಕ ವೀಕ್ಷಕರಲ್ಲೊಬ್ಬರಾಗಿದ್ದರು. ಅವರ ಮನಸ್ಸಿನಲ್ಲಿ ಸಂಗ್ರಹವಾದ ದಿಗ್ಭ್ರಮೆಗೊಳಿಸುವಂಥ ವಾಸ್ತವಾಂಶಗಳ ಬೃಹತ್ ರಾಶಿಯಿಂದಲೇ ಉದ್ಭವವಾಯಿತು – ಜೀವ ವೈಜ್ಞಾನಿಕ ವಿಕಾಸ ಸಿದ್ಧಾಂತ. ಡಾರ್ವಿನ್‌ರೇ ಈ ಸಿದ್ಧಾಂತವನ್ನು ಮನಸ್ಸಿಲ್ಲದ ವೀಕ್ಷಕನೊಬ್ಬನ ಮೇಲೆ ವಾಸ್ತವಾಂಶಗಳು ಹೊರಿಸಿದ ಸಿದ್ಧಾಂತ, ಎಂದೇ ವರ್ಣಿಸದ್ದಾರೆ. ಡಾರ್ವಿನ್‌ರು ತುಂಬ ಜಾಗರೂಕತೆಯಿಂದ, ನಿಷ್ಪಕ್ಷಪಾತೆಯಿಂದ ಸಂಗ್ರಹಿಸಿದ ವಾಸ್ತವಾಂಶಗಳನ್ನು ಡಾರ್ವಿನ್‌ವಾದದಿಂದ ತೆಗೆದುಹಾಕುವ ಕಲ್ಪನೆ ಮಾಡಿಕೊಳ್ಳಬಹುದಾದಲ್ಲಿ, ಆ ವಾದದಲ್ಲಿ ಉಳಿಯಬಹುದಾದುದು, ವಿಜ್ಞಾನ ತತ್ತ್ವಜ್ಞಾನಗಳ ಪರಿಹಾಸ್ಯ ಮಾಡುವಂಥ ಕೇವಲ ಒಂದು ಎಲುಬುಗೂಡಷ್ಟೆ.

ಹಾಗಾಗಿ ಡಾರ್ವಿನ್‌ವಾದವೆಂದರೆ ಅದೇ – ವಾಸ್ತವಾಂಶಗಳ ರಾಶಿಯಿಂದ ಹೊರಹೊಮ್ಮಿದ ಸಿದ್ಧಾಂತ. ಆದರೂ ಮತಧರ್ಮಶಾಸ್ತ್ರಜ್ಞರು ಶತಮಾನಕ್ಕೂ ಹೆಚ್ಚು ಕಾಲದಿಂದ ಡಾರ್ವಿನ್‌ವಾದದ ವಿರುದ್ಧ ಕತ್ತಿ ಹಿಡಿದು ನಿಂತುದೂ, ಅವರ ಆ ಅಸ್ತ್ರಗಳು ತುಂಡುತುಂಡಾಗಿ ಮುರಿದುಬಿದ್ದುದೂ ಒಂದು ವಾಸ್ತವಾಂಶ. ಅವರ ನಡೆವೆಯೂ ಟಿ. ಎಚ್. ಹಕ್ಸ್ಲೀಯವರಂಥ ಭಿನ್ನವ್ಯಕ್ತಿಗಳಿದ್ದರೆನ್ನಿ. ಏನೇ ಆಗಲಿ, ಇವರು ಒಬ್ಬ ಪ್ರಮುಖ ವೃತ್ತಿಪರ ತತ್ತ್ವಜ್ಞಾನಿಯಾಗಿಯೇನೂ ಕಾಣಿಸಿಕೊಳ್ಳರು. ಡಾರ್ವಿನ್‌ರು ಅವರ ಕಾಲದ, ಅದರಲ್ಲೂ ವಿಶೇಷವಾಗಿ ಅವರ ದೇಶದ, ಇಡೀ ವೃತ್ತಿಪರ ತತ್ತ್ವಜ್ಞಾನಿಗಳ ಜಗತ್ತನ್ನೇ ತುಂಬ ಪೇಚಾಟಕ್ಕೆ ಸಿಕ್ಕಿಸಿಬಿಟ್ಟರು. ಇವರಿಗೆ ಹೋಲಿಸಬಹುದಾದಂಥ ಮತ್ತೊಬ್ಬ ವ್ಯಕ್ತಿ ಎಂದರೆ – ಅವರಿಗಿಂತ ಸ್ವಲ್ಪ ಕಿರಿಯ ಸಮಕಾಲೀನರಾದ ಕಾರ್ಲ್‌ಮಾರ್ಕ್ಸ್. ಇವರೂ ಡಾರ್ವಿನರಂತೆಯೇ ಬಹು ಭಾರಿ ಪ್ರಮಾಣದಲ್ಲಿ ವಾಸ್ತವಾಂಶಗಳನ್ನು ಸಂಗ್ರಹಿಸಿದ್ದರು. ಅದರಿಂದ ಹೊರಹೊಮ್ಮಿದ್ದವು ಅವರ ತಾತ್ತ್ವಿಕ ಸಿದ್ಧಾಂತಗಳು. ಡಾರ್ವಿನ್‌ರಂತೆ ಮಾರ್ಕ್ಸ್ ಅವರೂ ಮತಧರ್ಮಶಾಸ್ತ್ರಜ್ಞರ ಹಾಗೂ ವೃತ್ತಿಪರ ತತ್ತ್ವಜ್ಞಾನಿಗಳ ಅತ್ಯಂತ ತೀವ್ರತರ ವಿರೋಧವನ್ನು ಎದುರಿಸಬೇಕಾಗಿ ಬಂದಿತು. ನಿಜಕ್ಕೂ, ಇವರಿಬ್ಬರೂ ಅನುಸರಿಸಿದ ವಿಧಿವಿಧಾನಗಳಿಂದ ಹಾಗೂ ಇಬ್ಬರೂ ಪ್ರಚೋದಿಸಿದ ಪ್ರತಿರೋಧದಿಂದ ತೀರ್ಮಾನಿಸುವುದಾದಲ್ಲಿ ಇವರಿಬ್ಬರ ನಡುವೆಯೂ ಅನೇಕ ಸಾಮಾನ್ಯ ಅಂಶಗಳಿವೆಯೆಂದು ಹೇಳಬಹುದಾಗಿದೆ. ತಾವು ಸಂಗ್ರಹಿಸಿದ ವಾಸ್ತವಾಂಶಗಳಿಂದ ಅವರು ಮಾಡಿದ ಸಾರ್ವತ್ರೀಕರಣದ ಸಾರಭೂತ ದಿಶೆಯ ದೃಷ್ಟಿಯಿಂದಲೂ ಇಬ್ಬರ ನಡುವೆಯೂ ಅನೇಕ ಸಾಮಾನ್ಯಾಂಶಗಳಿವೆ. ''ಜೀವ ಜಾತಿಗಳೂ ಸಾಮಾಜಿಕ ವ್ಯವಸ್ಥೆಗಳೂ ಏಕ ರೀತಿಯಲ್ಲಿ ಅಪರಿವರ್ತನೀಯವಾದವು ಎಂಬ ಉಭಯ ಭಾವನೆಯು ಅದರ ಎರಡೂ ಭಾಗಗಳಲ್ಲಿ ಬದಲಾವಣೆಯ ನಿರ್ದಾಕ್ಷಿಣ್ಯ ವ್ಯಾಖ್ಯಾನಕ್ಕೆ ದಾರಿಮಾಡಿಕೊಟ್ಟಿದೆ'' (ಬಾರೋಸ್ ಡುನ್ಹಾಮ್, 'ಧೀರರೂ ಪಾಷಂಡಿಗಳೂ', ಆಲ್‌ಫ್ರೆಡ್ ಎ ಕಾಫ್, ನ್ಯೂಯಾರ್ಕ್, ೧೯೬೭, ಪು. ೪೦೭)' ನಿಸರ್ಗದ ಮೇಲಿನ ನಿಯಂತ್ರಣವನ್ನು ಹೊಂದಾಣಿಕೆಯ ಅತ್ಯುನ್ನತ ರೂಪವೆಂದು ಭಾವಿಸಬಹುದು ಎಂದು ಡಾರ್ವಿನ್ ತೋರಿಸಿಕೊಟ್ಟರು. ಮತ್ತೆ ಮಾರ್ಕ್ಸ್? ನಿಸರ್ಗದ ಮೇಲೆ ಮಾನವನ ನಿಯಂತ್ರಣವನ್ನು ಅವನದೇ ಸಮಾಜದ ಮೇಲೆ ಅಂತಹುದೇ ನಿಯಂತ್ರಣದಿಂದ ಪೂರ್ಣಗೊಳಿಸಬೇಕು ಎಂದು ಮಾರ್ಕ್ಸ್ ತೋರಿಸಿಕೊಟ್ಟರು.'' (ಅದೇ ಗ್ರಂಥ. ಪು. ೪೧೩)

ಆದರೆ ಸದ್ಯಕ್ಕೆ ಮಾರ್ಕ್ಸ್‌ಅವರನ್ನು ಬಿಟ್ಟುಕೊಡೋಣ. ಏಕೆಂದರೆ, ಅವರ ಹೆಸರೇ ಡಾರ್ವಿನ್‌ರ ಸಮಕಾಲೀನ ಮೆಚ್ಚುಗೆಗಾರರ ಮನಸ್ಸುಗಳಲ್ಲೂ ಕೆಲವು ಸಂವೇದನಾಶೀಲ ಭಾಗಗಳನ್ನು ಇಕ್ಕಟ್ಟಿಗೆ ಸಿಲುಕಿಸಬಹುದು.

ಡಾರ್ವಿನ್‌ರು ೧೮೮೨ರ ಏಪ್ರಿಲ್ ೧೯ರಂದು ಮೃತರಾದರು. ಅವರ ಶರೀರವನ್ನು ವೆಸ್ಟ್‌ಮಿನ್‌ಸ್ಟರ್ ಅಬೇಯಲ್ಲಿ, ಹೂಳಲಾಯಿತು. ಅವರನ್ನು ಇಲ್ಲಿ ಹೂಳಿದುದು ಸಂಘಟಿತ ಧರ್ಮಪ್ರತಿಪಾದಕರಲ್ಲಿ ಕೆಲವರಿಗೆ ಅತ್ಯಂತ ಹೆಚ್ಚಿನ ಆಘಾತ ಉಂಟುಮಾಡಿರಬೇಕು. ''ಇಂಗ್ಲೆಂಡ್ ಇನ್ನೆಷ್ಟು ಮಾತ್ರವೂ ಒಂದು ಕ್ರಿಶ್ಚಿಯನ್ ದೇಶವಲ್ಲ'' ಎಂದು ರೆವರೆಂಡ್ ಡಾ॥ ಲಾಂಗ್ ಉದ್ಗರಿಸಿದರು (ಅದೇ ಗ್ರಂಥ, ಪು. ೪೧೩). ಅವರ ಉದ್ಗಾರವು ನಮಗೆ ಎಷ್ಟೇ ಬೋಳೆತನದ್ದೆಂದು ಕಂಡುಬಂದರೂ, ಈ ಪಾದ್ರಿಗಳ ಕೋಪಕ್ಕೆ ಆಧಾರವೂ ಇದ್ದಿತೆಂಬುದೂ ವಾಸ್ತವವೇ.

''ಈ (ಡಾರ್ವಿನ್‌ರ) ಸಾಮಾನ್ಯೀಕರಣದ ವ್ಯಾಪ್ತಿ ಎಷ್ಟು ವಿಸ್ತಾರವಾಗಿದ್ದತೆಂದರೆ 'ಜ್ಞಾನೋದಯ'ವು ಅದಕ್ಕೆ ಬಿಟ್ಟುಕೊಟ್ಟ ಬಹುಮಟ್ಟಿಗಿನ ಪ್ರದೇಶದಿಂದ ಅಲೌಕಿಕತೆ ಉಚ್ಚಾಟಿಸಲ್ಪಟ್ಟಿದ್ದಿತು. ಏಕೆಂದರೆ, ಮಾನವಕುಲವು ವಾನರರಿಂದ ಉದ್ಭವಿಸಿದ್ದಲ್ಲಿ, ಮತ್ತು ಎಲ್ಲ ಕಶೇರುಕಗಳೂ ಆದಿಕಾಲದ ಕೆಸರನ್ನು ಪರೀಕ್ಷಿಸಲೆಂದು ನೀರಿನಿಂದ ಹೊರಕ್ಕೆ ತೆವಳಿಕೊಂಡು ಬಂದ ಯಾವುದೋ ಸರಿಸೃಪ ದೈತ್ಯನಿಂದ ಉದ್ಭವಿಸಿದ್ದಲ್ಲಿ, ಜನರ ಮತ್ತು ದೇವರ ನಡುವಿನ

ಸಂಬಂಧವು ಧರ್ಮಗ್ರಂಥಗಳು ನಂಬುವಂತೆ ಬೋಧಿಸಿದ್ದುದಕ್ಕಿಂತ ಹೆಚ್ಚು ದೂರವಾಗಿರುವುದೇಕೆ ?'' (ಅದೇ ಗ್ರಂಥ, ಪು. ೪೦೭-೦೮). ''ವಾನರರು, ದೇವದೂತರು ಹಾಗೂ ವಿಕ್ಟೋರಿಯನ್ನರು'' ಎಂಬ ಅತ್ಯಾನಂದಕರವಾಗಿ ಓದಿಸಿಕೊಂಡು ಹೋಗುವಂಥ ಗ್ರಂಥದಲ್ಲಿ ವಿಲಿಯಂ ಇರ್ವಿನ್‌ರು ನಮಗೆ ತಿಳಿಸುತ್ತಾರೆ. ಡಾರ್ವಿನ್‌ರ ಪತ್ನಿಯೂ ಸಹ ತಮ್ಮ ಪತಿಯು ''ದೇವರನ್ನು ತುಂಬ ದೂರ ಸರಿಸಿದುದರ ಬಗೆಗೆ'' ತುಂಬ ದುಃಖದಿಂದಲೇ ಬರೆದರು (ಅದೇ ಗ್ರಂಥ, ಪು. ೪೦೭).

ಆದರೆ ದೇವರ ಪ್ರಶ್ನೆಯಷ್ಟೆ ಅಲ್ಲ, ಕ್ರಿಶ್ಚಿಯನ್ ಮತಧರ್ಮವೂ ಅದರ ಸೈದ್ಧಾಂತಿಕ ಸ್ವರೂಪದಲ್ಲಿ ಹೆಚ್ಚಿನ ಮಟ್ಟಿಗೆ ಪ್ಲೇಟೋ ಹಾಗೂ ಅರಿಸ್ಟಾಟಲ್‌ರ ಅಭಿಪ್ರಾಯಗಳನ್ನೇ ಆಧರಿಸಿದ್ದವು. ಆಧುನಿಕ ವಿಜ್ಞಾನವು ಇವುಗಳ ಮಾಂತ್ರಿಕ ಪ್ರಭಾವದಿಂದ ವಿಮೋಚನೆಗೊಂಡುದೇ ಡಾರ್ವಿನ್‌ರ ಕಾರ್ಯಸಾಧನೆ. ಪ್ಲೇಟೋ ಸಿದ್ಧಾಂತವೂ ಅರಿಸ್ಟಾಟಲ್ ಸಿದ್ಧಾಂತವೂ ಕೊಪರ್ನಿಕಸ್ ಹಾಗೂ ಗೆಲಿಲಿಯೋ ನಂತರ ಡಾರ್ವಿನ್‌ರಿಂದ ಅತ್ಯುಗ್ರ ಅಘಾತಕ್ಕೊಳಗಾದವು. ಈ ಅಂಶವನ್ನು ಜೆ. ಡಿ. ಬರ್ನಾಲ್ ಹೀಗೆ ಹೇಳುತ್ತಾರೆ. ''ಪ್ರತಿಪಾದಿತವಾದ ಕ್ಷಣದಿಂದಲೇ ವಿಕಾಸವಾದ ಸಿದ್ಧಾಂತವು ವೈಜ್ಞಾನಿಕ, ಸೈದ್ಧಾಂತಿಕ ಹಾಗೂ ರಾಜಕೀಯ ಕಥನದ ಕೇಂದ್ರಬಿಂದುವಾಗಿಬಿಟ್ಟಿತು. ಡಾರ್ವಿನ್‌ರು, ಬಹುಮಟ್ಟಿಗೆ ಅವರಿಗೇ ಅರಿವಿಲ್ಲದಂತೆ, ಜೀವಂತ ಪ್ರಪಂಚದಲ್ಲಿನ ಆದರ್ಶ ರೂಪಗಳಿಂದ ಕೂಡಿದ ಪ್ಲೇಟೋ ಸಿದ್ಧಾಂತದಲ್ಲಿ ಒಂದು ಭಾರಿ ವಿಚ್ಛೇದ ತಂದಿದ್ದರು. ನಿರ್ಜೀವ ಪ್ರಪಂಚದಲ್ಲಿ ಗೆಲಿಲಿಯೋ ಮಾಡಿದ್ದಂತೆ ಡಾರ್ವಿನ್‌ರು ವಿಕಾಸವಾದವನ್ನು ಒತ್ತಿ ಹೇಳುವುದಕ್ಕಿಂತ ಇನ್ನೂ ಹೆಚ್ಚಿನದನ್ನು ಸಾಧಿಸಿದ್ದರು – ಅವರು ನೈಸರ್ಗಿಕ ಆಯ್ಕೆ ಎಂಬ ಯಾಂತ್ರಿಕ ಕಾರ್ಯನೀತಿಯೊಂದನ್ನೂ ಒದಗಿಸಿದ್ದರು. ಅದು ಅಂತಿಮ ಧ್ಯೇಯಗಳ ಅರಿಸ್ಟಾಟಲ್‌ರ ವರ್ಗಸಿದ್ಧಾಂತಕ್ಕಿದ್ದ ಕೊನೆಯ ಸಮರ್ಥನೆಯನ್ನೂ ನಾಶಗೊಳಿಸಿತು. ವಿಶ್ವದ ಕುರಿತು ಯಾರು ಬದಲದ ಅಂತಿಮ ಸ್ವರೂಪದ ಭಾವನೆ ಪಡೆದಿದ್ದರೋ ಅವರು ಡಾರ್ವಿನ್‌ರ ವಿಕಾಸವಾದವನ್ನು ಅಲ್ಲಗಳೆದುದರಲ್ಲಿ ಆಶ್ಚರ್ಯವೇನಿಲ್ಲ. ಈ ಮತಧರ್ಮ ಶಾಸ್ತ್ರಜ್ಞರ ಪ್ರಕಾರ ಮಾನವನು ದೈವಸೃಷ್ಟಿಯ ಅದ್ವಿತೀಯ ಅಂತಿಮ ಹಂತ. ಆದರೆ ಅವನು ಯಶಸ್ವಿಯಾಗಿ ವಿಕಸಿಸಿದ ವಾನರನಲ್ಲದೆ ಬೇರೇನೂ ಅಲ್ಲ ಎಂಬುದು ಅವರಿಗೆ ಇನ್ನೂ ಹೆಚ್ಚು ಆಘಾತ ತಂದೊಡ್ಡಿತು. ಈ ವಿಕಾಸ ಸಿದ್ಧಾಂತವು ಧರ್ಮಶಾಸ್ತ್ರಜ್ಞರ ಸಿದ್ಧಾಂತವನ್ನಷ್ಟೆ ಅಲ್ಲ, ವಿಚಾರವಾದಿ ತತ್ತ್ವಶಾಸ್ತ್ರದ ಚಿರಂತನ ಮೌಲ್ಯಗಳನ್ನೂ ನುಚ್ಚುನೂರು ಮಾಡಿದ್ದಿತು. (ಇತಿಹಾಸದಲ್ಲಿ ವಿಜ್ಞಾನ', ಪೆಲಿಕನ್, ಸಂ. ೨, ಪು. ೫೫೬-೫೫೮).

ವಿಚಾರವಾದಿ ತತ್ತ್ವಶಾಸ್ತವು – ವಿಶೇಷವಾಗಿ ಬ್ರಿಟಿಷ್ ತತ್ತ್ವಶಾಸ್ತ್ರವು – ಡಾರ್ವಿನ್‌ವಾದದ ಈ ಹೊಡೆತದಿಂದ ಹೇಗೆ ಮತ್ತೆ ಚೇತರಿಸಿಕೊಂಡಿತು ಎಂಬುದನ್ನು ಸದ್ಯದಲ್ಲೇ ಕಂಡುಕೊಳ್ಳಲು ಯತ್ನಿಸೋಣ. ಮುಖ್ಯವಾಗಿ ಈ ಉದ್ದೇಶ ಸಾಧನೆಗಾಗಿ ಹೇಗೆ ಬ್ರಿಟಿಷ್ ತತ್ತ್ವಶಾಸ್ತ್ರಜ್ಞರು, ತಾತ್ಕಾಲಿಕವಾಗಿಯಾದರೂ ಸರಿಯೇ ತಮ್ಮದೇ ಮೊಂಡುತನದ ಅನುಭವೇಕವಾದದ ಪರಂಪರೆಯನ್ನು ಬೇಕನ್ ಹಾಗೂ ಲಾಕ್ ಅವರು ಈ ವಾದಕ್ಕೆ ಭವ್ಯ ಅಡಿಪಾಯ ನಿರ್ಮಿಸಿಕೊಟ್ಟಿದ್ದರು – ಬಿಟ್ಟುಕೊಟ್ಟು ಜರ್ಮನಿಯಿಂದ ಸ್ವಯಂಪೂರ್ಣತಾ ಸದ್ಭಾವದ ಅರೆ ಮತಧರ್ಮ ಸೈದ್ಧಾಂತಿಕ ಭಾವನೆಯನ್ನು ಆಮದು ಮಾಡಿಕೊಳ್ಳಬೇಕಾಗಿ ಬಂದಿತೆಂಬುದನ್ನು ಮುಂದೆ ನೋಡೋಣ. ಗ್ರೀನ್, ಬ್ರಾಡ್ಲೀ, ಬೊಸಾಂಕ್ವೆಟ್, ಕೈರ್ಡ್ ಸೋದರರು ಮತ್ತು ವಾಸ್ತವವಾಗಿ ಬಹು ದೀರ್ಘ ಕಾಲದಿಂದ ಬ್ರಿಟಿಷ್ ಕ್ಷೇತ್ರದಲ್ಲಿ ಪ್ರಭಾವಶಾಲಿಗಳಾಗಿದ್ದ ತತ್ತ್ವಶಾಸ್ತ್ರಜ್ಞರ ಒಂದು ಇಡೀ ಪೀಳಿಗೆಯೇ, ಈ ಅರೆ-ಮತಧರ್ಮಶಾಸ್ತ್ರದ ಅತ್ಯಂತ ಖ್ಯಾತ ಬೋಧಕರಾದರು. ಕೊನೆಗೆ ಮೂರ್, ರಸೆಲ್ ಮತ್ತಿತರ ತತ್ತ್ವಜ್ಞಾನಿಗಳು ಇದರಿಂದ ಬೇಸರಗೊಂಡು ಅನುಭವವೇಕವಾದದ ಪರಂಪರೆಗೆ ಹಿಂದಿರುಗಲು ದಾರಿ ಸಿದ್ಧಪಡಿಸಿ ಕೊಡುವವರೆಗೂ ಈ ಪರಿಸ್ಥಿತಿ ಇದ್ದಿತು. ಆದರೆ ಆ ಹೊತ್ತಿಗೆ ಡಾರ್ವಿನ್‌ವಾದದ ಚಂಡಮಾರುತ ಆಗಲೇ ಬೀಸಿದ್ದಿತು. ಫ್ರಾನ್ಸ್‌ನಲ್ಲಿ ಬೆರ್ಗ್‌ಸನ್‌ರು ಡಾರ್ವಿನ್‌ರ ವಿಜ್ಞಾನವನ್ನು ಸೃಜನಾತ್ಮಕ ವಿಕಾಸದ ಅತ್ಯಾಕರ್ಷಕ ಕಾವ್ಯವನ್ನಾಗಿ ಪರಿವರ್ತಿಸುವ ಮಾರ್ಗ ತೋರಿಸಿ ಕೊಟ್ಟಿದ್ದರು. ಇದನ್ನು ಒಪ್ಪಿಕೊಳ್ಳಲು ಒಂದು ಅಗತ್ಯ ಪೂರ್ವೋಪಾಧಿಯೂ ಇದ್ದಿತು. ಅಂತರ್ಬೋಧೆ ಎಂದು

ಕರೆದಂಥ ಊಹಾಪೋಹದ ಮಿಥ್ಯಾತ್ಮಕ ಬೋಧನೆಯ ಪರವಾಗಿ ವಿಚಾರಶೀಲತೆಯನ್ನು ಸಂಪೂರ್ಣವಾಗಿ ಪರಿತ್ಯಜೀವಿಸುವುದೇ ಈ ಪೂರ್ವೋಪಾಧಿಯಾಗಿದ್ದಿತು. ಆದರೆ ತತ್ತ್ವಶಾಸ್ತ್ರೀಯ ಪ್ರತಿಕ್ರಿಯೆ ಕುರಿತು ಹೆಚ್ಚಿನ ಅಂಶಗಳನ್ನು ಮುಂದೆ ಪರಿಶೀಲಿಸೋಣ. ಅದಕ್ಕೆ ಸಾಗಿಹೋಗುವ ಮುನ್ನ ನಾವು ಇತರ ಕೆಲವು ಅಂಶಗಳನ್ನು ಗಮನಿಸಬಹುದು. ನಾವು ಈಗಾಗಲೇ ಒತ್ತಿ ಹೇಳಿರುವಂತೆ ಸ್ವತಃ ಡಾರ್ವಿನ್‌ರ ಸಾಮಾನ್ಯೀಕರಣವು ವೀಕ್ಷಿತ ವಾಸ್ತವಾಂಶಗಳ ಅಪಾರ ಪ್ರಮಾಣದ ಸಂಚಯದಿಂದ ಉದ್ಭವಿಸಿತು. ಹಾಗಾಗಿ, ಅವರ ವೀಕ್ಷಣೆಗಳಲ್ಲಿನ ಕೆಲವು ನಿಜವಾದ ಲೋಪಗಳನ್ನು ಎತ್ತಿ ತೋರಿಸುವ ಮೂಲಕ ಅಥವಾ ಈ ವೀಕ್ಷಿತ ವಾಸ್ತವಾಂಶಗಳಿಂದ ಹೆಚ್ಚು ಮನವೊಪ್ಪುವಂಥ ಪ್ರತಿ-ಸಾಮಾನ್ಯೀಕರಣವನ್ನು ನಿಗಮನ ಮಾಡುವ ಮೂಲಕ, ಡಾರ್ವಿನ್‌ವಾದವನ್ನು ಪರಿಣಾಮಕಾರಿಯಾಗಿ ನಿರಾಕರಿಸುವುದು ಸಾಧ್ಯವಿದ್ದಿತು. ಆದರೆ ಇದು, ಸ್ಪಷ್ಟವಾಗಿಯೇ ಡಾರ್ವಿನರನ್ನು ಪರಿಹಾಸ್ಯ ಮಾಡಲಷ್ಟೆ ಬಯಸಿದ್ದವರ ತಿಳಿವಳಿಕೆ ಗಹನತೆ ಮೀರಿದ್ದಿತು. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಡಾರ್ವಿನ್‌ವಾದದ ಹೆಚ್ಚಿನ ವಿರೋಧಿಗಳು ಸುಲಭವಾಗಿ ಸಾಧಿಸಲು ಬಯಸಿದ ಅತ್ಯುತ್ತಮ ವಿಧಾನವೆಂದರೆ – ಡಾರ್ವಿನ್‌ವಾದದ ಕೆಲವು ವಿಕಟ ಚಿತ್ರಣವನ್ನು ಅಲ್ಲಗಳೆಯುವುದು, ಅಷ್ಟೆ.

ಮಾನವನು ವಾನರನಿಂದ ಹುಟ್ಟಿಬಂದ ಎಂದು ಚಿತ್ರಿಸುವುದು ಡಾರ್ವಿನರ ವಾದದ ಅತ್ಯಂತ ಸುಲಭ ವಿಕಟ ಚಿತ್ರಣವಾಗಿದ್ದಿತು. ಡಾರ್ವಿನ್‌ರ ವಾದವನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯವಾಗಲೀ ಅಥವಾ ತಾಳ್ಮೆಯಾಗಲೀ ಇಲ್ಲದೆಯೇ ಅವರ ವಾದವನ್ನು ಕೇವಲ ನಿರಾಕರಿಸಬಯಸಿದವರೊಂದಿಗೆ ಯಾವುದೇ ರೀತಿಯ ಚರ್ಚೆಯಲ್ಲಿ ತೊಡಗಲು ಡಾರ್ವಿನರೇ ಸಂಕೋಚಿಸಿದ್ದರು. ಆದರೆ ಅವರ ಕೆಲವು ಮಿತ್ರರೂ ಅನುಯಾಯಿಗಳೂ ಅವರ ರಕ್ಷಣೆಗೆ ಮುಂದಾದರು. ಥಾಮಸ್ ಹೆನ್ರಿ ಹಕ್ಸ್ಲೀ ಅಂಥವರೊಬ್ಬರಾಗಿದ್ದರು. ೧೮೬೦ರಲ್ಲಿ, ಅಂದರೆ, 'ಜೀವ ಪ್ರಭೇದಗಳ ಉಗಮ' ಪ್ರಕಟವಾದ ನಂತರದ ವರ್ಷ, ಅವರು ಆಕ್ಸ್‌ಫರ್ಡ್‌ನ ಬಿಷಪ್ ಸಾಮ್ಯುಯೆಲ್ ವಿಲ್ಬರ್‌ಫೋರ್ಸ್‌ರೊಂದಿಗೆ [ಇವರಿಗೆ ಹೇಗೋ 'ಸೋಪಿ (ಪುಸಲಾವಣೆಯ) ಸಾಮ್' ಎಂಬ ಅಡ್ಡ ಹೆಸರಿದ್ದಿತು] ಮುಖ್ಯ ಚರ್ಚೆ ನಡೆಸಿದರು. ಆ ಚರ್ಚೆಯ ಸ್ಥೂಲ ವಿವರ ಹೀಗಿದೆ. ''ಬ್ರಿಟಿಷ್ ಅಸೋಸಿಯೇಷನ್ ಫಾರ್ ಅಡ್ವಾನ್ಸ್‌ಮೆಂಟ್ ಆಫ್ ಸೈನ್ಸ್ (ವಿಜ್ಞಾನ ಮುನ್ನಡೆಯ ಬ್ರಿಟಿಷ್ ಸಂಸ್ಥೆ – ನಮ್ಮ ದಿನದಲ್ಲಿ 'ಬ್ರಿಟಿಷ್ ಎಎಎಸ್ ಎಂದು ಖ್ಯಾತವಾದ ಸಂಸ್ಥೆ) ಆಕ್ಸ್‌ಫರ್ಡ್‌ನಲ್ಲಿ ಸಭೆ ಸೇರಿದ್ದಿತು. ಡಾರ್ವಿನ್‌ವಾದವು ಈ ಸಭೆಯ ಕಾರ್ಯಕ್ರಮ ಪಟ್ಟಿಯಲ್ಲಿಲ್ಲದಿದ್ದರೂ ತುಂಬ ಪ್ರಚಲಿತದಲ್ಲಿದ್ದಿತು. ಹಕ್ಸ್ಲೀಯವರು ಅದನ್ನು ಸಮರ್ಥಿಸಲು ಹೋಗಿದ್ದರು. ಅವರು ಜೂನ್ ೨೯ರಂದು ಅಂದಿನ ಖ್ಯಾತ ಅಂಗರಚನಾ ವಿಜ್ಞಾನಿಯಾಗಿದ್ದ ಸರ್ ರಿಚರ್ಡ್ ಓವೆನ್‌ರನ್ನು ವಿನಮ್ರತೆಯೊಂದಿಗೆ ತರಾಟೆಗೆ ತೆಗೆದುಕೊಂಡರು. ಮಾರನೆಯ ದಿನ ವಿಕಾಸವಾದ-ವಿರೋಧಿ ಶಕ್ತಿಗಳು ಸೋಪಿ ಸಾಮ್‌ರನ್ನು ಹಕ್ಸ್ಲೀಯವರ ವಿರುದ್ಧ ಎತ್ತಿ




ಕಟ್ಟಿದರು. ಸೋಪಿ ಸಾಮ್‌ರು ಆ ಮುನ್ನ ಓವೆನ್‌ರಿಂದ ಗಂಟೆಗಟ್ಟಲೆ ಪಾಠ ಕಲಿತಿದ್ದರು. ಆದರೂ ಈ ಬ್ರಿಟಿಷ್‌ರು ಅಭೇದ್ಯ-ಅಜ್ಞಾನದಿಂದ ಕೂಡಿದ್ದರು. ಓವೆನ್‌ರು ಅಪರಿಹಾರ್ಯವಾಗಿ ತಪ್ಪಿಗೊಳಗಾದರು. ಹೈರಾರ್ಕ್ ಪ್ರಧಾನ ಪಾದ್ರಿಗಳು ಕಲಿಯಲು ದ್ವೇಷಿಸುತ್ತಾರೆ ಎಂಬ ಪಾಠವನ್ನು ಇತಿಹಾಸ ಮತ್ತೊಮ್ಮೆ ಕಲಿಸಲು ಮುಂದಾಗಿದ್ದಿತು. – ಈ ಬಾರಿ ಪರಿಹಾಸ್ಯದೊಂದಿಗೆ,'' (ಡುನ್ಹಾಮ್, ಪು.೪೯).

''ಸೋಪಿಯವರು ಅತ್ಯಂತ ಉಲ್ಲಾಸಯುತರಾಗಿದ್ದರು. ಬುದ್ಧಿ ಚಮತ್ಕಾರದ ಹೊಳಪುಗಳು ಮತ್ತು ವಾಸ್ತವಾಂಶಗಳ ಮಿಥ್ಯಾನಿರೂಪಣೆಗಳು ಅವರ ಬಾಯಿಯಿಂದ ಸಮಾನ ವೇಗದಲ್ಲಿ ಹೊರ ಹೊಮ್ಮುತ್ತಿದ್ದವು. ಅವರ ಮುಂದೆ ಆಸೀನರಾಗಿದ್ದ ಪಾದ್ರಿಗಳು ಮುಸಿಮುಸಿ ನಕ್ಕರು, ಅವರ ಮಾತುಗಳನ್ನು ಆಲಿಸುತ್ತಿದ್ದ ಅಂಗನೆಯರು ಮುಗುಳ್ನಕ್ಕರು. ತಮ್ಮ ಭಾಷಣದ ಉಪಸಂಹಾರದತ್ತ ಸಾಗುತ್ತ ಅವರು ಹಕ್ಸ್ಲೀಯವರ ಕಡೆಗೆ ತಿರುಗಿ ಕೇಳಿದರು: ''ತಾವು ತಮ್ಮನ್ನು ವಾನರ ಸಂಜಾತರೆಂದು ಹೇಳಿಕೊಳ್ಳುವುದು ತಮ್ಮ ಅಜ್ಜ ಅಥವಾ ಅಜ್ಜಿಯ ಮೂಲಕ ತಾವು ಹುಟ್ಟಿದುದರಿಂದಲೇ ಎಂಬುದನ್ನು ವಿಷದಪಡಿಸಬೇಕೆಂದು ಕೇಳಿಕೊಳ್ಳುತ್ತೇನೆ.'' ಆ ಘಳಿಗೆಯಲ್ಲಿ ಹಕ್ಸ್ಲೀಯವರು ವೇದಿಕೆಯ ಮೇಲೆ ತಮ್ಮ ಪಕ್ಕದಲ್ಲಿ ಕುಳಿತಿದ್ದವರ ಕಡೆಗೆ ತಿರುಗಿ ಪಿಸುಮಾತಿನಲ್ಲಿ ಹೇಳಿದರು. ''ದೇವರು ಇವರನ್ನೆಲ್ಲ ನನ್ನ ಕೈಗೆ ಒಪ್ಪಿಸಿಬಿಟ್ಟಿದ್ದಾನೆ !''

''ಅದು ನಿಜಕ್ಕೂ ಹಾಗೆಯೇ ಆಗಿದ್ದಿತು. ಆದರೂ ಇದಕ್ಕೆ ಸಂಬಂಧಿಸಿ ಸೋಪಿಯವರು ದೇವರಿಗೆ ಅವರ ಪರವಾಗಿ ಏನನ್ನು ಮಾಡಲು ಎಷ್ಟು ಮಾತ್ರವು ಬಿಟ್ಟುಕೊಟ್ಟಿರಲಿಲ್ಲ. ಮಾತನಾಡಬೇಕೆಂದು ಆಹ್ವಾನ ಬಂದಾಗ ಹಕ್ಸ್ಲೀಯವರು ಕೆಲವೇ ವಾಕ್ಯಗಳಲ್ಲಿ ಆ ಬಿಷಪ್‌ರ ಅಜ್ಞಾನವನ್ನು ಬಯಲುಮಾಡಿದರು. ಡಾರ್ವಿನ್‌ರ ಸಿದ್ಧಾಂತದ ನಿಜವಾದ ಸಾರವನ್ನು ವಿಶದಗೊಳಿಸಿದರು. ಅನಂತರ ತಮ್ಮ ಭಾಷಣದ ಉಪಸಂಹಾರದತ್ತ ಸಾಗುತ್ತ ಬಿಷಪ್‌ರ ಭಾಷಣದ ಉಪಸಂಹಾರದ ಮಾತುಗಳಿಗೆ ಉತ್ತರವಾಗಿ ಹೇಳಿದರು : ''ನಾನು ವಾನರರನ್ನು ನನ್ನ ಪೂರ್ವಜರನ್ನಾಗಿ ಭಾವಿಸಿಕೊಳ್ಳಲು ಎಷ್ಟು ಮಾತ್ರವೂ ನಾಚುವುದಿಲ್ಲ. ಆದರೆ ತಮ್ಮ ಮಹಾಪ್ರತಿಭೆಯನ್ನು, ಸತ್ಯವನ್ನು ಮರೆಮಾಚಲು ಬಳಸುವಂಥ ವ್ಯಕ್ತಿಯೊಂದಿಗೆ ಸಂಬಂಧ ಪಡೆದಿರಲು ನನಗೆ ನಿಜಕ್ಕೂ ನಾಚಿಕೆಯಾಗುತ್ತದೆ'' (ಡುನ್ಹಾಮ್. ಪು ೪೯-೧೦).

ಮಾನವನು ವಾನರರಿಂದ ಹುಟ್ಟಿದವನು ಎಂಬಂಥ ಡಾರ್ವಿನ್‌ರ ಸಿದ್ಧಾಂತದ ವಿಕಟ ಚಿತ್ರಣವು ಕೆಲವು ವೇಳೆ ದುರಂತ ಛಾಯೆಯನ್ನೂ ಪಡೆದಿದ್ದಿತು. ಡಾರ್ವಿನ್‌ರ ವಿರುದ್ಧ ಎಷ್ಟೇ ಪ್ರಬಲ ಪ್ರತಿರೋಧವಿದ್ದರೂ ಅವರೊಬ್ಬ ಮಹಾನ್ ವಿಜ್ಞಾನಿ ಎಂಬುದನ್ನಂತೂ ಉಪೇಕ್ಷಿಸಲು ಸಾಧ್ಯವಿರಲಿಲ್ಲ. ಹಾಗಾಗಿ ೧೮೭೭ರಲ್ಲಿ, ಕೇಂಬ್ರಿಜ್ ವಿಶ್ವವಿದ್ಯಾಲಯವು ಅವರಿಗೆ ಗೌರವ ಎಲ್.ಎಲ್.ಡಿ. ಪದವಿ ನೀಡಿ ಸನ್ಮಾನಿಸಲು ನಿರ್ಧರಿಸಿತು. ''ಸಾರ್ವಜನಿಕವಾಗಿ ಅಪರೂಪವಾಗಿ ಕಾಣಿಸಿಕೊಳ್ಳುತ್ತಿದ್ದ ಡಾರ್ವಿನ್‌ರು ಈ ಪದವಿ ಪ್ರಧಾನ ಸಮಾರಂಭದಲ್ಲಿ ಹಾಜರಿದ್ದರು. ಆಗ ಅಲ್ಲಿ ಸ್ನಾತಕಪೂರ್ವ ವಿದ್ಯಾರ್ಥಿಗಳು ಸಭಾಂಗಣದಲ್ಲಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಒಂದು ದಾರ ಕಟ್ಟಿ ಅದರಿಂದ ಒಂದು ವಾನರ ಆಕೃತಿಯನ್ನು, ಅದರ ಪಕ್ಕದಲ್ಲೊಂದು ದೊಡ್ಡ ರಿಬ್ಬನ್ ಕಟ್ಟಿದ ಉಂಗುರವನ್ನು ತೂಗುಬಿಟ್ಟಿದ್ದರು. (ಡಾರ್ವಿನ್‌ರ ಪತ್ನಿ ಭಾವಿಸಿದಂತೆ, ಆ ಉಂಗುರವು ಲುಪ್ತಕೊಂಡಿಯನ್ನು ಸಂಕೇತಿಸುತ್ತಿದ್ದಿತು). ಅದನ್ನು ಕಂಡಮೇಲೆ ಡಾರ್ವಿನ್‌ರು ಮರುಕಗೊಂಡು ಅಧಿಕೃತ ಔತಣಕೂಟದಲ್ಲಿ ತಮ್ಮನ್ನು ಪ್ರತಿನಿಧಿಸುವಂತೆ ಹಕ್ಸ್ಲೀಯವರನ್ನು ಕೇಳಿಕೊಂಡು ತಾವೇ ಹೊರನಡೆದು ತಮ್ಮ ಪತ್ನಿಯೊಂದಿಗೆ ಒಂಟಿಯಾಗಿ ಹೊರಗೆ ಭೋಜನ ಮಾಡಿದರು. ''(ಡುನ್ಹಾಮ್. ಪು.೪೧೩).

ಡಾರ್ವಿನ್‌ವಾದವು ಮತಧರ್ಮ ಸಿದ್ಧಾಂತವನ್ನು ನಾಶಗೊಳಿಸುವದಕ್ಕಿಂತ ಇನ್ನೂ ಹೆಚ್ಚಿನ ಪರಿಣಾಮ ಉಂಟುಮಾಡಿತೆಂದು ಕೆಲವು ವೇಳೆ ಹೇಳಲಾಗುತ್ತದೆ. ಅದು ವಿಕ್ಟೋರಿಯನ್ನರ ಮೇಲೆ ಪರಿಣಾಮ ಬೀರಿ ಅವರು ತಮ್ಮ ಸಾಮಾಜಿಕ ಹಾಗೂ ಆರ್ಥಿಕ ಪರಿಸ್ಥಿತಿಗಳನ್ನು ಒಂದು ರೀತಿಯಲ್ಲಿ ನಗ್ನವಾಗಿ ಅರಿತುಕೊಳ್ಳಲು ಸಾಧ್ಯಮಾಡಿಕೊಟ್ಟಿತು. ಬರ್ಟ್ರಾಂಡ್ ರಸೆಲ್‌ರು ತಮ್ಮ ''ಧರ್ಮ ಹಾಗೂ ವಿಜ್ಞಾನ'' ಗ್ರಂಥದಲ್ಲಿ ತಿಳಿಸುತ್ತಾರೆ. ''ಡಾರ್ವಿನ್‌ರ ಸಿದ್ಧಾಂತವು ಸಾರಭೂತವಾಗಿ ಪ್ರಾಣಿ ಹಾಗೂ ಸಸ್ಯ ಜಗತ್ತಿಗೆ ಸ್ವಚ್ಛಂದ ಅರ್ಥಶಾಸ್ತ್ರದ ವಿಸ್ತರಣೆಯಾಗಿದ್ದಿತು, ಮಾಲ್ಥೂಸ್‌ರ ಜನಸಂಖ್ಯಾ ಸಿದ್ಧಾಂತದಿಂದ ಸೂಚಿತವಾಗಿದ್ದಿತು. ಎಲ್ಲ ಜೀವಿಗಳೂ ತಮ್ಮನ್ನೇ ಎಷ್ಟು ಶೀಘ್ರಗತಿಯಲ್ಲಿ ಪುನರ್‌ಸೃಷ್ಟಿಸಿಕೊಳ್ಳುತ್ತವೆಂದರೆ, ಪ್ರತಿಯೊಂದು ಪೀಳಿಗೆಯ ಹೆಚ್ಚಿನ ಭಾಗವು ಸಂತತಿಗಳನ್ನು ಬಿಟ್ಟುಹೋಗುವ ವಯಸ್ಸು ತಲುಪುವ ಮುನ್ನವೇ ಸಾಯಬೇಕಾಗುತ್ತದೆ. ಹಾಗಾಗಿ ಪ್ರತಿಯೊಂದು ಪ್ರಭೇದದ ಒಳಗೂ ಮತ್ತು ವಿಭಿನ್ನ ಪ್ರಭೇದಗಳ ನಡುವಿನಂತೆಯೇ, ತೀವ್ರ ಸ್ಪರ್ಧೆ ಉಂಟಾಗಿರುತ್ತದೆ. ಇದರಲ್ಲಿ ಸೋಲಿನ ದಂಡವೇ ಸಾವು. ಇದರ ಅನುಗಮವೆಂದರೆ ಯಾವುದೇ ಪ್ರಭೇದದ ಕೆಲವು ಸದಸ್ಯರು ಇತರರಿಂದ ಯಾವುದೇ ರೀತಿಯಲ್ಲಿ ಭಿನ್ನವಾಗಿದ್ದು, ಅದರಿಂದ ಹೆಚ್ಚಿನ ಅನುಕೂಲ

ಪಡೆದಿದ್ದಲ್ಲಿ, ಅವರು ತಮ್ಮ ಸಮಕಾಲೀನರ ಕುರಿತಾಗಿದ್ದರೂ ಬರುತ್ತಿರುವ ಸಂಭವ ಹೆಚ್ಚಾಗಿರುತ್ತದೆ.'' (ಪು. ೭೭-೮). ನಮಗೆ ತಿಳಿದಿರುವಂತೆ, ಜರ್ಮನಿಯ ದಿನಗಳಿಂದ ಕಾರ್ಲ್ ಮಾರ್ಕ್ಸ್‌ರ ಅತ್ಯಂತ ನಿಕಟ ಸಹವರ್ತಿಯೂ ಅವರ ಅತ್ಯಂತ ಸಮರ್ಥ ವ್ಯಾಖ್ಯಾನಕಾರರೂ ಆದ ಎಂಗೆಲ್ಸ್‌ರ ಮಾತುಗಳನ್ನು ಕೇಳದೂ ತಿಳಿದು ಪ್ರಸ್ತುತಪಡಿಸಲಾರರು. ಅದಾಗ್ಯೂ, ಎಂಗೆಲ್ಸ್‌ರು ಆ ದಿನಗಳಲ್ಲೇ ತಮ್ಮ 'ನಿಸರ್ಗದ ದ್ವಂದ್ವಾತ್ಮಕತೆ' ಗ್ರಂಥದಲ್ಲಿ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದರೆಂಬುದನ್ನು ಗಮನಿಸುವುದು ಸ್ವಾರಸ್ಯಕರ. ಅರ್ಥಶಾಸ್ತ್ರಜ್ಞರು ಅತ್ಯುನ್ನತ ಚಾರಿತ್ರಿಕ ಸಾಧನೆ ಎಂದು ಹೊಗಳುವಂಥ ಮುಕ್ತಸ್ಪರ್ಧೆಯು, ಅಸ್ತಿತ್ವಕ್ಕಾಗಿ ನಡೆಸುವ ಹೋರಾಟವು, ಪ್ರಾಣಿ ಜಗತ್ತಿನ ಸಹಜ ಸ್ಥಿತಿಯೇ ಆಗಿದೆ – ಎಂದು ಸಾಧಿಸಿ ತೋರಿದಾಗ ಡಾರ್ವಿನ್‌ರು ಮಾನವ ಕುಲಕ್ಕೆ ಸಂಬಂಧಿಸಿ, ವಿಶೇಷವಾಗಿ ತಮ್ಮ ಸಹ - ದೇಶೀಯರಿಗೆ ಸಂಬಂಧಿಸಿ, ಎಂಥ ಕಟು ವಿಡಂಬನೆಯನ್ನು ಬರೆದಿದ್ದರೆಂಬುದನ್ನು ತಿಳಿದಿರಲಿಲ್ಲ'' 'ಪ್ರಾಣಿ ಜಗತ್ತಿನ' ಎಂಬ ಮಾತುಗಳಿಗೆ ಎಂಗೆಲ್ಸ್‌ರೇ ಒತ್ತು ಕೊಟ್ಟಿದ್ದರು. ಇದಕ್ಕೆ ಸಂಬಂಧಿಸಿ ಬರ್ರೋಸ್ ಡುನ್ಹಾಮ್‌ರ ವ್ಯಾಖ್ಯಾನ ಉಲ್ಲೇಖನಾರ್ಹ. ಪ್ರಾಣಿ ಜೀವಶಾಸ್ತ್ರದಿಂದ ಮಾನವ ಸಮಾಜಶಾಸ್ತ್ರಕ್ಕೆ ಮಾಡಿದ ಎಲ್ಲ ಅನುಮಿತಗಳೂ ಅನೂರ್ಜಿತವಾದವು ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಸಾಮಾಜಿಕ ಡಾರ್ವಿನ್‌ವಾದವು (ಡಾರ್ವಿನ್‌ರೇ ಹೀಗೆ ಹೇಳಿದುದಿಲ್ಲ) ಈಗ ಯಾವುದೇ ಪಳೆಯುಳಿಕೆಯಂತೆ ನಿರ್ಜೀವವಾಗಿದೆ. ಆದರೆ, ಸಂಪತ್ತಿನ ಉತ್ತುಂಗ ಶಿಖರ ಹಾಗೂ ಬಡತನದ ಪಾತಾಳಗಳಿಂದ ಕೂಡಿದ, ಸೋತ ಸ್ಪರ್ಧಿಗಳು ದಿನದಿನವೂ ಶಿಖರದಿಂದ ಪಾತಾಳಕ್ಕೆ ಕುಸಿದುಬೀಳುತ್ತಿದ್ದ ಸ್ಪರ್ಧಾತ್ಮಕ ಬಂಡವಾಳವಾದದ ಉಚ್ಛ್ರಾಯ ದಿನಗಳಲ್ಲಿ ವಾಸಿಸುತ್ತಿದ್ದ ವಿಕ್ಟೋರಿಯನ್ನರು ಈಗ ಇದ್ದಕ್ಕಿದ್ದಂತೆ ತಮ್ಮನ್ನು ಆದಿಕಾಲದ ಕಾಡಿನಲ್ಲಿ ವಾಸಿಸುವ ಮೃಗಗಳಂತೆ ಕಂಡುಕೊಂಡರು.'' (ಪು.೪೧೧).

ಹೋಗಲಿ, ಸಮಾಜಶಾಸ್ತ್ರವನ್ನು ಬಿಟ್ಟು ತತ್ತ್ವಶಾಸ್ತ್ರದ ಕಡೆಗೆ ತಿರುಗೋಣ. ನಮ್ಮ ಮುಖ್ಯ ಪ್ರಶ್ನೆ: ಡಾರ್ವಿನ್‌ವಾದವು ಅವರ ದೇಶದಲ್ಲಿನ ತತ್ತ್ವಶಾಸ್ತ್ರೀಯ ಪರಿಸ್ಥಿತಿಯ ಮೇಲೆ ಯಾವ ರೀತಿಯ ಪ್ರಭಾವ ಬೀರಿತು ? ಈ ಪ್ರಶ್ನೆಯನ್ನು ತುಂಬ ವಿವರವಾಗಿ ಪರಿಶೀಲಿಸಲು ದುರದೃಷ್ಟವಶಾತ್ ಇಲ್ಲಿ ಅವಕಾಶವಿಲ್ಲ. ಏಕೆಂದರೆ, ವಾಸ್ತವಾಂಶವೆಂದರೆ, ಗಣನೀಯ ಸಂಖ್ಯೆಯ ತತ್ತ್ವಶಾಸ್ತ್ರಜ್ಞರು ಡಾರ್ವಿನ್‌ವಾದವನ್ನು ಅಲ್ಲಗಳೆಯಲು ಮುಂದಾದರು. ಅವರುಗಳ ಹೆಸರುಗಳ ಪಟ್ಟಿಯೇ ಸುದೀರ್ಘವಾಗುತ್ತದೆ. ಆದರೆ ಅದೃಷ್ಟವಶಾತ್ 'ಬ್ರಿಟಿಷ್ ತತ್ತ್ವಜ್ಞಾನದ ಒಂದು ನೂರು ವರ್ಷಗಳು' ಎಂಬ ರುಡೋಲ್ಫ್ ಮೆಟ್ಜ್ ಅವರ ಆಧಾರಪೂರ್ವಕ ಗ್ರಂಥ ನಮ್ಮ ಮುಂದಿದೆ. ಡಾರ್ವಿನ್‌ರ ನಂತರದ ಅನೇಕಾನೇಕ ತತ್ತ್ವಶಾಸ್ತ್ರಜ್ಞರು ಡಾರ್ವಿನ್‌ವಾದವನ್ನು ಎದುರಿಸಲು ಹೇಗೆ ತಮ್ಮಲ್ಲಿ ಯತ್ನ ಮಾಡಿದರು ಎಂಬುದನ್ನು ಈ ಗ್ರಂಥದಲ್ಲಿ ವಿವರವಾಗಿ ತೋರಿಸಿಕೊಡಲಾಗಿದೆ. ಮೆಟ್ಜ್ ಇಂದಿನ ದೃಷ್ಟಿಕೋನವನ್ನು ಹೀಗೆ ಕ್ರೋಢೀಕರಿಸಿ ತಿಳಿಸುತ್ತಾರೆ. ಡಾರ್ವಿನ್‌ವಾದಕ್ಕೆ ಉಲ್ಲೇಖಿಸಿ ಅವರು ಹೇಳುತ್ತಾರೆ.

''ಅದು ತತ್ತ್ವಶಾಸ್ತ್ರದ ಸಮಸ್ಯೆಗಳ ಬಗೆಗೆ ಆಸಕ್ತಿ ಕೆರಳಿಸಿತು. ಅವುಗಳಿಗೆ ಸಂಬಂಧಿಸಿ ಚರ್ಚೆಯನ್ನು ಕೂಡ ವೃತ್ತಿಪರ ವೃಂದಗಳಿಗೂ ದೂರ, ಆಚೆಗೆ, ಕೊಂಡೊಯ್ದಿತು. ಗುಂಪು - ಕಲಹ ಪ್ರಚೋದಿಸಿತು. ವಿಶೇಷವಾಗಿ ಧರ್ಮಕ್ಕೂ ನೀತಿ ನಿಯಮಗಳಿಗೂ ಮತ್ತು ಅದುವರೆವಿಗೂ ಒಪ್ಪಿಕೊಂಡು ಬಂದಿದ್ದಂಥ ಎಲ್ಲ ಮೌಲ್ಯಗಳಿಗೂ ವಿರೋಧಿಯಾದ ಒಬ್ಬ ಶತ್ರುವನ್ನಷ್ಟೆ ತನ್ನಲ್ಲಿ ಕಾಣಬಲ್ಲವರನ್ನೆಲ್ಲ ತನ್ನ ವಿರುದ್ಧವೇ ಅಣಿನೆರೆಯಿಸಿತು. ಬ್ರಿಟನ್ನಿನಲ್ಲಿ ಅದು ತೀರ ಅವರೂಪವಾಗಿಯಷ್ಟೆ ಅಪರಿಷ್ಕೃತ ವಸ್ತುವಾದ ಸ್ಥಿತಿಗಿಳಿಯಿತು. ಒಟ್ಟಿನಲ್ಲಿ ಅದು ಬ್ರಿಟನ್ನಿನಲ್ಲಿ ಇತರ ದೇಶಗಳಲ್ಲಿ ಉಂಟುಮಾಡಿದುದಕ್ಕಿಂತ ಕಮ್ಮಿ ಪ್ರಮಾಣದಲ್ಲಿ ವಿಧ್ವಂಸಕ ಪರಿಣಾಮ ಉಂಟು ಮಾಡಿತು. ಇದಕ್ಕೆ ಬ್ರಿಟಿಷರ ಸಂಪ್ರದಾಯಶೀಲ ಮನೋಧರ್ಮವಷ್ಟೆ ಕಾರಣವಲ್ಲ. ಇದಕ್ಕೂ ಮಿಗಿಲಾಗಿ ಬ್ರಿಟನ್ನಿನಲ್ಲಿ ಬಹುಶಃ ಬೇರಾವ ಕಡೆಗಳಲ್ಲೂ ಇಲ್ಲದಷ್ಟು ಹೆಚ್ಚಿನ ಗಾಢವಾದ ಹಾಗೂ ಪ್ರಬಲವಾದ ಧಾರ್ಮಿಕ ಪರಂಪರೆ ಇರುವುದು ವಿಶೇಷವಾಗಿ ಕಾರಣವಾಗಿದೆ. ಚರ್ಚು ಈ ಹೊಸ ಸಿದ್ಧಾಂತದ ವಿರುದ್ಧ ಉಗ್ರ ಪ್ರತಿರೋಧ ಎಬ್ಬಿಸಿತು. ಈ ಕದನವು ಹಲವಾರು ದಶಕಗಳ ಕಾಲ ನಡೆಯಿತು. ತತ್ತ್ವಶಾಸ್ತ್ರದ ಶೈಕ್ಷಣಿಕ ವೃಂದಗಳಲ್ಲೂ ಅದಕ್ಕೆ ಅಷ್ಟು ಆದರದ ಸ್ವಾಗತ ಲಭಿಸಲಿಲ್ಲ. ಅದನ್ನು ಹೊರಗಿನದುದನ್ನಾಗಿ ಆದರೂ ಯಾವುದರ ವಿರುದ್ಧ



ತನ್ನದೇ ಆಳತೆಯನ್ನು ಕಂಡುಕೊಳ್ಳಬೇಕಾಗಿದೆಯೋ ಅಂತಹದೆ ಹೊರಗಿನದು ದನ್ನಾಗಿ, ಕಾಣಲಾಯಿತು. ಆದರೆ ಡಾರ್ವಿನ್‌ವಾದದ ಅಲೆಯ ವಿರುದ್ಧ ಹಾಕಿದ ಅತ್ಯಂತ ಪ್ರಬಲ ತಡೆ ಎಂದರೆ ಭಾವನಾವಾದದ ಹೊಸ ಪಂಥ. ಇದು ಡಾರ್ವಿನ್‌ವಾದದ ಅಲೆ ಮೇಲೇರುತ್ತ ಕ್ರಮೇಣ ವಿಶ್ವವಿದ್ಯಾಲಯಗಳಲ್ಲಿ ಪ್ರಮುಖ ಸ್ಥಾನ ಪಡೆದು ಕೊಂಡಂಥ ಸಮಯದಲ್ಲಿ ಹುಟ್ಟಿಕೊಂಡಿತು. ಈ ಭಾವನಾವಾದಿ ಚಳವಳಿಯು ತನ್ನ ಮೊದಲ ಘಟ್ಟದಲ್ಲಿ ಡಾರ್ವಿನ್‌ವಾದದ ಪರಾಭವವನ್ನೇ ತನ್ನ ವಿಶಿಷ್ಟ ಕಾರ್ಯಭಾರವನ್ನಾಗಿ ಕಂಡುಕೊಂಡಿದ್ದಿತು. ನಿಜಕ್ಕೂ ಡಾರ್ವಿನ್‌ರ ಹೊಸ ಪಾಷಂಡವಾದದ ವಿರುದ್ಧ ಹೋರಾಟದಲ್ಲಿ ಧರ್ಮದ ಧ್ಯೇಯಕ್ಕೆ ನೆರವಾಗಲೆಂದಲ್ಲದೆ ಬೇರಾವ ಕಾರಣಕ್ಕೂ ಅಲ್ಲ, ಕ್ಯಾಂಟ್ ಹಾಗೂ ಹೆಗೆಲ್‌ರನ್ನು ಭಾವನಾವಾದಿ ಪಂಥವು ಆಹ್ವಾನಿಸಿದ್ದುದು ಎಂದೇ ಬಹುವೇಳೆ ಕಂಡುಬರುತ್ತದೆ.''

ಜರ್ಮನ್ ಭಾವನಾವಾದವು ಅದರಲ್ಲೂ ವಿಶೇಷವಾಗಿ ಹೆಗೆಲ್‌ರ ಭಾವನಾವಾದವು ಬ್ರಿಟಿಷ್ ತತ್ತ್ವಶಾಸ್ತ್ರದ ಮೇಲೆ ಇದ್ದಕ್ಕಿದಂತೆಯೇ ದಾಳಿ ನಡೆಸಿದುದಕ್ಕೆ ನಾವು ಇದರಲ್ಲಿ ಒಂದು ಉಪಯುಕ್ತ ಸುಳಿವನ್ನು ಕಾಣಬಹುದು. ಬ್ರಾಡ್ಲೇ ಮತ್ತಿತರರಂಥ ಪ್ರಸಿದ್ಧ ಪುರುಷರು ಅದರೊಂದಿಗೆ ಸಂಬಂಧ ಹೊಂದಿದ್ದರೂ ಅದರಲ್ಲಿ ಧರ್ಮಶಾಸ್ತ್ರ ಮತ್ತು ತತ್ತ್ವಶಾಸ್ತ್ರಗಳ ನಡುವೆ ಪ್ರತ್ಯೇಕತಾ ಗಡಿ ಗುರುತಿಸುವುದು ಯಾವತ್ತೂ ಅಷ್ಟು ಸುಲಭವೇನಲ್ಲ. ಬ್ರಿಟಿಷ್ ತತ್ತ್ವಶಾಸ್ತ್ರವು ಹೇಗೆ ಅಂತಿಮವಾಗಿ ತನ್ನನ್ನು ಈ ಅರೆ-ಧಾರ್ಮಿಕ ಹಾಗೂ ಸಾರಭೂತವಾಗಿ ಅಮದಾದ ತತ್ತ್ವಶಾಸ್ತ್ರ ಪ್ರವೃತ್ತಿಯ ಮಾಂತ್ರಿಕಶಕ್ತಿಯಿಂದ ಬಿಡುಗಡೆ ಪಡೆದುಕೊಂಡಿತು ಮತ್ತು ಹೇಗೆ ತನ್ನ ಸ್ವಂತ ನಿರ್ದುಷ್ಟ ಅನುಭವೈಕವಾದಕ್ಕೆ ಹಿಂದಿರುಗಬಯಸಿತು, ಎಂಬುದು ಮತ್ತೊಂದು ಕಥೆಯನ್ನಿ. ಅದು ಬಹುಶಃ ನಮಗೆ ಇಲ್ಲಿ ಸಂಬಂಧಿಸಿದುದಲ್ಲ. ಅದು ಜರುಗಿದ ಹೊತ್ತಿಗೆ ಬ್ರಿಟಿಷ್ ತತ್ತ್ವಶಾಸ್ತ್ರ ಜಗತ್ತು ತನಗೆ ಡಾರ್ವಿನ್‌ವಾದದ ಪಾಷಂಡತನದ ಅಪಾಯ ಇನ್ನೆಷ್ಟು ಮಾತ್ರವೂ ಇಲ್ಲ, ಹಾಗಾಗಿ ಹೆಗೆಲಿಯನ್ ಪದ್ಧತಿಯ ವರ(ಬ್ರಹ್ಮ)ತತ್ತ್ವ ಅಥವಾ ಅಮೂರ್ತ ಚೇತನ ಎಂಬಂಥ ವೈಭವಯುತ ಕಟ್ಟುಕಥೆಯು ತನಗೆ ಇನ್ನೆಷ್ಟು ಮಾತ್ರವೂ ಅವಶ್ಯವಿಲ್ಲ ಎಂದು ಭಾವಿಸಿದ್ದಿರಬಹುದು.

'ಮಾರ್ಕ್ಸ್‌ವಾದದ ಕುರಿತು ಕೆಲವು ಚಿಂತನೆಗಳು' ಎಂಬ ದೇವಿಪ್ರಸಾದ್ ಚಟ್ಟೋಪಾಧ್ಯಾಯರ ಕೃತಿಯಿಂದ ಕೆಲವು ತಿದ್ದುಪಾಟು ಹಾಗೂ ಸೇರ್ಪಡೆಗಳೊಂದಿಗೆ ಪುನರ್‌ಮುದ್ರಿಸಿದುದು ಸಂ: ಜಿ. ರಾಮಕೃಷ್ಣ ಹಾಗೂ ಸಂಜಯ್ ಕೆ ಬಿಸ್ವಾಸ್. ಮಾ-ಲೆ ಪ್ರಕಾಶನ, ಬೆಂಗಳೂರು, ೨೦೦೨ ಪುಟ ೫೭ - ೬೨. ಕೃಪೆ : ಶ್ರೀಮತಿ ಅದಿತಿ ಚಟ್ಟೋಪಾಧ್ಯಾಯ. ಉಪಕಾರಸ್ಮರಣೆ : ಮೊದಲ ಮುದ್ರಿತ ಆವೃತ್ತಿಯಲ್ಲಿ ನಮೂದಿಸದಿದ್ದಂಥ ಎಲ್ಲ ಮೂಲ ಆಕರಗಳನ್ನೂ ಗೊತ್ತುಪಡಿಸಿದುದಕ್ಕಾಗಿ, ಅಮಿತಾವ್ ಭಟ್ಟಾಚಾರ್ಯರಿಗೆ ವಂದನೆಗಳು !


ಮೂಲ : **ದೇವಿಪ್ರಸಾದ್ ಚಟ್ಟೋಪಾಧ್ಯಾಯ**
ಅನುವಾದ : **ಕೆ. ಎಲ್. ಗೋಪಾಲಕೃಷ್ಣ ರಾವ್**
ನಂ. ೨೬೧, ೨ನೇ ಅಡ್ಡರಸ್ತೆ, ಸಿ.ಟಿ. ಬೆಡ್, ತ್ಯಾಗರಾಜನಗರ
ಬೆಂಗಳೂರು - ೫೬೦ ೦೨೮

# ಗತ ಹಾಗೂ ವರ್ತಮಾನ: ಸಂಬಂಧಗಳ ಮರುವ್ಯಾಖ್ಯಾನ

**ಡಾ|| ಕೆ. ಮೋಹನ್ ಕೃಷ್ಣ ರೈ**

ಚರಿತ್ರೆಯಲ್ಲಿ ಗತ ಹಾಗೂ ವರ್ತಮಾನಗಳು ಸೈದ್ಧಾಂತಿಕ ನೆಲೆಯಲ್ಲಿ ಒಂದು ಇನ್ನೊಂದನ್ನು ಪ್ರಭಾವಿಸಿಕೊಂಡೇ ಬಂದಿವೆ. ಇಲ್ಲಿ ಸೈದ್ಧಾಂತಿಕತೆಯೆಂದರೆ ಅದು ಲೌಕಿಕ ಸ್ವರೂಪದ್ದಾಗಿರಬಹುದು ಅಥವಾ ಅಲೌಕಿಕ ಸ್ವರೂಪದ್ದಾಗಿರಬಹುದು. ಆದರೂ ಅದು ವರ್ತಮಾನವನ್ನು ಗಟ್ಟಿಗೊಳಿಸುವ ನಿಟ್ಟಿನಲ್ಲಿ ರೂಪುಗೊಂಡಿರುತ್ತದೆ. ಚರಿತ್ರೆಯುದ್ದಕ್ಕೂ ಅಧಿಕಾರ ಹಾಗೂ ಸವಲತ್ತುಗಳನ್ನು ಅನುಭವಿಸಿಕೊಂಡುಬಂದ ಜನಸಮುದಾಯಗಳು 'ಆಧುನಿಕತೆ'ಯ ಸಂದರ್ಭದಲ್ಲಿ ವರ್ತಮಾನವನ್ನೇ ಕಾಣದ ಜನಸಮುದಾಯಗಳಿಂದ ಸ್ಪರ್ಧೆ ಹಾಗೂ ವಿರೋಧವನ್ನು ಎದುರಿಸಿದಾಗ ಹೊಸ ಬಗೆಯ ಅಸ್ತಿತ್ವಕ್ಕಾಗಿ ಕಾರ್ಯತಂತ್ರ ರೂಪಿಸ ತೊಡಗಿದವು. ಸಂಪ್ರದಾಯದ ಚೌಕಟ್ಟಿನಲ್ಲಿದ್ದುಕೊಂಡೇ ಬೇಕಾದ ವಿಚಾರಗಳನ್ನು ಮಾತ್ರ ಆಯ್ದು ತಮ್ಮ ವರ್ತಮಾನದ ಅವಶ್ಯಕತೆಗಳಿಗನುಗುಣವಾಗಿ ಚರಿತ್ರೆಯನ್ನು ರಚಿಸಿಕೊಂಡವು. ಈ ರೀತಿ ನಿರ್ಮಾಣಗೊಂಡ ಚರಿತ್ರೆ ಏಕಮುಖಿಯಾಗಿದ್ದು, ಬಹುತ್ವದ ನೆಲೆಯಲ್ಲಿ ರೂಪುಗೊಂಡ ಸಮಾಜವನ್ನು ಪ್ರತಿನಿಧಿಸುವಂತಿರಲಿಲ್ಲ. ಆದರೆ, ಇದು ವರ್ತಮಾನವನ್ನು ಸಮಸ್ಯಾತ್ಮಕವಾಗಿ ಮಾಡುವಲ್ಲಿ ಹಾಗೂ ಮಾನವನ ಬದುಕು ವಿವಾದಗಳಲ್ಲಿ ಸಿಲುಕುವಂತೆ ಮಾಡಿತು.

ಚರಿತ್ರೆ ಯಾವತ್ತೂ ಸಮಸ್ಯಾತ್ಮಕವಾಗಿ ಕಂಡುಬರುವುದು ಅದರ ವರ್ತಮಾನದಲ್ಲಿ. ವರ್ತಮಾನದ ಅಜೆಂಡಾಗಳು ಗತವನ್ನು ಅಗತ್ಯಕ್ಕಿಂತ ಹೆಚ್ಚಾಗಿ ಬಳಸುವುದರೊಂದಿಗೆ ಚರಿತ್ರೆಯನ್ನೇ ವಿವಾದಾತ್ಮಕವನ್ನಾಗಿ ಮಾಡುತ್ತಿರುತ್ತವೆ. ಇದಕ್ಕೆ ಉತ್ತಮ ಉದಾಹರಣೆಯೆಂದರೆ ರಾಮಜನ್ಮಭೂಮಿ ಹಾಗೂ ಬಾಬರಿ ಮಸೀದಿ ವಿಚಾರ. ಮಂದಿರ ಹಾಗೂ ಮಸೀದಿಗಳು ಭಾರತದ ಚರಿತ್ರೆಗೆ ಹೊಸದೇನಲ್ಲ. ಇಲ್ಲಿರುವ ಪ್ರಶ್ನೆಯೆಂದರೆ ಅವು ಯಾವ ಸಂದರ್ಭದಲ್ಲಿ ವಿವಾದದ ವಸ್ತುಗಳಾಗುತ್ತವೆ ಎನ್ನುವುದು. ಬಾಬರಿ ಮಸೀದಿ ಧ್ವಂಸಗೊಳ್ಳುವವರೆಗೆ ಅದೊಂದು ಭಾರತದ ಬಲುದೊಡ್ಡ ಸಮಸ್ಯೆಯಾಗಿ ಕಾಡಿರಲಿಲ್ಲ. ಪ್ರಾಚೀನ ಭಾರತದ ಸುವರ್ಣಯುಗ ಮಧ್ಯಕಾಲೀನ ಸಂದರ್ಭದಲ್ಲಿ ನಾಶಗೊಂಡಿತು ಎನ್ನುವ ಸಾಮ್ರಾಜ್ಯಶಾಹಿಗಳ ವಾದ ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಯಥಾವತ್ತಾಗಿ ಮರುಕಳಿಸಿತು. ಧಾರ್ಮಿಕ ನೆಲೆಯ ಧರ್ಮ-ಅಧರ್ಮದ ಪ್ರಶ್ನೆಗಳು ಚರಿತ್ರೆಯನ್ನು ಆವರಿಸಿ, ನಾಯಕ - ಖಳನಾಯಕರ ಕಥನ ಅಂತಿಮವಾಗಿ ಜನರ ಬದುಕಿನ ವಿಚಾರಗಳು ಮೂಲೆಗುಂಪಾದವು. ಮಂದಿರ ಮಸೀದಿ ವಿಚಾರಗಳು ಬಹುತ್ವದ ನೆಲೆಯಲ್ಲಿ ರೂಪುಗೊಂಡ ಭಾರತದ ಜ್ವಲಂತ ಸಮಸ್ಯೆಗಳಲ್ಲ. ಆದರೆ ಅದನ್ನು ಭಾರತದ ಜ್ವಲಂತ ಸಮಸ್ಯೆಯನ್ನಾಗಿ ಬಿಂಬಿಸಲಾಯಿತು. 'ಹಿಂದೂ'ಗಳೆಲ್ಲರೂ ಇದನ್ನು ಸ್ವಾಭಿಮಾನದ ಪ್ರಶ್ನೆಯನ್ನಾಗಿ ಸ್ವೀಕರಿಸಬೇಕು ಎನ್ನುವ ಫರ್ಮಾನ್‌ಅನ್ನು ಹೊರಡಿಸಲಾಯಿತು. ಆದರೆ 'ಹಿಂದೂ'ಗಳೊಳಗಿನ ಸಾಮಾಜಿಕ ಶ್ರೇಣೀಕರಣ, ಜಾತಿ ಪ್ರಶ್ನೆ, ಭೂಮಿ ಪ್ರಶ್ನೆ, ಆರ್ಥಿಕ ಅಸಮಾನತೆ ಮುಂತಾದವು ಆದ್ಯತೆಯ ವಿಚಾರಗಳಾಗಿ ಕಂಡುಬರಲಿಲ್ಲ.

ಆಧುನಿಕತೆಯ ಸೌಲಭ್ಯಗಳನ್ನು ಪಡೆಯುವ ಹಾಗೂ ಆಧುನಿಕತೆಗೆ ಸಂಪ್ರದಾಯದ ಲೇಪವನ್ನು ಹಚ್ಚುವ ಒಂದು ಬಗೆಯ ರಾಜಕೀಯ ವ್ಯವಸ್ಥಿತವಾಗಿ ನಡೆಯಲಾರಂಭಿಸಿತು. ಇಲ್ಲಿ ನಾಗರಿಕತೆ, ಸಂಸ್ಕೃತಿ, ಧರ್ಮ ಮುಂತಾದ ಮಾನವನ ಬದುಕನ್ನು ರೂಪಿಸುವ ಹಾಗೂ ಛಿದ್ರಗೊಳಿಸುವ ವಿಚಾರಗಳು ವ್ಯಾಪಕವಾಗಿ ಬಳಕೆಗೊಂಡು, ಗತದ ಹುಡುಕಾಟ ಅವ್ಯಾಹತವಾಗಿ ಮುಂದುವರಿಯಿತು.

ಚರಿತ್ರೆಯ ಪ್ರತಿಯೊಂದು ಅವಧಿಯಲ್ಲಿಯೂ ತಮ್ಮ ವರ್ತಮಾನವನ್ನು ಶ್ರೀಮಂತವನ್ನಾಗಿರಿಸಿದ ಜನವರ್ಗಗಳು ಕೈಗಾರಿಕಾ ಮಾದರಿಯ ಆಧುನಿಕತೆಗೆ ಮುಖಾಮುಖಿಯಾಗುವ ಸಂದರ್ಭ ಎದುರಾದಾಗಲೂ ತಮ್ಮ ಸ್ಥಾನಮಾನಕ್ಕೆ ಧಕ್ಕೆಯಾಗದಂತೆ ನೋಡಿಕೊಂಡವು. ಕೃಷಿ ಹಾಗೂ ನಗರ ಆರ್ಥಿಕತೆಗಳೆರಡರಲ್ಲೂ ಮುಂಚೂಣಿಯಲ್ಲಿದ್ದ ಈ ವರ್ಗಗಳು ಜ್ಞಾನ ಆರ್ಥಿಕತೆಯ ಮೇಲೂ ಹಿಡಿತವನ್ನು ಸಾಧಿಸಿದವು. ಈ ಪರಿವರ್ತನೆಗಳು ಸಾಮಾಜಿಕ ಶ್ರೇಣೀಕರಣವನ್ನು ನವೀಕರಿಸಿ, ಅದೇ ಸಂದರ್ಭದಲ್ಲಿ ಯಥಾಸ್ಥಿತಿಯನ್ನು ಕಾಯ್ದುಕೊಂಡು ಸಮಾಜದ ಮಧ್ಯಮ ವರ್ಗ ಹಾಗೂ ಕೆಳವರ್ಗಗಳ ಬದುಕಿನಲ್ಲಿ ಗೊಂದಲಗಳು ಏರ್ಪಡುವಂತೆ ಮಾಡಿದವು. ಈ ಗೊಂದಲಗಳ ನಡುವೆಯೇ ಸಮಾಜದ ಕೆಳವರ್ಗಗಳೂ ತಮ್ಮ ಅಸ್ತಿತ್ವದ ನೆಲೆಯಲ್ಲಿ ಜಾಗೃತಗೊಂಡವು. ಆದರೆ ಅಸ್ತಿತ್ವದ ಬೇರುಗಳು ಚರಿತ್ರೆಯುದ್ದಕ್ಕೂ ಪಸರಿಸಿಕೊಂಡಿರುವುದರಿಂದ ಅವುಗಳನ್ನು ಹುಡುಕುವುದು ಸವಾಲಾಗಿ ಪರಿಣಮಿಸಿತು. ಏಕೆಂದರೆ ಅಸ್ತಿತ್ವದ ನೆಲೆಗಳು ಸ್ವಂತಿಕೆಯ ಆಧಾರದಲ್ಲಿ ರೂಪುಗೊಂಡಿರಲಿಲ್ಲ. ಅವು ದಾಸ್ಯರೂಪಿ ಅಥವಾ ಅಧೀನತೆಯ ಸ್ವರೂಪದಲ್ಲಿ ಸಮಾಜದಲ್ಲಿ ಇದ್ದೂ ಇಲ್ಲದಂತೆ ಉಸಿರಾಡುತ್ತಿದ್ದವು. ಸಮಾಜದಲ್ಲಿ ಮುಖ್ಯವಾಹಿನಿಯಲ್ಲಿರುವ ಶಕ್ತಿಗಳು ಚರಿತ್ರೆಯಿಂದ ತಮಗೆ

> **ಇಂದು ಗತ ಹಾಗೂ ವರ್ತಮಾನಗಳ ನಡುವಿನ ಗೆರೆ ಮಾಸಿಹೋಗುತ್ತಿದ್ದು, ಗತ ವರ್ತಮಾನವಾಗಿಯೂ ಹಾಗೂ ವರ್ತಮಾನ ಗತವಾಗಿಯೂ ಪರಿವರ್ತನೆಗೊಳ್ಳುತ್ತಿರುವುದನ್ನು ಕಾಣಬಹುದಾಗಿದೆ. ಆದರೆ ಇದು ಕೇವಲ ಧಾರ್ಮಿಕ ರಾಜಕಾರಣದ ನೆಲೆಯಲ್ಲಷ್ಟೇ ನಡೆಯುತ್ತಿರುವುದು ಆತಂಕದ ವಿಷಯ. ಕೃಷಿ, ಕೈಗಾರಿಕೆ, ತಂತ್ರಜ್ಞಾನ, ವಾಸ್ತುಶಿಲ್ಪ ಮುಂತಾದ ಕ್ಷೇತ್ರಗಳ ನಿಟ್ಟಿನಲ್ಲಿ ಗತ ಹಾಗೂ ವರ್ತಮಾನ ಮುಖಾಮುಖಿಯಾಗಿದ್ದರೆ ಅದು ದೇಶದ ಅಭಿವೃದ್ಧಿಗೆ ಪೂರಕವಾಗಿರುತ್ತಿತ್ತು. ಆದರೆ ದೇಶದ ಅಧಿಕಾರ ಚುಕ್ಕಾಣಿ ಹಿಡಿಯಲು ಹಾಗೂ ಸಾಮಾಜಿಕ ರಚನೆಯನ್ನು ಯಥಾಸ್ಥಿತಿಯಲ್ಲಿ ಮುಂದುವರಿಸಲು ಜಾತಿ ಹಾಗೂ ಧರ್ಮಕೇಂದ್ರಿತ ರಾಜಕಾರಣ ಅತ್ಯಂತ ಸುಲಭ ಸಾಧನವಾಗಿರುವುದರಿಂದ ಜನಕೇಂದ್ರಿತ ವಿಚಾರಗಳ ಕಡೆಗೆ ಒಲವು ಕಂಡುಬರಲು ಸಾಧ್ಯವಿಲ್ಲ.**

ಗತದ ತಪ್ಪುಗಳನ್ನು ಸರಿಪಡಿಸುವುದು ಕೂಡ ವರ್ತಮಾನದ ಕೆಲಸ ಎಂಬ ಧೋರಣೆ ಅಪಾಯಕಾರಿಯಾದ್ದು. ಇದರಿಂದ ನಾವು ಇಂದು ಬದುಕುತ್ತಿರುವ ನಮ್ಮ ವರ್ತಮಾನ ಆದ್ಯತೆಯ ವಿಚಾರವಾಗದೆ ನಮಗೆ ಇಂದು ಗತವಾಗಿ ಕಂಡುಬರುವ ಶ್ರೀರಾಮ, ಬಾಬರ್, ಔರಂಗಜೇಬ, ಶಿವಾಜಿ, ಟಿಪ್ಪು ಮುಂತಾದವರ ವರ್ತಮಾನ (ಅವರು ಬದುಕಿದ್ದ ಸಂದರ್ಭದ ಚಿತ್ರಣ) ಆದ್ಯತೆಯ ವಿಚಾರವಾಗಿ ಹೊರಹೊಮ್ಮುತ್ತದೆ. ಇದರರ್ಥ ಚರಿತ್ರೆಯಲ್ಲಿ ತಪ್ಪುಗಳು ನಡೆದಿಲ್ಲ ಎಂದಲ್ಲ. ದೇವಾಲಯ, ಕೋಟೆ, ಅರಮನೆ ಮುಂತಾದ ಸ್ಮಾರಕಗಳನ್ನು ಕಟ್ಟುವ ಹಾಗೂ ಕೆಡವುವ ಕಾರ್ಯ ಚರಿತ್ರೆಯಲ್ಲಿ ನಿರಂತರವಾಗಿ ನಡೆದುಕೊಂಡೇ ಬಂದಿದೆ. ಇದು ರಾಜಪ್ರಭುತ್ವದ ಸಂದರ್ಭದ ಸಾಮಾನ್ಯ ಲಕ್ಷಣ. ಆದರೆ ಇದು ಪ್ರಜಾಪ್ರಭುತ್ವದ ಲಕ್ಷಣವಾಗಿಯೂ ಮುಂದುವರಿಯುವುದು ದೇಶದ ಅಭಿವೃದ್ಧಿ ಹಾಗೂ ಶಾಂತಿ-ಸುವ್ಯವಸ್ಥೆಗೆ ಕಂಟಕಪ್ರಾಯವಾದ ಬೆಳವಣಿಗೆ. ವರ್ತಮಾನ ಗತದ ಅನುಭವಗಳ ಮೂಲಕ ಬಲಿಷ್ಠಗೊಳ್ಳಬೇಕೇ ಹೊರತು ಛಿದ್ರಗೊಳ್ಳಬಾರದು. ಗತವು ಮೂಡಿಬರುವುದು

ವರ್ತಮಾನದಲ್ಲಿ ಹಾಗೂ ವರ್ತಮಾನ ರೂಪುತಳೆಯುವುದು ಗತದ ಅನುಭವಗಳಿಂದ [illegible] ರೀತಿಯ ರಾಜಕಾರಣಗಳಿಗಾಗಲಿ ಬಲಿಯಾಗದೆ ಚರಿತ್ರೆಕಾರ [illegible] ಚರಿತ್ರೆಗೆ [illegible] ಸ್ವತಂತ್ರವಾಗಿ [illegible] ಹಾಗೂ ಇದು ನಿರ್ಧಾರ ಮಾಡುವುದು ಕೂಡ ವರ್ತಮಾನವನ್ನು.

ವರ್ತಮಾನದ [illegible] ಮಾನವನ ವಿಕಾಸದ ನೆಲೆಯನ್ನು [illegible] ಹಂತದವರೆಗೆ ಸಾಗುತ್ತವೆ. ಮಾನವ ಇಂದು ಇರುವ ಹಾಗೆ ಗತದಲ್ಲಿ ಇರಲಿಲ್ಲ. ಹಂತ ಹಂತವಾಗಿ ತನ್ನ ಜೀವನಮಟ್ಟವನ್ನು ಸುಧಾರಿಸಿಕೊಂಡ. ಇವನ್ನು ಒಪ್ಪಿಕೊಳ್ಳಲು ಕೆಲವು ಜಾತಿ/ವರ್ಗಗಳು ಸಿದ್ಧವಿಲ್ಲ. ಉದಾಹರಣೆಗೆ, ಪ್ರಾಚೀನ ಭಾರತದಲ್ಲಿ ಹಸುವಿನ ಮಾಂಸವನ್ನು ಅತಿಥಿಗಳಿಗೆ ವಿಶೇಷವಾಗಿ ಅಡಿಗೆ ಮಾಡಿ ಬಡಿಸಲಾಗುತ್ತಿತ್ತು ಎನ್ನುವ ವಿಚಾರ. ಡಿ.ಎನ್.ಝಾ, ಡಿ.ಡಿ.ಕೊಸಾಂಬಿ ಮುಂತಾದ ಚರಿತ್ರೆಕಾರರು ವೇದಕಾಲದ ಬ್ರಾಹ್ಮಣರು ಗೋಮಾಂಸ ತಿನ್ನುತ್ತಿದ್ದರು ಎನ್ನುವುದನ್ನು ಆಧಾರಸಮೇತ ತಮ್ಮ ಕೃತಿಗಳಲ್ಲಿ ವಿವರಿಸಿದ್ದಾರೆ. ಹಸುವನ್ನು ಪವಿತ್ರ ಪ್ರಾಣಿಯನ್ನಾಗಿ ನೋಡುವ ಇಂದಿನ ಕೆಲವು ಜಾತಿ/ವರ್ಗಗಳಿಗೆ ಇದು ಸಹಿಸಲ ಸಾಧ್ಯವಾದ ವಿಷಯವಾಗಿದ್ದು, ಚರಿತ್ರೆ ಪುಸ್ತಕಗಳಿಂದ ಈ ವಿವರಣೆಗಳನ್ನು, ತೆಗೆಸುವ ಹಾಗೂ ಈ ಬಗೆಯ ವಿವರಣೆಗಳನ್ನು, ಪುಸ್ತಕಗಳನ್ನು ಬಹಿಷ್ಕರಿಸುವ ಪ್ರಯತ್ನಮಾಡಲಾಯಿತು. ಈಗಿರುವ ನಂಬಿಕೆ, ಆಚರಣೆಗಳು ವೇದಕಾಲದಿಂದಲೇ ಇದ್ದಂಥವು ಎನ್ನುವ ಪ್ರಾಚೀನತೆಯನ್ನು ಸ್ಥಾಪಿಸುವ ಉದ್ದೇಶ ಈ ಪ್ರಯತ್ನದಲ್ಲಿ ಅಡಕವಾಗಿದೆ. ದೇಶದ ಚರಿತ್ರೆಯನ್ನು ತಮಗೆ ಬೇಕಾದಂತೆ ಬದಲಿಸುವ ಈ ಬಗೆಯ ಪ್ರಯತ್ನಗಳು ಸಾಕಷ್ಟು ನಡೆದಿವೆ. ವೈದಿಕ ಸಂಸ್ಕೃತಿಯ ಪ್ರಾಚೀನತೆಯನ್ನು ಹಿಗ್ಗಿಸುವ ಪಠ್ಯಗಳು ರಚನೆಗೊಂಡವು. ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಪರಿಷತ್ತಿನ (ಎನ್.ಸಿ.ಇ.ಆರ್.ಟಿ.) ಶಾಲಾ ಪಠ್ಯಪುಸ್ತಕಗಳಲ್ಲಿ ಚರಿತ್ರೆಯನ್ನು ತಿರುಚಿರುವ ಈ ಬಗೆಯ ಹೊಸ ವಿಷಯಗಳು ಸಾಕಷ್ಟು ಬರುತ್ತವೆ. ಶಾಲಾ ವಿದ್ಯಾಭ್ಯಾಸಕ್ಕೆ ಸಂಬಂಧಿಸಿದಂತೆ ಪ್ರಮುಖ ತೀರ್ಮಾನಗಳನ್ನು ತೆಗೆದುಕೊಳ್ಳುವ ಈ ಪರಿಷತ್ತು ವಿವಾದಕ್ಕೀಡಾಗಿದ್ದು ಎನ್‌ಡಿಎ ಸರ್ಕಾರ ಕೇಂದ್ರದಲ್ಲಿದ್ದಾಗ. ಅದು ಹೊಸದಾಗಿ ಹೊರತಂದಿರುವ ೬ನೇ ಮತ್ತು ೯ನೇ ತರಗತಿಗಳ ಸಮಾಜ ವಿಜ್ಞಾನ ಪುಸ್ತಕಗಳಲ್ಲಿ ದೇಶದ ಚರಿತ್ರೆಯನ್ನು ತಿರುಚುವ ಪ್ರಯತ್ನ ಮಾಡಿರುವುದು ಈಗಾಗಲೆ ಸಾಕಷ್ಟು ಚರ್ಚೆಗೆ ಎಡಮಾಡಿಕೊಟ್ಟಿರುವ ವಿಚಾರ. ಇಲ್ಲಿ ಮುಖ್ಯವಾಗಿ ಚರ್ಚಿಸ ಬೇಕಾಗಿರುವ ವಿಚಾರವೆಂದರೆ ವರ್ತಮಾನವನ್ನು ಸಮರ್ಥಿಸಿಕೊಳ್ಳುವುದಕ್ಕ ಗತ ಯಾವ ರೀತಿ ಬಳಕೆಯಾಗುತ್ತದೆ ಎನ್ನುವುದು. ಎಡಪಂಥೀಯರು ಬರೆದ ಚರಿತ್ರೆಯನ್ನು ಒಪ್ಪದ ಬಲಪಂಥೀಯರು ತಮಗೆ ಬೇಕಾದಂತೆ ಚರಿತ್ರೆಯನ್ನು ತಿರುಚಿ ರಚಿಸಿಕೊಂಡರು. ಇವರಿಗೆ ಸ್ವಪ್ರತಿಷ್ಠೆ ಹಾಗೂ ಜಾತಿ/ಧರ್ಮದ ಅಭಿಮಾನ ಮುಖ್ಯವಾಯಿತೇ ಹೊರತು ದೇಶದ ಅದರಲ್ಲೂ ಮಕ್ಕಳ ಭವಿಷ್ಯವಲ್ಲ. ಹೀಗೆ ವರ್ತಮಾನದ ರಾಜಕಾರಣ ತನ್ನ ಉಳಿವಿಗಾಗಿ ದೇಶದ ಚರಿತ್ರೆಯನ್ನೇ ತಿರುಚಿರುವುದು ಒಂದು ವಿಪರ್ಯಾಸ.

ಇಂದು ಗತ ಹಾಗೂ ವರ್ತಮಾನಗಳ ನಡುವಿನ ಗೆರೆ ಮಾಸಿ ಹೋಗುತ್ತಿದ್ದು, ಗತ ವರ್ತಮಾನವಾಗಿಯೂ ಹಾಗೂ ವರ್ತಮಾನ ಗತವಾಗಿಯೂ ಪರಿವರ್ತನೆಗೊಳ್ಳುತ್ತಿರುವುದನ್ನು ಕಾಣಬಹುದಾಗಿದೆ. ಆದರೆ ಇದು ಕೇವಲ ಧಾರ್ಮಿಕ ರಾಜಕಾರಣದ ನೆಲೆಯಲ್ಲಷ್ಟೇ ನಡೆಯುತ್ತಿರುವುದು ಆತಂಕದ ವಿಷಯ. ಕೃಷಿ, ಕೈಗಾರಿಕೆ, ತಂತ್ರಜ್ಞಾನ, ವಾಸ್ತುಶಿಲ್ಪ ಮುಂತಾದ ಕ್ಷೇತ್ರಗಳ ನಿಟ್ಟಿನಲ್ಲಿ ಗತ ಹಾಗೂ ವರ್ತಮಾನ ಮುಖಾಮುಖಿಯಾಗಿದ್ದರೆ ಅದು ದೇಶದ ಅಭಿವೃದ್ಧಿಗೆ ಪೂರಕವಾಗಿರುತ್ತಿತ್ತು. ಆದರೆ ದೇಶದ ಅಧಿಕಾರ ಚುಕ್ಕಾಣಿ ಹಿಡಿಯಲು ಹಾಗೂ ಸಾಮಾಜಿಕ ರಚನೆಯನ್ನು ಯಥಾಸ್ಥಿತಿಯಲ್ಲಿ ಮುಂದುವರಿಸಲು ಜಾತಿ ಹಾಗೂ ಧರ್ಮಕೇಂದ್ರಿತ ರಾಜಕಾರಣ ಅತ್ಯಂತ ಸುಲಭ ಸಾಧನವಾಗಿರುವುದರಿಂದ ಜನಕೇಂದ್ರಿತ ವಿಚಾರಗಳ ಕಡೆಗೆ ಒಲವು ಕಂಡುಬರಲು ಸಾಧ್ಯವಿಲ್ಲ. ಸರ್ಕಾರಗಳು ಬದಲಾಗುತ್ತಿದ್ದಂತೆ ಅವುಗಳ ಧೋರಣೆಗಳು ಬದಲಾಗುತ್ತಿರುತ್ತವೆ. ಹಳೆಯ ವಿಚಾರಗಳು ಪುನರಾವರ್ತನೆಗೊಳ್ಳುವುದನ್ನು ಬಿಟ್ಟರೆ ಅಥವಾ ವಾದ - ಪ್ರತಿವಾದ - ವಿವಾದಗಳಿಗಷ್ಟೆ ತಮ್ಮ ಅಜೆಂಡಾಗಳನ್ನು ಸೀಮಿತಗೊಳಿಸುವುದನ್ನು ಬಿಟ್ಟರೆ ಹೊಸ ವಿಚಾರಗಳು ಅವುಗಳಲ್ಲಿ ಸೇರ್ಪಡೆಗೊಂಡಿರುವುದಿಲ್ಲ. ಹಚ್ಚೆಂದರೆ, ಅವು ತಮ್ಮಲ್ಲಿರುವ ಗೊಂದಲಗಳನ್ನು ಚರಿತ್ರೆಯ ಮೇಲೆ ಹೇರಿ ಚರಿತ್ರೆಯನ್ನು ಗೊಂದಲಕ್ಕೀಡುಮಾಡಬಹುದು. ಚರಿತ್ರೆ ವರ್ತಮಾನದಲ್ಲಿ ವಿವಾದಾತ್ಮಕವಾಗಿ ಕಂಡುಬರುವುದು ಈ ಕಾರಣದಿಂದಾಗಿಯೆ.

ಗತ ಹಾಗೂ ವರ್ತಮಾನಗಳನ್ನು ಸರಿಯಾದ ರೀತಿಯಲ್ಲಿ ಅರ್ಥೈಸಿಕೊಂಡರೆ ಅವೆರಡೂ ಬೇರೆಯಾಗಿ ಕಂಡುಬರುವುದಿಲ್ಲ. ಅವು ಒಂದು ಇನ್ನೊಂದಕ್ಕೆ ಪೂರಕವಾಗಿರುವ ಹಾಗೂ ಒಂದು ಇನ್ನೊಂದನ್ನು ಪ್ರಭಾವಿಸುವ ಅಂಶಗಳೇ ಆಗಿವೆ. ಚರಿತ್ರೆಯಲ್ಲಿ ಗತ ಹಾಗೂ ವರ್ತಮಾನಗಳನ್ನು ಕಾಲವಿಂಗಡನೆಯ ನೆಲೆಯಲ್ಲಿ ನೋಡಲಾಗಿದೆ. ಚರಿತ್ರೆಯ ನಿರಂತರತೆಯನ್ನು ಒಡೆದು, ಬೇರೆ ಬೇರೆ ಅವಧಿಗಳನ್ನಾಗಿ ವಿಂಗಡಿಸಿ ತಮ್ಮ ಅವಧಿಯನ್ನು 'ಆಧುನಿಕ' ಎಂಬುದಾಗಿ ವ್ಯಾಖ್ಯಾನಿಸಿರುವುದು ಪಾಶ್ಚಿಮಾತ್ಯ ಗ್ರಹಿಕೆ. ಬ್ರಿಟಿಷ್ ಸರ್ಕಾರವನ್ನು ಸ್ಥಿರಗೊಳಿಸುವುದು ಈ ವಿಂಗಡನೆಯ ಹಿಂದಿನ ಉದ್ದೇಶವಾಗಿತ್ತು. ಆದರೆ ಗತವನ್ನು ಕಾಲವಿಂಗಡನೆಯ ನೆಲೆಯಲ್ಲೇ ನೋಡಬೇಕಾಗಿಲ್ಲ. ಗತ ಎನ್ನುವುದು ಸಂಪ್ರದಾಯ, ನಂಬಿಕೆ ಹಾಗೂ ಮೌಲ್ಯಗಳ ಮೂಲಕ ಚರಿತ್ರೆಯ ಯಾವ ಕಾಲಘಟ್ಟದಲ್ಲಾದರೂ ಇರಬಹುದು. ಅದಕ್ಕೆ ಪ್ರಾಚೀನ, ಮಧ್ಯಕಾಲೀನ ಹಾಗೂ ಆಧುನಿಕಗಳೆನ್ನುವ ಗಡಿಗಳಿರುವುದಿಲ್ಲ. ಇದನ್ನೇ ವರ್ತಮಾನದ 'ಗತ' ಎಂಬುದಾಗಿ ಕರೆಯಬಹುದಾಗಿದೆ. ಇದು ವರ್ತಮಾನದ ಅಗತ್ಯಕ್ಕನುಗುಣವಾಗಿ ಪ್ರಕಟಗೊಳ್ಳುತ್ತಿರುತ್ತದೆ. ಇಲ್ಲಿ ವರ್ತಮಾನ ಹಾಗೂ ಗತದ ನಡುವೆ ಯಾವ ಅಂತರವೂ ಇರುವುದಿಲ್ಲ. ಉದಾಹರಣೆಗೆ, ಇಂದು ಹಿಂದುತ್ವದ ಪ್ರತಿಪಾದನೆಗೆ ಬಳಕೆಯಾಗುತ್ತಿರುವ ಶ್ರೀರಾಮ ಹಾಗೂ ತಮಿಳುನಾಡಿನಲ್ಲಿ ಸ್ವಾಭಿಮಾನದ ಪ್ರತೀಕವಾಗಿ ಬಳಕೆಯಾಗುತ್ತಿರುವ ರಾವಣ ಗತದ ವ್ಯಕ್ತಿಗಳಾಗಿಲ್ಲ. ಇವರಿಬ್ಬರೂ ವರ್ತಮಾನದಲ್ಲಿ ಜೀವಿಸುತ್ತಿಲ್ಲವಾದರೂ ಅವರ ಅಸ್ತಿತ್ವ ಇರುವುದು ವರ್ತಮಾನದಲ್ಲಿಯೆ. ವರ್ತಮಾನದಲ್ಲಿ ಸೇರಿಕೊಂಡಿರುವ ಗತದ ಮೌಲ್ಯಗಳು ವರ್ತಮಾನವನ್ನು ಬೆಳೆಸಬಹುದು ಅಥವಾ ಛಿದ್ರಗೊಳಿಸಬಹುದು. ಇದು ಸ್ಥಾಪಿತ ಹಿತಾಸಕ್ತಿಗಳು ಹೊಂದಿರುವ ಅಜೆಂಡಾಗಳನ್ನು ಅವಲಂಬಿಸಿರುತ್ತದೆ. ವರ್ತಮಾನದಲ್ಲಿ ಅಸ್ತಿತ್ವಕ್ಕಾಗಿ ಪರದಾಡುತ್ತಿರುವ ನಿಮ್ನ ವರ್ಗಗಳಿಗೆ ಪರಂಪರೆಯ ಗತ ಸಹ್ಯವಲ್ಲದಿದ್ದರೂ, ಆ ಪರಂಪರೆಯ ಒಳಗಡೆಯೇ ತಾವು ಸಿಕ್ಕಿಹಾಕಿಕೊಂಡಿರುವುದರಿಂದಾಗಿ ಹಾಗೂ ಬದಲಿ ಮಾರ್ಗಗಳು ಇನ್ನೂ ಅಸ್ಪಷ್ಟವಾಗಿರುವುದರಿಂದಾಗಿ ಸಂಪೂರ್ಣವಾಗಿ ಬೇರ್ಪಡಲು ಸಾಧ್ಯವಾಗಿಲ್ಲ. ಯಜಮಾನಿಕೆಯನ್ನು ಮೆರೆದ ಲಿಖಿತ ಚರಿತ್ರೆ ಇದಕ್ಕೆ ಅವಕಾಶವನ್ನೂ ಮಾಡಿಕೊಡುವುದಿಲ್ಲ.

ಲಿಖಿತ ನೆಲೆ ಚರಿತ್ರೆಯ ಒಂದು ಮುಖ ಮಾತ್ರ, ಅದರ ಜೊತೆಗೆ ಮೌಖಿಕ ನೆಲೆಯೂ ಸೇರಿಕೊಂಡಾಗ ಚರಿತ್ರೆ ಪರಿಪೂರ್ಣವಾಗುವತ್ತ ಸಾಗಲು ಸಾಧ್ಯ. ರಾಜಪ್ರಭುತ್ವದ ಯುಗ ಮುಗಿದು ಪ್ರಜಾಪ್ರಭುತ್ವ ಅಸ್ತಿತ್ವಕ್ಕೆ ಬಂದ ಮೇಲೆ ಸಮಾಜದ ಅಲಕ್ಷಿತ ವರ್ಗಗಳು ಹೊಸ ವರ್ತಮಾನದಲ್ಲಿ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳುವ ಪ್ರಯತ್ನ ಮಾಡಿದವು. ಈ ಪ್ರಯತ್ನ ಚರಿತ್ರೆಯ ವ್ಯಾಪ್ತಿಯನ್ನು ವಿಸ್ತರಿಸಿ, ಚರಿತ್ರೆಕಾರರ ಮೇಲೆ ಹೊಸ ಜವಾಬ್ದಾರಿಯನ್ನು ಹೊರಿಸಿತು. ಇಲ್ಲಿ ಗಮನಿಸಬೇಕಾದ ವಿಚಾರವೆಂದರೆ ಅಲಕ್ಷಿತ ವರ್ಗಗಳ ಚರಿತ್ರೆ ಪ್ರಭುತ್ವಕೇಂದ್ರಿತ ಚರಿತ್ರೆಯನ್ನು ಚರಿತ್ರೆಯಿಂದ ಹೊರಹಾಕಲಿಲ್ಲ ಎನ್ನುವುದು. ಅದು ಚರಿತ್ರೆಯಲ್ಲಿ ತನ್ನ ಅನುಭವಗಳನ್ನು ಹುಡುಕುವ ಪ್ರಯತ್ನ ಮಾಡಿತು. ಪ್ರಭುತ್ವದ ಸುಳಿಯಲ್ಲಿ ಸಿಲುಕಿದ್ದ ಈ ವರ್ಗಗಳು ದಡವನ್ನು ಸೇರಿದ್ದು ಹಾಗೂ ಮೌನವನ್ನು ಮುರಿದದ್ದು ರಾಜಪ್ರಭುತ್ವ ಅಂತ್ಯಗೊಂಡ ಬಳಿಕ. ಆದರೆ ಇಂದಿಗೂ ಚರಿತ್ರೆ ಪಠ್ಯಗಳಲ್ಲಿ ಅಲಕ್ಷಿತ ವರ್ಗಗಳ ಚರಿತ್ರೆ ಸೇರ್ಪಡೆಗೊಳ್ಳದೇ ಇರುವುದು ಆಡಳಿತ ವ್ಯವಸ್ಥೆ ಬದಲಾದರೂ ಮನಸ್ಸುಗಳು ಬದಲಾಗದಿರುವುದನ್ನು ತೋರಿಸುತ್ತದೆ. ಆದರೂ ಈ ವರ್ಗಗಳ ಕುರಿತಾದ ಬಿಡಿ ಬಿಡಿ ಅಧ್ಯಯನಗಳು ಚರಿತ್ರೆಯ ಸಾಂಪ್ರದಾಯಿಕತೆಯನ್ನು ಮೀರುವ ಹಾಗೂ ಹೊಸ ಅಧ್ಯಯನ ಕ್ರಮವನ್ನು ಹುಟ್ಟುಹಾಕುವತ್ತ ಹೆಜ್ಜೆ ಹಾಕುತ್ತಿವೆ. ಚರಿತ್ರೆಯುದ್ದಕ್ಕೂ ಬೆವರು ಸುರಿಸಿದ ಈ ವರ್ಗಗಳಿಗೆ ನ್ಯಾಯ ಸಿಗುವುದು ಚರಿತ್ರೆ 'ಜನರ ಚರಿತ್ರೆ'ಯಾಗಿ ವ್ಯಾಖ್ಯಾನಗೊಂಡಾಗ ಮಾತ್ರ. ಜನರ ಚರಿತ್ರೆ ಎನ್ನುವ ಪರಿಕಲ್ಪನೆಯೇ ಜೀವಂತಿಕೆಯನ್ನು ಹಾಗೂ ನಿರಂತರತೆಯನ್ನು ಒಳಗೊಂಡಿರುವಂಥದ್ದು. ಇದು ಗತ ಹಾಗೂ ವರ್ತಮಾನವನ್ನು ಬೇರ್ಪಡಿಸಿ ನೋಡುವುದಿಲ್ಲ. ಚರಿತ್ರೆ ಎಲ್ಲ ಜನಸಮುದಾಯಗಳ ಕಥನ ಎನ್ನುವ ವಾಸ್ತವ ವಿಚಾರವನ್ನು ಪ್ರತಿಪಾದಿಸುವುದೇ ಇದರ ಉದ್ದೇಶ. ಇಲ್ಲಿ ಚರಿತ್ರೆಯ ಗತ ಹಾಗೂ ವರ್ತಮಾನ ಒಂದು ಇನ್ನೊಂದನ್ನು ಡಿಸ್ಟರ್ಬ್ ಮಾಡುವುದಿಲ್ಲ ಎಂದಲ್ಲ. ಗತದ ಕಹಿ ನೆನಪುಗಳು ಹೊಸ ವರ್ತಮಾನವನ್ನು ಕಂಡುಕೊಳ್ಳುವಾಗ ಡಿಸ್ಟರ್ಬ್ ಮಾಡಿಯೇ ಮಾಡುತ್ತವೆ. ಆದರೆ ಹೊಸ ಅಸ್ತಿತ್ವವನ್ನು ಕಂಡುಕೊಳ್ಳುವ ವಿಚಾರ ಬಂದಾಗ ಗತ ಹಾಗೂ ವರ್ತಮಾನಗಳೆರಡೂ ಒಂದಾಗಿ ನಿಲ್ಲುತ್ತವೆ. ಸಮಾಜದ ಎಲ್ಲ ಜಾತಿ/ವರ್ಗಗಳೂ ಸಂಘಟಿತವಾಗುತ್ತಿರುವ ಹಾಗೂ ಗುರು ಮತ್ತು ಮಠಕ್ಕಾಗಿ ಹುಡುಕಾಡುತ್ತಿರುವ ಇಂದಿನ ಸಂದರ್ಭದಲ್ಲಿ ಗತ ವ್ಯಾಪಕವಾಗಿ ಬಳಕೆಯಾಗುತ್ತಿದ್ದು, ವರ್ತಮಾನದ ಬದುಕನ್ನು ಹಸನಾಗಿಸುವತ್ತ ಹೆಜ್ಜೆ ಇಟ್ಟಂತೆ ತೋರುತ್ತದೆ. ಆದರೂ ಚರಿತ್ರೆಕಾರರು ಚರಿತ್ರೆಯ ಈ ಎರಡು ಅವಧಿಗಳಿಗೆ ಸಂಬಂಧಪಟ್ಟಂತೆ ನಡೆಯುತ್ತಿರುವ ರಾಜಕೀಯದ ಕುರಿತು ಎಷ್ಟು ಎಚ್ಚರ ವಹಿಸಿದರೂ ಅದು ಕಡಿಮೆಯೇ ಸರಿ.

**ಡಾ|| ಕೆ. ಮೋಹನ್ ಕೃಷ್ಣ ರೈ**
ಪ್ರವಾಚಕರು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಬೇಡವೆ ಎಸ್‌ಎಸ್‌ಎಲ್‌ಸಿ ಪರೀಕ್ಷೆ ?

**ಡಾ|| ಮಹಾಬಲೇಶ್ವರ ರಾವ್**

ಶಿಕ್ಷಣದಂಥ ಸಾಮಾಜಿಕ ಕಾಳಜಿಯ ಗಂಭೀರ ವಿಚಾರಗಳಲ್ಲಿ ನಮ್ಮ ಸರಕಾರಗಳು 'ಕಿವಿಯಲ್ಲಿ ಗಾಳಿ ಹೊಕ್ಕವ'ರಂತೆ ಒಮ್ಮೆಲೆ ದುಡುಕಿನ ನಿರ್ಧಾರಗಳನ್ನು ಕೈಗೊಳ್ಳುತ್ತವೆ. ''ಇಲ್ಲಿ ಏನೂ ನಡೆಯುತ್ತಿಲ್ಲ, ಎಲ್ಲವೂ ನಿಶ್ಚಲವಾಗಿದೆ'' ಎಂದು ಗೊಣಗುಡುವವರ ಬಾಯಿಮುಚ್ಚಿಸಲೋ ಎಂಬಂತೆ ಏನೋ ಒಂದು ಕ್ರಾಂತಿ ನಡೆಯುತ್ತಿದೆ ಎಂಬ ಭ್ರಮೆ ಹುಟ್ಟಿಸುವಂತೆ ಶಿಕ್ಷಣ ಸಚಿವರುಗಳು ನಿರ್ಧಾರಗಳನ್ನು ಘೋಷಿಸಿಬಿಡುತ್ತಾರೆ. ವಿವಿಧ ನೆಲೆಗಳಲ್ಲಿ ವ್ಯಾಪಕ ಚರ್ಚೆ ನಡೆಸಿ, ಸಾರ್ವಜನಿಕ ಅಭಿಪ್ರಾಯ ಸಂಗ್ರಹಿಸಿ ಜನರ ನಾಡಿಮಿಡಿತ ಅರಿತು ಶೈಕ್ಷಣಿಕ ಕಾರ್ಯಕ್ರಮಗಳಿಗೆ ಚಾಲನೆ ನೀಡುವ ಪರಿಪಾಠ ನಮ್ಮಲ್ಲಿ ಇನ್ನೂ ಚಾಲ್ತಿಗೆ ಬಂದಿಲ್ಲ. ಈ ಅಭಿಪ್ರಾಯವನ್ನು ಸಮರ್ಥಿಸುವ ಹಾಗೆ ಈಚೆಗೆ ಕೇಂದ್ರ ಮಾನವ ಸಂಪನ್ಮೂಲಾಭಿವೃದ್ಧಿ ಸಚಿವರು ಹಾಗೂ ಕರ್ನಾಟಕ ಸರಕಾರ ನಡೆದುಕೊಂಡಿದೆ.

ಕೇಂದ್ರದಲ್ಲಿ ಹೊಸ ಸರಕಾರ ಅಸ್ತಿತ್ವಕ್ಕೆ ಬಂದು ಮಾನವ ಸಂಪನ್ಮೂಲಾಭಿವೃದ್ಧಿ ಖಾತೆಯನ್ನು ವಹಿಸಿಕೊಂಡ ತರುಣದಲ್ಲೆ ಸಚಿವ ಶ್ರೀ ಕಪಿಲ್ ಸಿಬಲ್ ಮುಂದಿನ 'ಶತದಿನ ಗುರಿ'ಯನ್ನು ದೇಶದ ಮುಂದಿಟ್ಟಿದ್ದಾರೆ. ಉಚಿತ ಕಡ್ಡಾಯ ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದ ಶಿಕ್ಷಣ ಹಕ್ಕು ಮಸೂದೆಯ ಅನುಷ್ಠಾನ, ಉನ್ನತ ಶಿಕ್ಷಣಕ್ಕೆ ಏಕೈಕ ಮಂಡಲಿಯ ಸ್ಥಾಪನೆ, ಶಾಲಾ ಗುಣಮಟ್ಟ ಮೌಲ್ಯಾಂಕನ ಸಮಿತಿ ಸ್ಥಾಪನೆ, ವಿಶ್ವವಿದ್ಯಾನಿಲಯಗಳ ಸ್ಥಾಪನೆ ವಿಷಯಗಳ ಪರಿಶೀಲನೆ, ಅಖಿಲಭಾರತ ಮದ್ರಸಾಮಂಡಲಿ ಸ್ಥಾಪನೆ ಇತ್ಯಾದಿ. ಆದರೆ ದೇಶಾದ್ಯಂತ ಒಮ್ಮೆಲೆ ಸಮ್ಮಿಶ್ರ ಪ್ರತಿಕ್ರಿಯೆಗೆ ಕಾರಣವಾದದ್ದು ಇಡಿ ರಾಷ್ಟ್ರಕ್ಕೆ ಒಂದು ಎಸ್‌ಎಸ್‌ಎಲ್‌ಸಿ ಪರೀಕ್ಷಾ ಮಂಡಲಿ ಸ್ಥಾಪನೆ ಹಾಗೂ ಆ ಪರೀಕ್ಷೆಯನ್ನು ಐಚ್ಛಿಕಗೊಳಿಸುವ ಪ್ರಸ್ತಾವನೆ.

ದೇಶಾದ್ಯಂತ ಲಕ್ಷಗಟ್ಟಲೆ ವಿದ್ಯಾರ್ಥಿಗಳು ಎಸ್‌ಎಸ್‌ಎಲ್‌ಸಿ ಪರೀಕ್ಷಾ ಮಂಡಲಿಯ ಪರೀಕ್ಷೆ ತೆಗೆದುಕೊಳ್ಳುತ್ತಾರೆ. ಈ ಬೋರ್ಡ್ ಪರೀಕ್ಷೆಗಳು ವಿದ್ಯಾರ್ಥಿಗಳಿಗೂ ಪಾಲಕರಿಗೂ ಆತಂಕಕಾರಿಯಾಗಿವೆ. ವಿದ್ಯಾರ್ಥಿಗಳು ಹಾಗೂ ತಂದೆತಾಯಿಗಳು ನಿದ್ರೆಗೆಡುತ್ತಾರೆ; ಅನುತ್ತೀರ್ಣರು ಆತ್ಮಹತ್ಯೆಗೂ ಮನಮಾಡುತ್ತಾರೆ. ಆದುದರಿಂದ ವಿದ್ಯಾರ್ಥಿಗಳ ಆತಂಕ ನಿವಾರಣೆ ದೃಷ್ಟಿಯಿಂದ ಎಸ್‌ಎಸ್‌ಎಲ್‌ಸಿ ಪರೀಕ್ಷೆಯನ್ನು ಐಚ್ಛಿಕಗೊಳಿಸಬೇಕು. ಅಂಕಗಳ ಬದಲಿಗೆ ಗ್ರೇಡ್‌ಗಳನ್ನು ನೀಡಬೇಕು. ಹನ್ನೆರಡನೆಯ ತರಗತಿ ಅಥವಾ ಪ್ಲಸ್ ೨ ಹಂತದಲ್ಲಿ ಪರೀಕ್ಷೆ ಇರಬೇಕು ಎಂಬುದು ಅವರ ವಾದ. ಈ ಬಗ್ಗೆ ಪಶ್ಚಿಮ ಬಂಗಾಳ, ಕೇರಳ, ಕರ್ನಾಟಕ, ಪಂಜಾಬ್ ಮೊದಲಾದ ರಾಜ್ಯಗಳು ತಮ್ಮ ವಿರೋಧವನ್ನು ವ್ಯಕ್ತಪಡಿಸಿವೆ. ವಿವಿಧ ಶಾಲೆಗಳ ಮುಖ್ಯಸ್ಥರು ಈ ಉಪಕ್ರಮವನ್ನು ಸ್ವಾಗತಿಸಿದರೆ ವಿರೋಧಿಸಿದವರ ಸಂಖ್ಯೆಯೂ ಗಮನಾರ್ಹವಾಗಿದೆ. ಪರ-ವಿರುದ್ಧ ವಾದಗಳ ನಡುವೆ ಯಾವುದು ಸರಿ ? ಯಾರು ಸರಿ ? ಎಂದು ನಿರ್ಣಯಿಸಿ ಹೇಳಲಾಗದ ಬಿಕ್ಕಟ್ಟು ಉದ್ಭವಿಸಿದೆ.

ಕಪಿಲ್ ಸಿಬಲ್ ಅವರು ತಮ್ಮ ವೈಯಕ್ತಿಕ ಆಲೋಚನೆಗಳನ್ನು ವ್ಯಕ್ತಪಡಿಸಿದ್ದರೆ ಅಡ್ಡಿಯಿಲ್ಲ. ಆದರೆ ಶಿಕ್ಷಣ ಸಚಿವರಾಗಿ ನೀತಿ ನಿರ್ಣಾಯಕ ಧೋರಣೆ ವ್ಯಕ್ತಪಡಿಸಿದ್ದರೆ ಕೇಳಬೇಕಾದ ಪ್ರಶ್ನೆ ಎಂದರೆ – ಕೇಂದ್ರೀಯ ಶಿಕ್ಷಣ ಸಲಹಾಸಮಿತಿಯಲ್ಲಿ ಮತ್ತು ರಾಷ್ಟ್ರೀಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ನಿರ್ದೇಶನಾಲಯದಲ್ಲಿ ಈ ಬಗ್ಗೆ ವ್ಯಾಪಕ ಚಿಂತನೆ ನಡೆದಿದೆಯೆ ? ರಾಜ್ಯಗಳ ಶಿಕ್ಷಣ ಸಚಿವರುಗಳೊಂದಿಗೆ ವಿಚಾರ ವಿಮರ್ಶೆ ಮಾಡಲಾಗಿದೆಯೆ ? ಪರೀಕ್ಷಾ ಮಂಡಲಿಗಳ ನಿರ್ದೇಶಕರುಗಳ ಜೊತೆ ಸಮಾಲೋಚನೆ ನಡೆಸಲಾಗಿದೆಯೆ ? ಏಕೆಂದರೆ ರಾಷ್ಟ್ರೀಯ ಮಟ್ಟದಲ್ಲಿ ಶಿಕ್ಷಣದ ನೀತಿ ನಿರ್ಣಯದ ವಿಷಯದಲ್ಲಿ ಸಚಿವರು ತಮ್ಮ ಧೋರಣೆಗಳನ್ನು ದೇಶದ ಮೇಲೆ ಹೇರುವಂತಿಲ್ಲ. ವಿವಿಧ ಗುಂಪುಗಳ ಜೊತೆ ವ್ಯಾಪಕ ಚರ್ಚೆ ನಡೆಸಿ ಬಹುಮತದ ನಿರ್ಣಯಕ್ಕೆ ಬರಬೇಕಾಗುತ್ತದೆ. ಮೇಲಾಗಿ ಶಿಕ್ಷಣವು ಸಂವಿಧಾನದ ಸಹವರ್ತಿ ಪಟ್ಟಿಯಲ್ಲಿರುವುದರಿಂದ ಫೆಡರಲ್ ವ್ಯವಸ್ಥೆಯಲ್ಲಿ ಕೇಂದ್ರ ಹಾಗೂ ರಾಜ್ಯ ಸರಕಾರಗಳು ಪರಸ್ಪರ ಒಮ್ಮತದಿಂದ ಮುಂದುವರಿಯಬೇಕಾಗುತ್ತದೆ; ಇಲ್ಲವಾದರೆ ಕೇಂದ್ರ ಸರಕಾರ ಹೇರಿಕೆಯ ನೀತಿಯನ್ನು ಅನುಸರಿಸುತ್ತದೆ ಎನ್ನಬೇಕಾಗುತ್ತದೆ. ಏನನ್ನೋ ಮಾಡಿತೋರಿಸಬೇಕೆಂಬ ಉತ್ಸಾಹದಲ್ಲಿ ಸಿಬಲ್ ಅವರು ತಮ್ಮ ವಾದವನ್ನು ಮುಂದೊತ್ತಿದ್ದಾರೆ ಎನ್ನದೆ ವಿಧಿಯಿಲ್ಲ.

ಶಿಕ್ಷಣದ ಯಾವುದೇ ಹಂತದಲ್ಲಿ ಪರೀಕ್ಷೆ ಎಂಬುದು 'ಅನಿವಾರ್ಯ ಪೀಡೆ'. 'ಪರೀಕ್ಷೆಗಳಿಲ್ಲದ ಶಿಕ್ಷಣ' ಒಂದು ಸುಂದರ ಕಲ್ಪನೆ. ಒಂದಲ್ಲ ಒಂದು ಹಂತದಲ್ಲಿ ಪಬ್ಲಿಕ್ ಅಥವಾ ಬೋರ್ಡ್ ಪರೀಕ್ಷೆ ಬೇಕು. ಬೋಧನೆ-ಕಲಿಕೆಯ ಯಶಸ್ಸು, ಗುಣಮಟ್ಟ ಹಾಗೂ ಶಾಲೆಗಳ ಗುಣಮಟ್ಟ ತಿಳಿಯಲು, ಮುಂದಿನ ಹಂತದ ವಿದ್ಯಾಭ್ಯಾಸ ಮಾಡಲು ವಿದ್ಯಾರ್ಥಿಗಳು ಅರ್ಹತೆ ಎಂಬುದನ್ನು ಖಚಿತಪಡಿಸಿಕೊಳ್ಳಲು ಮತ್ತು ಅವರು ಯಾವ ವಿಷಯಗಳನ್ನು ಆಯ್ದುಕೊಂಡು ವ್ಯಾಸಂಗ ಮಾಡಬೇಕು ಎಂಬುದನ್ನು ದೃಢಪಡಿಸಿಕೊಳ್ಳಲು ಪರೀಕ್ಷೆಗಳು ಬೇಕೇ ಬೇಕು. ತೀರ ಎಳೆಯ ಮಕ್ಕಳಿಗೆ ಬೋರ್ಡ್ ಪರೀಕ್ಷೆಯ ಶಿಕ್ಷೆ ಬೇಡ ಎಂದು ಹಿಂದೆ ಏಳನೆಯ ತರಗತಿ ಹಂತದಲ್ಲಿ ನಡೆಸುತ್ತಿದ್ದ ಪರೀಕ್ಷೆಯನ್ನು ರದ್ದುಪಡಿಸಲಾಗಿದೆ. ಶಿಕ್ಷಣಕ್ಕಾಗಿ ಸರಕಾರ ಕೋಟಿಗಟ್ಟಲೆ ರೂ.ಗಳನ್ನು ವ್ಯಯಿಸುತ್ತಿರುವುದರಿಂದ, ಯಾವ ಮಗುವೂ ನಿಷ್ಪ್ರಯೋಜಕ, ಕಲಿಯಲಾರದವ ಎಂದಾಗಬಾರದು ಎಂಬ ಘನ ಉದ್ದೇಶದಿಂದ ಈಗಂತೂ ಪಾಸು-ಫೈಲು ವ್ಯವಸ್ಥೆ ಶಾಲಾಹಂತದಲ್ಲಿ ಕಣ್ಮರೆಯಾಗಿದೆ. ಒಂದನೆಯ ತರಗತಿಗೆ ಸೇರಿದ ಮಕ್ಕಳು ಸಲೀಸಾಗಿ ಹತ್ತನೆಯ ತರಗತಿಯ ದಡಮುಟ್ಟಿಸುವ ಕ್ರಮ ಈಗಿನ ಶಿಕ್ಷಣ ವ್ಯವಸ್ಥೆಯಲ್ಲಿದೆ. ಒಂದು ಮಗು ಅನುತ್ತೀರ್ಣ ಎಂದರೆ ಯಾಕೆ ? ಎಂದು ಶಿಕ್ಷಕರನ್ನು ಪ್ರಶ್ನಿಸಲಾಗುತ್ತದೆ ಮತ್ತು ಅವರ ದಕ್ಷತೆಯನ್ನೇ ಶಂಕಿಸಲಾಗುತ್ತದೆ. ಹೀಗಾಗಿ ಶಾಲಾಹಂತದಲ್ಲಿ ಶಿಕ್ಷಕರು ಮಕ್ಕಳು 'ಸಾಮರ್ಥ್ಯವಂತ'ರಾಗಿದ್ದಾರೆ ಎಂದು ಮುಂದಿನ ತರಗತಿಗಳಿಗೆ ದೂಡುತ್ತಾರೆ. ಇಂಥ ಮಕ್ಕಳ ಕಲಿಕೆಯ ಸಾಮರ್ಥ್ಯ, ದಕ್ಷತೆ ಪ್ರಶ್ನಾರ್ಹ. ಹೀಗಾಗಿ ಎಸ್‌ಎಸ್‌ಎಲ್‌ಸಿ ಹಂತದಲ್ಲಿ ಮಹತ್ವದ ಪರೀಕ್ಷೆ ಅತ್ಯಗತ್ಯವಾಗಿ ಬೇಕು.

ಪರೀಕ್ಷೆಗಳು ಹತ್ತವರಿಗೂ ಮಕ್ಕಳಿಗೂ ತಲೆಬೇನೆ ಎಂದು ಎಷ್ಟು ಕಾಲ ಮುಂದೂಡಲು ಸಾಧ್ಯ ? ತರಗತಿ ಪರೀಕ್ಷೆಯೂ ವಿದ್ಯಾರ್ಥಿಗಳಿಗೆ ಆತಂಕಕಾರಿ. ಎಸ್‌ಎಸ್‌ಎಲ್‌ಸಿ ಪರೀಕ್ಷೆ ಎಷ್ಟು ಆತಂಕಕಾರಿಯೋ ಅದಕ್ಕಿಂತ ಹೆಚ್ಚು ಆತಂಕಕಾರಿ ಪದವಿಪೂರ್ವ ಹಂತದ ಪರೀಕ್ಷೆ. ಹನ್ನೆರಡು ವರ್ಷಗಳ ತನಕ ಯಾವುದೇ ಪಬ್ಲಿಕ್ ಪರೀಕ್ಷೆ ಎದುರಿಸದಿರುವುದು ಉತ್ತಮವಲ್ಲ. ಹತ್ತನೆಯ ತರಗತಿ ಎಂಬುದು ಪದವಿಪೂರ್ವ ಹಂತಕ್ಕೆ ಸರಿಯುವ, ವಿಶೇಷ ವಿಷಯಗಳನ್ನು ಆಯ್ಕೆ ಮಾಡುವುದಕ್ಕೆ ಪೂರ್ವಭಾವಿ ಹಂತ. ಈ ಹಂತದಲ್ಲಿ ಪರೀಕ್ಷೆ ಇರುವುದು ಅಪೇಕ್ಷಣೀಯ.

ಕೇಂದ್ರ ಶಿಕ್ಷಣ ಸಚಿವರು ಎಸ್‌ಎಸ್‌ಎಲ್‌ಸಿ ಪರೀಕ್ಷೆಯನ್ನು ಐಚ್ಛಿಕಗೊಳಿಸುವುದು ಯುಕ್ತವಲ್ಲ. ಏಕೆಂದರೆ ಹಲವಾರು ವಿದ್ಯಾರ್ಥಿಗಳು ಈ ಹಂತದ ಬಳಿಕ ವಿದ್ಯಾಭ್ಯಾಸ



ಮುಂದುವರಿಸಲು ಮನಮಾಡುವುದಿಲ್ಲ. ಎಸ್‌ಎಸ್‌ಎಲ್‌ಸಿ ಪ್ರಮಾಣಪತ್ರದ ಬಲದಿಂದ ಸಣ್ಣ ಪುಟ್ಟ ಕೆಲಸಗಳಿಗೆ ಸೇರಿಕೊಂಡು ಮುಂದೆ ಸಂದರ್ಭ ಬಂದಾಗ ವಿದ್ಯಾಭ್ಯಾಸ ಮುಂದುವರಿಸಬಹುದು. ಐಚ್ಛಿಕಗೊಳಿಸುವುದರಿಂದ ಅವರು ಕೆಲವು ತಾಂತ್ರಿಕ ಸಮಸ್ಯೆಗಳನ್ನು ಎದುರಿಸ ಬೇಕಾಗುತ್ತದೆ. ಕೇಂದ್ರೀಯ ಪಠ್ಯಕ್ರಮದಲ್ಲಿ ಬಹಳಷ್ಟು ಶಾಲೆಗಳಲ್ಲಿ ೬ರಿಂದ ೧೨ನೇ ತರಗತಿವರೆಗೆ ಅಖಂಡ ವ್ಯಾಸಂಗ ಕ್ರಮವಿರುತ್ತದೆ. ಇಂಥ ಕಡೆಗಳಲ್ಲಿ ಹತ್ತನೆಯ ತರಗತಿಯ ಪರೀಕ್ಷೆಗಳನ್ನು ರದ್ದುಮಾಡಿ ಪದವಿಪೂರ್ವ ಹಂತದಲ್ಲಿ ಬೋರ್ಡ್ ಪರೀಕ್ಷೆಗಳನ್ನು ನಡೆಸುವುದು ಆಡಳಿತಾತ್ಮಕವಾಗಿ ಸುಲಭ. ಆದರೆ ರಾಜ್ಯ ಪಠ್ಯಕ್ರಮದಲ್ಲಿ ವಿವಿಧ ರಾಜ್ಯಗಳಲ್ಲಿ ಬಹಳಷ್ಟು ಪ್ರೌಢಶಾಲೆಗಳಲ್ಲಿ ಎಂಟು, ಒಂಬತ್ತು ಹಾಗೂ ಹತ್ತು – ಹೀಗೆ ಮೂರು ತರಗತಿಗಳಿರುತ್ತವೆ. ಪ್ರೌಢಶಾಲಾ ವ್ಯಾಸಂಗದ ಕೊನೆಯ ಹಂತವೇ ಎಸ್‌ಎಸ್‌ಎಲ್‌ಸಿ. ಇಂಥ ಕಡೆಗಳಲ್ಲಿ ಈ ಪರೀಕ್ಷೆಯನ್ನು ಐಚ್ಛಿಕಗೊಳಿಸುವುದು ಹೇಗೆ? ಸರ್ವಶಿಕ್ಷಾ ಅಭಿಯಾನದ ಪ್ರಕಾರ ಎಂಟನೆಯ ತರಗತಿಯನ್ನು ಎಲ್ಲ ಪ್ರಾಥಮಿಕ ಶಾಲೆಗಳಲ್ಲಿ ಅಳವಡಿಸಿ ಒಂಬತ್ತು, ಹತ್ತು, ಹನ್ನೊಂದು ಹಾಗೂ ಹನ್ನೆರಡನೆಯ ತರಗತಿಯನ್ನು ಒಂದು ಘಟಕವಾಗಿ ಪರಿಗಣಿಸುವುದಾದರೆ ಸಿಬಲ್ ಅವರ ಉಪಕ್ರಮವನ್ನು ನಾನು ಅನುಮೋದಿಸುತ್ತೇನೆ. ಹೀಗೆ ಮಾಡಲು ಸಾಧ್ಯವೆ? ರಾಜ್ಯ ಸರಕಾರಗಳು ತಯಾರಿದ್ದಾವಾ? ಶಿಕ್ಷಕರ ನೇಮಕಾತಿ, ಸೌಲಭ್ಯಗಳು, ಹಣಕಾಸು ಇತ್ಯಾದಿ ವಿಷಯಗಳಲ್ಲಿ ಒಮ್ಮೆಲೆ ಸರಕಾರಗಳು ಅನೇಕ ಬದಲಾವಣೆಗಳನ್ನು ಮಾಡಬೇಕಾಗುತ್ತದೆ. ಇದು ನಿಧಾನದ್ರೋಹದ ಆಡಳಿತ ವ್ಯವಸ್ಥೆಯಲ್ಲಿ ಸಾಧ್ಯವೆ?

ಹತ್ತನೆಯ ತರಗತಿಯ ಬೋರ್ಡ್ ಪರೀಕ್ಷೆಗಳ ಫಲಿತಾಂಶದ ಪ್ರಮಾಣ ಇತ್ತೀಚಿನ ದಿನಗಳಲ್ಲಿ 'ಶೈಕ್ಷಣಿಕೇತರ ಕಾರಣಗಳಿಗಾಗಿ' ಸಾಕಷ್ಟು ಸುಧಾರಿಸಿದೆ! ಇಷ್ಟಾಗಿಯೂ ಭಯಾನಕ ಫಲಿತಾಂಶಗಳ ಪರಿಣಾಮ ತೀವ್ರತೆ ಕಡಮೆ ಮಾಡಬೇಕೆಂದಿದ್ದರೆ ಆಂತರಿಕ ಹಾಗೂ ಬಾಹ್ಯ ಪರೀಕ್ಷೆಗಳ ಅಂಕಗಳನ್ನು ೫೦:೫೦ ಅನುಪಾತದಲ್ಲಿ ಅಳವಡಿಸಬಹುದು. ಆದರೆ ಇಲ್ಲಿಯೂ ಶಾಲಾ ಆಡಳಿತ ವ್ಯವಸ್ಥೆ ಹಾಗೂ ಶಿಕ್ಷಕರು ಪಾರದರ್ಶಕ ವ್ಯವಸ್ಥೆಯನ್ನು ಅಳವಡಿಸಿರಬೇಕು.

ಶಿಕ್ಷಣ ಸಚಿವರು ಕೇಂದ್ರೀಯ ಪಠ್ಯಕ್ರಮದಲ್ಲಿ ಅಂಕಗಳ ಬದಲಿಗೆ ಗ್ರೇಡ್‌ಗಳನ್ನು ಅಳವಡಿಸುವ ಮಾತನ್ನಾಡಿದ್ದಾರೆ. ಕರ್ನಾಟಕ ರಾಜ್ಯದಲ್ಲಿ ತ್ರೈಮಾಸಿಕ ಶಿಕ್ಷಣ ಕ್ರಮವನ್ನು ಜಾರಿಗೆ ತಂದಾಗ ಗ್ರೇಡ್‌ಗಳನ್ನು ನೀಡುವ ಪರಿಪಾಠ ಜಾರಿಗೆ ಬಂದಿತು. ಆದರೆ ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಇದನ್ನು ಅಳವಡಿಸಿಲ್ಲ. ಒಂದೊಮ್ಮೆ ಈ ಹಂತದಲ್ಲಿ ಅದನ್ನು ಅಳವಡಿಸಿದರೆ ಆತಂಕ-ತಲ್ಲಣ ತಗ್ಗೀತು. ಈ ಗ್ರೇಡ್‌ಗಳ ವ್ಯವಸ್ಥೆ ಬಂದಮೇಲೆ ವಿದ್ಯಾರ್ಥಿಗಳು ಪಾಠಪ್ರವಚನಗಳ ಬಗ್ಗೆ, ಹಾಗೂ ಪರೀಕ್ಷೆಗಳ ಬಗ್ಗೆ ಆಸಕ್ತಿ ಕಳೆದುಕೊಂಡಿದ್ದಾರೆ. 'ಸಿ' ಗ್ರೇಡ್ ಸಿಗದಿದ್ದರೆ ಸಾಕು; 'ಬಿ'ಯಾದರೇನು? 'ಎ' ಆದರೇನು? ಎಂಬ ಧೋರಣೆ ತಳೆದಿದ್ದಾರೆ ಎಂದು ಪಾಲಕರು ಹಾಗೂ ಶಿಕ್ಷಕರು ಕೊರಗುವುದನ್ನು ಕಂಡಿದ್ದೇನೆ. ಎಸ್‌ಎಸ್‌ಎಲ್‌ಸಿ ಹಂತದಲ್ಲಿ ರಾಜ್ಯಮಟ್ಟದ ಪರೀಕ್ಷೆ ಇದೆ ಎಂಬ ಕಾರಣಕ್ಕೆ ಹಲವು ಶಾಲೆಗಳಲ್ಲಿ ಶಿಕ್ಷಕರು ಜವಾಬ್ದಾರಿಯಿಂದ ಕೆಲಸ ಮಾಡುತ್ತಾರೆ ಏಕೆಂದರೆ ಈ ಪರೀಕ್ಷೆ ಮುಖ್ಯವಾಗಿ ಅಧ್ಯಾಪಕನ ದಕ್ಷತೆಗೆ ಹಿಡಿದ ಕನ್ನಡಿಯಂತಾಗಿದೆ. ಬೋರ್ಡ್ ಪರೀಕ್ಷೆಯೇ ಇಲ್ಲ ಎಂದರೆ 'ತೂಕಡಿಸುವವನಿಗೆ ಹಾಸಿಗೆ ಹಾಸಿಕೊಟ್ಟಂತೆ' ಆಗಲಾರದೆ? ಇಡೀ ದೇಶಕ್ಕೇ ಒಂದು ಶಾಲಾ ಹಂತದ ಪರೀಕ್ಷಾಮಂಡಲಿ ಕಲ್ಪನೆ ಸೊಗಸಾಗಿದೆಯಾದರೂ ಅನುಷ್ಠಾನ ಸುಲಭವಲ್ಲ. ಈಗ ರಾಜ್ಯಗಳಲ್ಲಿ ಪ್ರಬಲವಾಗಿರುವ ಮಂಡಲಿಗಳ ಸ್ಥಾನ ವೇನು? ರಾಜ್ಯ ಉದ್ಯೋಗಿಗಳ ಪಾಡೇನು? ಈ ಕ್ರಮ ಹಲವು ಗೊಂದಲಗಳು ಹಾಗೂ ಅನಾಹುತಗಳಿಗೆ ದಾರಿ ಮಾಡಿಕೊಡುವುದಲ್ಲದೆ ವಿದ್ಯಾರ್ಥಿಗಳಿಗೆ ಮತ್ತು ರಕ್ಷಕರಿಗೆ ಸ್ಥಳೀಯವಾಗಿ ಸುಲಭವಾಗಿ ಮಂಡಳಿಯಿಂದ ದೊರೆಯುವ ನೆರವು-ಮಾಹಿತಿ ದೊರೆಯದಂತೆ ಮಾಡೀತು. ಪ್ರತಿಯೊಂದಕ್ಕೂ ದಿಲ್ಲಿ ಕಡೆ ಕತ್ತು ಚಾಚುವ, ಕೈಯೊಡ್ಡುವ ದೈನೇಸಿ ಸ್ಥಿತಿಯನ್ನು ನಿರ್ಮಿಸೀತು. ವಿಕೇಂದ್ರೀಕರಣದ ಜಪ ಮಾಡುತ್ತಾ, ಕೇಂದ್ರೀಕರಣ ಹಾಗೂ ಏಕರೂಪತೆಯ ಜಾಡು ತುಳಿಯುವುದೇಕೆ? ಸಾಂಸ್ಕೃತಿಕ ವೈವಿಧ್ಯ ಹಾಗೂ ರಾಜ್ಯಗಳ ಅನನ್ಯತೆಯನ್ನು ಹಾಳುಮಾಡಲು ಇದೊಂದು ಅಸ್ತ್ರವಾದ್ದರಿಂದ ಸಿಬಲ್ ಅವರ ಕನಸಿನ ಕೂಸನ್ನು ವಿರೋಧಿಸಲೇಬೇಕಾಗಿದೆ.

ಕರ್ನಾಟಕ ಸರಕಾರ ವೇದ ಮತ್ತು ಸಂಸ್ಕೃತ ವಿಶ್ವವಿದ್ಯಾನಿಲಯ ಸ್ಥಾಪನೆ ಮಾಡಲು ಹೊರಟಿದೆ. ಈ ನಾಡಿನಲ್ಲಿ ಪ್ರತಿನಿತ್ಯವೆಂಬಂತೆ ಒಂದೊಂದು ವಿಷಯಕ್ಕೆ ಒಂದೊಂದು ವಿಶ್ವವಿದ್ಯಾನಿಲಯ ಸ್ಥಾಪನೆ ಎಂಬ ಸ್ಥಿತಿ ಉದ್ಭವಿಸಿದೆ! ವಿಶ್ವವಿದ್ಯಾನಿಲಯದ ಮೂಲ ಪರಿಕಲ್ಪನೆ ಈಗ ವಿಘಟಿತವಾಗುತ್ತಿದೆ. ಕರ್ನಾಟಕದ ಹಲವು ಕಡೆಗಳಲ್ಲಿ ಮಠಮಾನ್ಯಗಳು ನಡೆಸುವ ವೇದ ಪಾಠಶಾಲೆಗಳಿರುತ್ತ ವೇದಾಧ್ಯಯನಕ್ಕೆ ವಿಶ್ವವಿದ್ಯಾನಿಲಯವೆ? ಚಲನಶೀಲವಾದ ಶಾಸ್ತ್ರ ವಿಚಾರಗಳ ಪ್ರಯೋಗ, ಬೋಧನೆ, ಅಧ್ಯಾಪನ ಮತ್ತು ಸಂಶೋಧನೆಗೆ ವಿಶ್ವವಿದ್ಯಾನಿಲಯ ಬೇಕು. ವೇದಗಳಲ್ಲಿ ಏನು ಚಲನಶೀಲತೆ ಇದೆ? ಯಾವ ಮಟ್ಟದ ಸಂಶೋಧನೆ ಮಾಡಬಹುದು? ಮಾಡುವ ಸಂಶೋಧನೆ ಎಷ್ಟರಮಟ್ಟಿಗೆ ಜನೋಪಕಾರಿಯೂ ಪ್ರಗತಿಶೀಲವೂ ಆಗಬಲ್ಲುದು? ವೇದ, ಜ್ಯೋತಿಷ, ಯಜ್ಞ-ಯಾಗ, ಹೋಮ-ಹವನ ಮೊದಲಾದ ವಿಚಾರಗಳಿಗಾಗಿ ವಿಶ್ವವಿದ್ಯಾನಿಲಯವೇ ಎಂದು ಯಾರಾದರೂ ಹುಬ್ಬೇರಿಸಬಹುದು ಎಂಬ ಕಾರಣಕ್ಕೆ ಅದರೊಂದಿಗೆ ಸಂಸ್ಕೃತವನ್ನು ಅಡಕಗೊಳಿಸಲಾಗಿದೆ! ಈ ಹೊತ್ತು ಕಾಲೇಜು ಹಂತದಲ್ಲಿ ಕನ್ನಡವನ್ನು ಐಚ್ಛಿಕವಾಗಿ ಅಧ್ಯಯನ ಮಾಡುವವರ ಸಂಖ್ಯೆ ಕ್ಷೀಣಿಸಿದೆ. ತುಳು, ಕೊಂಕಣಿ ಮೊದಲಾದ ಜನಭಾಷೆಗಳಿಗೆ ಶಿಕ್ಷಣ ಹಂತದಲ್ಲಿ ಇನ್ನೂ ನೆಲೆ ಕಲ್ಪಿಸಿಲ್ಲ. ಹೀಗಿರುವಾಗ 'ಜನವಿದೂರ'ವಾದ, 'ಮೃತಭಾಷೆ' ಎನ್ನಲಾದ ಆಧುನಿಕ ವಿದ್ಯಮಾನಗಳನ್ನು ಸರಿಯಾಗಿ ಬಿಂಬಿಸುವ ವ್ಯವಸ್ಥೆ ಇಲ್ಲದ ಮತ್ತು ಉದ್ಯೋಗ ಭರವಸೆಯನ್ನು ಮೂಡಿಸದ ಸಂಸ್ಕೃತಕ್ಕೆ ವಿಶ್ವವಿದ್ಯಾನಿಲಯದ ಪಟ್ಟವೇಕೆ? ನಾಡಿನಲ್ಲಿ ಕೆಲವು ಸಂಸ್ಕೃತ ಪಾಠಶಾಲೆಗಳಿವೆ. ಕಲಿಯುವವರು ಎಷ್ಟು ಮಂದಿ? ಅವರು ಕಲಿಯುತ್ತಿರುವುದೇನು? ಇಂದಿನ ಬದುಕಿಗೆ ಅದು ಎಷ್ಟುಪ್ರಸ್ತುತ?

ಶಾಲೆಗಳಲ್ಲಿ ಈಗ ಸಂಸ್ಕೃತ ಕಲಿಯುವವರ ಸಂಖ್ಯೆಯೂ ಕ್ಷೀಣಿಸಿದೆ. ಹೀಗಿರುವಾಗ ದೊಡ್ಡ ವಿಶ್ವವಿದ್ಯಾನಿಲಯ ಬೇಕೆ? ಇಷ್ಟಕ್ಕೂ ತಿರುಪತಿಯಲ್ಲಿ ರಾಷ್ಟ್ರೀಯ ಸಂಸ್ಕೃತ ಸಂಸ್ಥಾನ (ಡೀಮ್ಡ್ ವಿ.ವಿ.)ವಿದೆ; ಅದರ ಶಾಖೆ ಶೃಂಗೇರಿಯಲ್ಲಿದೆ. ಅಲ್ಲಿ ಸಂಸ್ಕೃತ ಬೋಧನೆ-ಕಲಿಕೆ ಹಾಗೂ ಶೋಧನೆಗೆ ವ್ಯಾಪಕ ಅವಕಾಶಗಳಿವೆ. ಅದಕ್ಕಿಂತ ಭಿನ್ನವಾಗಿ ಕರ್ನಾಟಕದಲ್ಲಿ ಸಂಸ್ಕೃತ ವಿಶ್ವವಿದ್ಯಾನಿಲಯ ಹೇಗೆ ಕೆಲಸಮಾಡೀತು? ಮುರಳಿ ಮನೋಹರ ಜೋಶಿಯವರು ೨೦೦೦ನೆ ಇಸ್ವಿಯಲ್ಲಿ ಕೇಂದ್ರದಲ್ಲಿ ಮಾಡಿದ ವಿಫಲ ಯತ್ನಗಳನ್ನು ಅವರ ವಾರಸುದಾರರು ಕರ್ನಾಟಕದಲ್ಲಿ ಮುಂದುವರಿಸುತ್ತಿದ್ದಾರೆ! ಕರ್ನಾಟಕದಲ್ಲಿ ೨೫ ವರ್ಷಗಳ ಹಿಂದೆ ಸ್ಥಾಪನೆಯಾದ ವಿಶ್ವವಿದ್ಯಾನಿಲಯಗಳೇ ಇನ್ನೂ ಏಳಿಗೆ ಕಂಡಿಲ್ಲ. ಎಲ್ಲ ಬಗೆಯ ಜಾಡ್ಯಗಳು ಈ ವಿಶ್ವವಿದ್ಯಾನಿಲಯಗಳಿಗೆ ಅಂಟಿಕೊಂಡಿವೆ. ಸರಕಾರದ ಅನುದಾನ ಕೊರತೆಯಿಂದಾಗಿ ಖಾಸಗಿ ಸಂಸ್ಥೆಗಳವರ 'ಆದರ್ಶ' ಮುಂದಿಟ್ಟುಕೊಂಡು ಸ್ವ-ಧನಸಹಾಯ ವ್ಯವಸ್ಥೆಯ ಕೋರ್ಸುಗಳನ್ನು ಆರಂಭಿಸಿ ತಮ್ಮ ಖಜಾನೆ ತುಂಬಿಕೊಳ್ಳಲು ಹೆಣಗುತ್ತಿವೆ. ಪ್ರತಿವರ್ಷವೂ ಶುಲ್ಕದರ ಏರಿಸಿ ಅಮಾಯಕ ವಿದ್ಯಾರ್ಥಿಗಳ ಶೋಷಣೆ ಮಾಡುತ್ತಿವೆ. ತೀರ ಈಚೆಗೆ ಆರಂಭವಾದ ವಿಶ್ವವಿದ್ಯಾನಿಲಯಗಳಲ್ಲಿ ಕಟ್ಟಡಗಳಿಲ್ಲ, ಸೂಕ್ತ ನಿವೇಶನ ಗುರುತಿಸಿಲ್ಲ, ಪ್ರಾಧ್ಯಾಪಕರಿಲ್ಲ, ಕುಲಪತಿಗಳಿಲ್ಲ. ಹೇಗೆ ಹೇಗೋ ಆಯ್ಕೆಯಾಗಿ ಬಂದ 'ಕುಲಪತಿ', 'ಕುಲಪತ್ನಿ'ಯರ ಭ್ರಷ್ಟಾಚಾರದ ಕತೆಗಳಿಗೆ ಕೊನೆಮೊದಲಿಲ್ಲ! ಇಷ್ಟೆಲ್ಲ ಇದ್ದೂ ಸಂಸ್ಕೃತ ವಿಶ್ವವಿದ್ಯಾನಿಲಯದ ಸ್ಥಾಪನೆ ಏಕೆ? ಕರ್ನಾಟಕ ಸರಕಾರದ ಬಳಿ ನನ್ನ ಮನವಿ ಇಷ್ಟೇ: ಅವರಿವರ ಒತ್ತಾಯ, ಒತ್ತಡ ಹಾಗೂ ಆಮಿಷಗಳಿಗೆ ಮಣಿದು ಹೊಸಹೊಸ 'ಶಿಕ್ಷಣದ ಅಂಗಡಿ'ಗಳನ್ನು ತೆರೆಯಬೇಡಿ. ಈಗಾಗಲೇ ನೀವು ತೆರೆದಿರುವ 'ಗೂಡಂಗಡಿ'ಗಳನ್ನು ದಕ್ಷತೆಯಿಂದ ನಡೆಸಿಕೊಂಡು ಬನ್ನಿ. ಅದೇ ನೀವು ಕರ್ನಾಟಕದ ಜನತೆಗೆ ಮಾಡುವ ಮಹೋಪಕಾರ.

ಡಾ|| ಮಹಾಬಲೇಶ್ವರ ರಾವ್
ಪ್ರಾಂಶುಪಾಲರು, ಡಾ|| ಟಿ.ಎಂ.ಎ. ಪೈ ಕಾಲೇಜ್ ಆಫ್ ಎಜ್ಯುಕೇಷನ್, ಕುಂಜಿಬೆಟ್ಟು, ಉಡುಪಿ - ೫೭೬ ೧೦೨

## ನಮ್ಮ ಸಾಗರ

ನಮಗೆ ಸಾಗರ ಬೇಕು

ಅದು ನಮ್ಮ ಉಣಿಸು
ನಮ್ಮರಿವಿನ ದೇಶವು
ನಾವಳಿಯುವ ಕಾಲವು

ಕಡಲ ಸುಗ್ಗಿಯೇ ಬದುಕು
ನಮಗೆ ಸಾಗರ ಬೇಕು

– ಮಹಾಹ್ ಇಂಡಿಯನ್ ನಾಯಕ
ಇನ್ನು ಮೇಲೆ ಸಾಗರೋತ್ಪನ್ನಗಳ
ಒಡೆತನ ಸರ್ಕಾರದ್ದು ಎಂದ
ಬಿಳಿಯ ಪ್ರತಿನಿಧಿಯೊಂದಿಗೆ ವಾದಿಸಿದ
ಬಗೆ, ೧೮೫೫, ವಾಷಿಂಗ್‌ಟನ್ ಸಂಸ್ಥಾನ
ರೆಡ್ ಇಂಡಿಯನ್ ಕವಿತೆಗಳು

ಕನ್ನಡಕ್ಕೆ : **ಕೆ. ಎಸ್. ರವಿಕುಮಾರ್**
ಭಾರತೀಯ ಜೀವ ವಿಮಾ ನಿಗಮ, ಹಾಸನ - ೫೭೩೨೦೧




# ಮೂರನೆಯ ಗ್ರಹಣದ ಗುಲ್ಲು

**ಕ**ಳೆದ ತಿಂಗಳು ಗ್ರಹಣಗಳಿಗಿಂತ ಮೂರು ಗ್ರಹಣ ಒಟ್ಟಿಗೇ ಬಂದಿವೆ ಎಂಬ ಗುಲ್ಲು ಹೆಚ್ಚು ಸುದ್ದಿ ಮಾಡಿತು. ಆದರೆ ಗ್ರಹಣ ಎಂಬ ವ್ಯಾಖ್ಯೆಗೆ ಅನ್ವಯವಾಗುವ ಆಚ್ಛಾದನೆ ಮುಂತಾದ ಘಟನೆಗಳು ಕೆಲವು ತಿಂಗಳಲ್ಲಿ ಮೂರಕ್ಕಿಂತ ಹೆಚ್ಚೇ ನಡೆಯುತ್ತವೆ ಎಂಬುದು ನಭಾವಲೋಕನದ ಓದುಗರಿಗೆ ಈಗಾಗಲೇ ಮನದಟ್ಟಾಗಿರಬೇಕು. ಕಳೆದ ತಿಂಗಳು ೭ರ ಪಾರ್ಶ್ವ ಛಾಯಾ ಗ್ರಹಣ, ೨೨ರ ಪೂರ್ಣ ಸೂರ್ಯ ಗ್ರಹಣ ಅಲ್ಲದೆ ೩೧ರಂದು ಜ್ಯೇಷ್ಠಾ ನಕ್ಷತ್ರದ ಗ್ರಹಣವೂ ಸಂಭವಿಸಿತ್ತು. ಜನವರಿಯಲ್ಲಿ ಗಣರಾಜ್ಯೋತ್ಸವ ದಿನದಂದು ಸೂರ್ಯ ಗ್ರಹಣ ನಡೆದಿದ್ದು ನೆನಪಿರಬೇಕು; ಅದರ ಹಿಂದಿನ ಮತ್ತು ಮುಂದಿನ ಹುಣ್ಣಿಮೆಗಳಲ್ಲೂ ಗ್ರಹಣ ನಡೆದಿತ್ತು. ಆದರೆ ಜನವರಿಯ ಹುಣ್ಣಿಮೆಯಲ್ಲಿ ಚಂದ್ರ ಭೂಮಿಯ ನೆರಳಿನ ತೀರಾ ಅಂಚಿನಲ್ಲಿ ಇದ್ದುದರಿಂದ ಗ್ರಹಣ ಹೌದೇ ಅಲ್ಲವೇ ಎಂದು ತೀರ್ಮಾನಿಸುವುದು ಕಷ್ಟವಾಗಿತ್ತು.

ಮೂರನೆಯ ಗ್ರಹಣ ಎಂಬ ಖ್ಯಾತಿಗೆ ಕಾರಣವಾಗುವ ಗ್ರಹಣ ಬರುವ ಹುಣ್ಣಿಮೆಯಂದು. ೬ರ ಬೆಳಿಗ್ಗೆ ಚಂದ್ರನನ್ನು ಗಮನಿಸಿ; ಭೂಮಿಯ ನೆರಳನ್ನು ಅದು ಪ್ರವೇಶಿಸುತ್ತಿದೆ ಎಂಬುದನ್ನು ಗುರುತು ಹಚ್ಚುವುದು ಸವಾಲೇ ಸರಿ. ಆಕಾಶ ಶುಭ್ರವಾಗಿದ್ದರೂ ಚಂದ್ರ ಮಂಕಾಗಿರಬಹುದು ಎಂಬುದೊಂದೇ ಸುಳಿವು.

೨೭ರಂದು ಜ್ಯೇಷ್ಠಾ ನಕ್ಷತ್ರವನ್ನು ಚಂದ್ರ ಮರೆಮಾಡುವ 'ಗ್ರಹಣ'ವೂ ಇದೆ. ಆದರೆ ನಮಗೆ ಅವು ಪಕ್ಕ ಪಕ್ಕ ಇರುವಂತೆ ಮಾತ್ರ ಕಾಣುತ್ತವೆ.

ಸಂಜೆ ಕಾಣುವ ಗ್ರಹ ಶನಿ ಒಂದೇ. ಸುಮಾರು ಎಂಟು ಗಂಟೆಗೆ ಕಂತುತ್ತದೆ. ಬುಧ ಗ್ರಹ ಎರಡನೆಯ ವಾರದಿಂದ ಮುಂದೆ ಸಂಜೆ ಕಾಣುತ್ತದೆ. ಸುಮಾರು ೧೫ರ ಹೊತ್ತಿಗೆ ಶನಿ ಮತ್ತು ಬುಧ ಪಶ್ಚಿಮದ ಅಂಚಿನಲ್ಲಿ ಜೋಡಿಯಾಗುತ್ತವೆ. ತಿಂಗಳ ಕೊನೆಗೆ ಶನಿ ಕಾಣದಂತಾಗಿ, ಬುಧ ಮೇಲೆ ಏರುತ್ತದೆ. ೨೪ರಂದು ಗರಿಷ್ಠ ಎತ್ತರದಲ್ಲಿ ಕಾಣುತ್ತದೆ.

ವೃಶ್ಚಿಕ, ಧನು ಮೂಲಕ ಹಾದುಹೋಗುವ ಆಕಾಶಗಂಗೆಯ ಒಂದು ಭಾಗ ಸ್ಪುಟವಾಗಿ ಕಾಣುತ್ತದೆ. ಮೋಡಗಳು ಬಿಡುವು ಕೊಟ್ಟಾಗ ಮರೆಯದೆ ಗಮನಿಸಿ. ಆಕಾಶಗಂಗೆಯ ಇನ್ನೊಂದು ಭಾಗ ಉತ್ತರದ ಗರುಡ (ಅಕ್ವಿಲಾ), ವೀಣಾ (ಲೈರಾ) ಮತ್ತು ರಾಜಹಂಸ (ಸಿಗ್ನಸ್) ಮೂಲಕ ಸಾಗುವುದು.




ತಿಂಗಳ ಆರಂಭದಲ್ಲಿ ಸುಮಾರು ಏಳು ಗಂಟೆಯ ಹೊತ್ತಿಗೆ ಪೂರ್ವದಲ್ಲಿ ಗುರು ಉದಯಿಸುವುದನ್ನು ಕಾಣಬಹುದು. ೬ರಂದು ಸಂಜೆ ಚಂದ್ರನ ಪಕ್ಕ ಕಾಣುವ ಪ್ರಕಾಶಮಾನ ಚುಕ್ಕೆಯೇ ಗುರು ಗ್ರಹ. ಬೆಳಗಿನ ಜಾವ ಶುಕ್ರ ಹಾಗೂ ಮಂಗಳಗಳನ್ನು ಕಾಣಬಹುದು. ೧೪ರಂದು ಗುರುಗ್ರಹದ ವಿಯುತಿ; ಅಂದರೆ ಸೂರ್ಯಾಸ್ತವಾಗುವಾಗ ಗುರು ಪೂರ್ವದಲ್ಲಿ ಉದಯಿಸುತ್ತದೆ. ಆಗ ಭೂಮಿ-ಗುರು ನಡುವಿನ ಅಂತರ ಕನಿಷ್ಠವಾಗಿರುವುದರಿಂದ ಅತಿ ದೊಡ್ಡದಾಗಿ ಮತ್ತು ಅತಿ ಪ್ರಕಾಶಮಾನವಾಗಿ ಕಾಣುತ್ತದೆ. ೧೬ರ ಬೆಳಗಿನ ಜಾವ ಚಂದ್ರನ ಪಕ್ಕದಲ್ಲಿರುವುದು ಮಂಗಳ; ೧೮ರಂದು ಶುಕ್ರದ ಪಕ್ಕ ಚಂದ್ರ ಕಾಣುವುದನ್ನು ಗುರುತಿಸಲು ಹೆಚ್ಚೇನೂ ಕಷ್ಟಪಡಬೇಕಾಗಿಲ್ಲ.

ಆಗಸ್ಟ್ ಎಂದರೆ ಪರ್ಸಿಯೈಡ್ ಉಲ್ಕಾವೃಷ್ಟಿಯ ನೆನಪಾಗುವುದು. ೧೨ರಂದು ಚಟುವಟಿಕೆಯ ಗರಿಷ್ಠ – ಗಂಟೆಗೆ ೬೦-೮೦ ಉಲ್ಕೆಗಳು ಬೀಳಬಹುದು.

**ಖಗೋಳ ದಿನಚರಿ**

ಆಗಸ್ಟ್ ೨ ಬುಧ ಮತ್ತು ಮಘ ನಕ್ಷತ್ರ ಜೋಡಿ

೬ ಹುಣ್ಣಿಮೆ ೦೫:೩೫ಕ್ಕೆ ; ಪಾರ್ಶ್ವ ಛಾಯಾ ಗ್ರಹಣ (ಬೆಳಗಿನ ೦೪:೩೧ರಿಂದ ೦೭:೪೮ರವರೆಗೆ); ಸಂಜೆ ಚಂದ್ರ - ಗುರು ಜೋಡಿ *

೧೩ ಚಾಂದ್ರಮಾಸದ ಕೊನೆಯ ಪಾದ

೧೪ ಗುರು ಗ್ರಹದ ವಿಯುತಿ

೧೬ ಮಂಗಳ - ಚಂದ್ರ ಜೋಡಿ *

೧೮ ಮುಂಜಾವು ಚಂದ್ರ - ಶುಕ್ರ ಜೋಡಿ; ಸಂಜೆ ಶನಿ - ಬುಧ ಜೋಡಿ *

೨೦ ಅಮಾವಾಸ್ಯೆ ೧೫:೩೨ಕ್ಕೆ

೨೨ ಮುಂಜಾವು ಶುಕ್ರ - ಪುನರ್ವಸು ಜೋಡಿ; ಸಂಜೆ ಶನಿ- ಬುಧ-ಚಂದ್ರ ಮೂರರ ಪುಟ್ಟ ಗುಂಪು *

೨೪ ಬುಧ ಗ್ರಹದ ಗರಿಷ್ಠ ಕೋನೋನ್ನತಿ *

೨೭ ಚಾಂದ್ರ ಮಾಸದ ಮೊದಲ ಪಾದ

ಸೆಪ್ಟೆಂಬರ್ ೨ ಗುರು ಚಂದ್ರ ಜೋಡಿ *

(* ಛಾಯಾ ಗ್ರಹಣಕ್ಕೆ ಉತ್ತಮ ಅವಕಾಶ)



೬ರ ಸಂಜೆ ಚಂದ್ರ ಮತ್ತು ಗುರು



೧೬ರ ಮುಂಜಾವು ಚಂದ್ರ ಮತ್ತು ಮಂಗಳ

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ [illegible] ಹೈಗ್ರೌಂಡ್ಸ್ [illegible]

ಯಾವಾಗಲೂ ತಡವಾಗಿ ಬರುವ ಸಚಿವರು ಇಂದು ಶೀಘ್ರವಾಗಿ ಬರುವ ಸುದ್ದಿ ಕೇಳಿ ಸಭೆಯಲ್ಲಿ ಗುಜುಗುಜು.

''ಸದ್ದೂ...'' ಜೋರಾದ ಅಬ್ಬರ, ಸಚಿವರ ಅಂಗರಕ್ಷಕರಿಂದ.

ಸೂಜಿ ಬಿದ್ದರೂ ಕೇಳಿಸುವಷ್ಟು ನಿಶ್ಶಬ್ದ.

ಡವ್, ಗೊಂಯ್, ಡವ್ ಡೊಯ್, ಜಾಗಟೆನಾದ, ಘೊಂ, ಘೊಂ, ಘೊಂ ಶಂಖ ಧ್ವನಿ. ಪೀ, ಪೀ, ಪೀ, ಓಲಗದ ನಾದ.

ಡುಂ, ಡುಂ, ಡುಂ, ಟಕ, ಟಕ, ಟಕ, ಡೋಲಿನ ಹೊಡೆತ

ಡಂಕಣಕ, ಣಕ್ಕಣಕ, ಡಂಕಣಕ, ಣಕ್ಕಣಕ, ತಮಟೆ ನಾದ.

'ಸದ್ದೂ...' ಮತ್ತೆ ಎಚ್ಚರಿಕೆ. ಸ್ಮಶಾನ ಮೌನ.

ಈಗ ವಂದಿಮಾಗಧರಿಂದ ಜೋಗಳದಂಥ ಉದ್ಘೋಷ :

''ಸಚಿವಾದಿ ಸಚಿವ, ಪ್ರಚಂಡ ಮುಸವ, ಗಂಡರ ಗಂಡ, ರಣ ಭೇರುಂಡ, ಸಂಸ್ಕೃತಿಯ ಚಂಡ, ಸನಾತನಿಗಳ ಪಿಂಡ, ಉಂಡದ್ದನ್ನು ಬಿಡದೇ ಅಜಮಾಯಿಸುವ ಭಂಡ, ಮುಜರಾಯಿ ತಲೆ ಕಾಯುವ ಭಾಯಿ. ಶ್ರೀ ಶ್ರೀ ಶ್ರೀ ಕರೀಶ್ರೇಷ್ಠಿ ಎಂದೆಂಬ ಮಹಾ ನಟನಾ ಚತುರ ಮುಖ್ಯಮಂತ್ರಿಯ ಚಕರ ಪರಾಕ್... ಪರಾಕ್... ಬಹುಪರಾಕ್. ಮತ್ತೆ ನೀರವ ಮೌನ.

ನಾರುಮಡಿಯುಟ್ಟು, ಕಿರೀಟ ಧರಿಸಿ, ಹಾರ-ತುರಾಯಿಗಳಿಂದಲಂಕೃತ ಶ್ರೀ ಕರೀಶ್ರೇಷ್ಠಿಗಳು ಪತ್ರಿಕಾಗೋಷ್ಠಿಗೆ ಆಗಮಿಸುವರು. ಕಿವಿಯಲ್ಲಿ ಕಣಗಲೆ ಹೂವಿರುವುದು. ಕಿವಿಯವರೆಗೂ ಬಾಯಗಲಿಸಿ ಮುಗುಳ್ನಗೆಯೊಂದಿಗೆ ಎಲ್ಲರಿಗೂ ನಮಸ್ಕರಿಸುವರು. ನಿಂತಲ್ಲೇ ಇಪ್ಪತ್ತೊಂದು ಬಾರಿ ಗರಗರನೆ ಸುತ್ತಿ ಸುಸ್ತಾಗಿ ಕುಕ್ಕರಿಸುವರು. ಅಂಗರಕ್ಷಕರು ಗಂಗಾಜಲ-ಗಂಜಲದ ಮಿಶ್ರಣವನ್ನು ಸಿಂಪಡಿಸುವರು. ಅವರ ಮೇಲೆ ಮಲ್ಲಿಗೆ ವೃಷ್ಟಿ. ಪತ್ರಕರ್ತರ ಮೇಲೆ ಚೆಂಡು ಹೂವಿನ ಮಳೆ. ಕರೆಂಟುಹೋಗುವುದು. ಎಲ್ಲೆಡೆ ಕತ್ತಲೆಂದರೆ ಕತ್ತಲೆ. ಮತ್ತೆ ಗದ್ದಲ ಶುರುವಾಗುವುದು. ''ಸದ್ದೂ...''



# ಕರ್ನಾಟಕ ಸರ್ಕಾರದ ಮುಜರಾಯಿ ಸಚಿವರ (ಕ.ಸ.ಮು.ಸ) ಪತ್ರಿಕಾಗೋಷ್ಠಿ

ಅಂಗರಕ್ಷಕರಿಂದ ಎಚ್ಚರಿಕೆ. ನೀರವ ಮೌನ. ಎಲ್ಲರಿಗೂ ಆಶ್ಚರ್ಯವಾಗುವಂತೆ ಕತ್ತಲಲ್ಲಿ 'U'ಆಕಾರದ ಬಿಳಿಯಗೆರೆ ಮಧ್ಯದಲ್ಲಿ ಕೆಂಪುಗೆರೆ ಮೂಡುವುದು. ನಿಶ್ಶಬ್ದ. ನಿಧಾನವಾಗಿ ಬೆಳಕಾಗುವುದು. ಆಶ್ಚರ್ಯ, ಆ ಮೂರು ಗೆರೆಗಳು ಶ್ರೀ ಕರೀಶ್ರೇಷ್ಠಿಗಳ ಹಣೆಯ ಮೇಲಿದ್ದ ಗೆರೆಗಳೆ! ಎಲ್ಲರೂ ಆಶ್ಚರ್ಯಚಕಿತರಾಗುವರು. ''ಈಗ ಪ್ರಶ್ನೆಗಳನ್ನು ಕೇಳಬಹುದು'', ಸಚಿವರು ಅಪ್ಪಣೆ ಕೊಡಿಸುವರು. ಮುದ್ರಾಧಾರಿ ಪ.ಕ. (ಪತ್ರಕರ್ತ): ಈ ಗೋಷ್ಠಿಯ ಉದ್ದೇಶ ?

**ಕ.ಸ.ಮು.ಸ:** ಭಾರತೀಯ ಸಂಸ್ಕೃತಿಯನ್ನು ಉಳಿಸಿ ಬೆಳೆಸಲು ನಮ್ಮ ಇಲಾಖೆ ತೆಗೆದುಕೊಂಡಿರುವ ಕಾರ್ಯಕ್ರಮಗಳ ವಿವರ ನೀಡುವುದು.

**ಒಂಟಿನಾಮ ಪ.ಕ.:** ಈಗಾಗಲೇ ಗಂಗಾ ಜಲದಿಂದಲೂ, ಲಾಡುಗಳಿಂದಲೂ ಈ ಕೆಲಸವನ್ನು ಮಾಡಿದ್ದೀರಿ. ಮತ್ತೆ ?

**ಕ.ಸ.ಮು.ಸ:** ಹೌದು. ಅದು ಕೇವಲ ಆರಂಭ, ಅಷ್ಟೆ. ಈಗ ೨೧ನೇ ಶತಮಾನಕ್ಕೆ ಒಗ್ಗುವಂತೆ ಅನೇಕ ವಿಶಿಷ್ಟ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಿದ್ದೇವೆ.

**ವಿಭೂತಿಧಾರಿ ಪ.ಕ.:** ನಮ್ಮೆಲ್ಲರ ಪುಣ್ಯ. ನೀವು ನಮ್ಮ ಸಚಿವರು (ನಿಂತಲ್ಲಿಯೇ ೨೧ ಬಾರಿ ಸುತ್ತಲು ಪ್ರಯತ್ನಿಸಿ, ಸ್ಥೂಲಕಾಯದಿಂದಾಗಿ, ವಿಲ್ಲಲಾಗದೆ ಸುತ್ತುತ್ತಲೇ ಇರುವರು.)

**ಕುಂಕುಮಧಾರಿ ಪ.ಕ.:** ಮಹಾಶಯರೇ, ವಿವರಗಳನ್ನು ನೀಡಿ.

**ಕ.ಸ.ಮುಸ:** ನಮ್ಮ ಸಂಸ್ಕೃತಿಯ ಪ್ರತೀಕವಾದ ಮೂರು ನಾಮಗಳನ್ನು ಜನಪ್ರಿಯಗೊಳಿಸುವ ಆಶಯದಲ್ಲಿ, ತ್ರಿನಾಮಧಾರಿಗಳಿಗೆ ಕೆಲವು ರಿಯಾಯಿತಿಗಳನ್ನು ನೀಡಲಿದ್ದೇವೆ. ಅವರಿಗೆ ಬಸ್ಸಿನಲ್ಲಿ ಅರ್ಧಚಾರ್ಜು. ವಿದ್ಯಾರ್ಥಿಗಳಾದರೆ ಶಾಲಾ-ಕಾಲೇಜುಗಳಲ್ಲಿ ಅರ್ಧಫೀಸು ಮತ್ತು ಮಹಿಳೆಯರಾದರೆ ಪುಕ್ಕಟ್ಟೆ ಗ್ಯಾಸು.

**ಮುದ್ರಾಧಾರಿ ಪ.ಕ.:** ಪ್ಹಾ... ಎಂತಹ ಅಮೋಘ ಆಲೋಚನೆ. ತಿರುಪತಿ ತಿಮ್ಮಪ್ಪನ ಕೃಪೆ ಇನ್ನು ಎಲ್ಲರಿಗೂ ಸಿಕ್ಕೇಸಿಗುತ್ತದೆ. ಆದರೆ, ಮಾನ್ಯರೆ, ಅನೇಕರಿಗೆ ಸ್ವಂತ ನಾಮ ಹಾಕಿಕೊಳ್ಳಲು ಬರುವುದಿಲ್ಲವಲ್ಲ!

**ಕ.ಸ.ಮು.ಸ:** ಇದು ನಮಗೆ ತಿಳಿದಿದೆ. ಇದಕ್ಕಾಗಿಯೇ ನಾವಿರುವುದು. ಈಗ ನಮ್ಮ ನಾಡಿನ ಎಲ್ಲಾ ದಾಸಯ್ಯರನ್ನು ನಾವೇ ''ನಾಮ ಪ್ರವರ್ತಕ'' ಎಂಬ ಹೆಸರಿನಲ್ಲಿ ನೇಮಿಸಿಕೊಳ್ಳುತ್ತೇವೆ. ಅವರಿಗೆ ಬೀದಿಗೊಂದರಂತೆ ''ನಾಮ ಕೇಂದ್ರ''ಗಳನ್ನು ತೆರೆದು ಕೆಲಸ ಕೊಡುತ್ತೇವೆ. ಇದರಿಂದ ಎರಡು ಉದ್ದೇಶಗಳು ನೆರವೇರುತ್ತವೆ: (ಅ) ಸುಲಭದಲ್ಲಿ ನಾಮ ಪ್ರಸರಣೆ. (ಆ) ನಿರುದ್ಯೋಗ ನಿವಾರಣೆ.

**ತ್ರಿ ನಾಮಧಾರಿ ಪ.ಕ:** ಮಾನ್ಯರೇ, ಇದರಲ್ಲಿ ಒಂದು ದೋಷವಿದೆ. ಉಚಿತ ನಾಮಪಡೆದು ನಂತರ ರಿಯಾಯಿತಿಗಳನ್ನೂ ಪಡೆದು ಕೂಡಲೇ ನಾಮವನ್ನು ಅಳಿಸಿಕೊಂಡುಬಿಡುತ್ತಾರೆ.

**ಕ.ಸ.ಮು.ಸ:** ಹ್ಹಾ... ಹ್ಹಾ... ಹ್ಹ. ನಾವೇನೂ ಕಿವಿಗೆ ಚೆಂಡು ಹೂವು ಇಟ್ಟುಕೊಂಡಿಲ್ಲ. (ಕೈಯಿಂದ ಕಿವಿ ತಡಕುವರು, ಕಣಗಲೆ ಹೂ ಸಿಗುವುದು. ಮಂದಸ್ಮಿತರಾಗುವರು) ನಾವು ನಮ್ಮ ಸಂಸ್ಕೃತಿಯ ಘನ ವಿಜ್ಞಾನಿಗಳಿಂದ ವಿಶಿಷ್ಟವಾದ ನಾಮದ್ರವ್ಯವನ್ನು ಸಿದ್ಧಪಡಿಸಿದ್ದೇವೆ. ಒಮ್ಮೆ ಧರಿಸಿದರೆ ೧೨ ಗಂಟೆ ಅಳಿಸಿಹೋಗದು. (ತಮ್ಮ ಹಣೆಯ ಮೇಲಿನ ನಾಮವನ್ನು ನೀರಿನಿಂದ ಅಳಿಸಲು ಯತ್ನಿಸುವರು. ನಾಮ ಹೋಗುವುದಿಲ್ಲ, ತದ್ವಿರುದ್ಧವಾಗಿ ಇನ್ನೂ ಚೆನ್ನಾಗಿ ಹೊಳೆಯುವುದು. ವ್ಹಾ... ವ್ಹಾ... ಎಂದು ಎಲ್ಲರೂ ಉದ್ಗರಿಸುವರು). ಇಷ್ಟೇ ಅಲ್ಲ, ಈ ನಾಮವು ಫ್ಲೂರೆಸೆಂಟ್ ಕೂಡ ಆಗಿದೆ. ಇದು ಕತ್ತಲಲ್ಲೂ ಹೊಳೆಯುವುದು. ಇದನ್ನು ನೀವು ಈಗಾಗಲೇ ನೋಡಿರುವಿರಿ. ಈ ನಾಮದ ದಯೆಯಿಂದ ಕತ್ತಲಲ್ಲಿ ಯಾರಿಗೂ ಢಿಕ್ಕಿ ಹೊಡೆಯುವ ಪ್ರಮೇಯವೇ ಬಾರದು.

**ವಂದಿಮಾಗಧರಿಂದ :** ಸಚಿವರಿಗೆ ಬಹು ಪರಾಕ್, ನಾಮಕ್ಕೆ ಜಯವಾಗಲಿ, ಎಲ್ಲರಿಗೂ ನಾಮ ಬರಲಿ, ನಾಮದ ಸರ್ಕಾರಕ್ಕೆ ಬಹು ಪರಾಕ್.

**ಕ.ಸ.ಮು.ಸ.:** ಗೋಷ್ಠಿ ಮುಗಿಯಿತು, ನಮಸ್ಕಾರ.

**ಹಣೆಯ ಮೇಲೆ ಯಾವುದೇ ಮಾರ್ಕುಗಳಿಲ್ಲದ ಪ.ಕ:** ನಮ್ಮಲ್ಲಿ ಇನ್ನೂ ಪ್ರಶ್ನೆಗಳಿವೆ.

**ಕ.ಸ.ಮು.ಸ:** ತ್ರಿನಾಮಧಾರಿಗಳಾಗಿ ಬನ್ನಿರಿ, ಉತ್ತರಿಸುವೆ.

ಸಚಿವರು ಹೊರಟುಹೋಗುವರು.

**ಹೊರಗೆ:** ಯಾರಿಗ್ರೀ ಫ್ರೀನಾಮ... ಫ್ರೀನಾಮ... ಬರ್ರಿ ಬರ್ರಿ ಬೇಗ !

ಡವ್, ಡೊಯ್, ಡವ್ ಡೊಯ್, ಘೊಂ, ಘೊಂ, ಘೊಂ.

**ಡಾ॥ ತುಮಕೂರು ಚಂದ್ರಕಾಂತ**
ನಂ. ೭, ೧೪ನೇ ಅಡ್ಡರಸ್ತೆ, ಈಶ್ವರ ಬಡಾವಣೆ
ಮಹಾಲಕ್ಷ್ಮಿನಗರ ಎರಡನೇ ಹಂತ, ಬೆಂಗಳೂರು - ೫೬೦ ೦೮೬

ಎಚ್. ಎಸ್. ದೊರೆಸ್ವಾಮಿ

# ಗಾಂಧೀಜಿಯವರ 'ಹಿಂದ್ ಸ್ವರಾಜ್'ನ ಪ್ರಸ್ತುತತೆ

ಆಧುನಿಕತೆ ಭಾರತಕ್ಕೆ ಒಳ್ಳೆಯದೆಂದು ಯಾರಾದರೂ ಭಾವಿಸಿದ್ದರೆ ಅದು ತಪ್ಪು ಕಲ್ಪನೆ. ತಪ್ಪು ಗ್ರಹಿಕೆ. ನಾಗರಿಕತೆ ನೈತಿಕ ಅಧಃಪತನಕ್ಕೆ ಕಾರಣವಾಗಿದೆ. ಯಾವುದೇ ಅಪಮಾರ್ಗ ಅನುಸರಿಸಿರಲಿ, ಗುರಿ ಮುಟ್ಟುವುದು ಮುಖ್ಯ ಎಂದು ಭಾವಿಸುವವರಿಗೆ ಉತ್ತರ 'ಹಿಂದ್ ಸ್ವರಾಜ್' ಪುಸ್ತಕದಲ್ಲಿ ಸಿಗುತ್ತದೆ.

ಬ್ರಿಟಿಷರು ಭಾರತವನ್ನು ಅಪಮಾರ್ಗದಿಂದ ವಶಪಡಿಸಿಕೊಂಡರು. ಈ ಅವರ ಅನೀತಿಯೇ ಭಾರತೀಯರಿಗೆ ಬ್ರಿಟಿಷರನ್ನು ಹೊರಕ್ಕೆ ದಬ್ಬುವುದಕ್ಕೆ ಪ್ರೇರಣೆ ನೀಡಿದ್ದು. ಆದರೆ ಬ್ರಿಟಿಷರು ಅನುಸರಿಸಿದ ಮಾರ್ಗವನ್ನೇ ಭಾರತಕ್ಕೆ ಸ್ವಾತಂತ್ರ್ಯ ಪಡೆಯಲು ನಾವು ಬಳಸುವುದಾದರೆ ನಾವು ಇಂಗ್ಲಿಷರಿಲ್ಲದ ಬ್ರಿಟಿಷ್ ಆಡಳಿತವನ್ನು ಮುಂದುವರೆಸಿದಂತಾಗುತ್ತದೆ.

ಬ್ರಿಟಿಷರು ತಮ್ಮ ಆಡಳಿತವನ್ನು ಪರಿಣಾಮಕಾರಿಯಾಗಿ ನಿರ್ವಹಿಸುವ ಸಲುವಾಗಿಯೇ ರೈಲ್ವೆ ವ್ಯವಸ್ಥೆಯನ್ನು ಆರಂಭಿಸಿದರು. ರೈಲಿನಿಂದ ನಮಗಾದ ಲಾಭ ಎಂದರೆ ರೈತರು ಬೆಳೆದದ್ದನ್ನೆಲ್ಲ ವರ್ತಕರು, ಮಧ್ಯವರ್ತಿಗಳು, ಸರ್ಕಾರ ದೋಚಲು ಅವಕಾಶವಾದದ್ದು. ರೋಗರುಜಿನಗಳು ಹರಡಲೂ ರೈಲು ಕಾರಣವಾಯಿತು. ವಿಧ್ವಂಸಕರು, ಸಮಾಜ ಕಂಟಕರು ಪೊಲೀಸರ ಕೈಗೆ ಸಿಕ್ಕದೆ ತಪ್ಪಿಸಿಕೊಂಡು ಓಡಾಡಲು ಒಂದು ಸಾಧನವಾಯಿತು ರೈಲು. ಹಿಂದೆ ನಮ್ಮ ಪವಿತ್ರ ಕ್ಷೇತ್ರಗಳಿಗೆ ಜನ ನಡೆದು ಹೋಗುತ್ತಿದ್ದರು. ರೈಲು ಆರಂಭವಾದ ಮೇಲೆ ಯಾತ್ರಾರ್ಥಿಗಳಂತೆಯೇ ಅಧಿಕ ಸಂಖ್ಯೆಯಲ್ಲಿ ಜೇಬುಕಳ್ಳರು, ಕೊಲೆಗಡುಕರು, ದರೋಡೆ ಕೋರರೂ ಅಲ್ಲಿಗೆ ಧಾವಿಸುತ್ತಾರೆ. ಹೀಗಾಗಿ ತೀರ್ಥ ಕ್ಷೇತ್ರಗಳು ತಮ್ಮ ಪಾವಿತ್ರ್ಯತೆಯನ್ನೇ ಕಳೆದುಕೊಂಡಿವೆ.

ಆಸ್ಪತ್ರೆಗಳ ನಿರ್ಮಾಣವಾಯಿತು. ಆಸ್ಪತ್ರೆಗಳು ವೈದ್ಯರು ಇರದಿದ್ದರೆ ಪ್ರಕೃತಿ ಮನುಷ್ಯನಿಗೆ ಆರೋಗ್ಯದ ಬಗ್ಗೆ ಪಾಠ ಕಲಿಸುತ್ತಿತ್ತು. ಮಾನವ ತನ್ನ ಶರೀರದ ಮೇಲೆ, ಸ್ವಾಸ್ಥ್ಯದ ಮೇಲೆ ಹತೋಟಿ ಸಾಧಿಸುತ್ತಿದ್ದ. ಕೆಟ್ಟ ನಡತೆಯಿಂದ ದೂರವಿರುತ್ತಿದ್ದ. ಜನ ಈಗ ತಿನ್ನಬಾರದ್ದನ್ನು ತಿಂದು, ಕುಡಿಯಬಾರದ್ದನ್ನು ಕುಡಿದು ರೋಗ ಬರಿಸಿಕೊಳ್ಳುತ್ತಾರೆ. ಆಸ್ಪತ್ರೆ ಸೇರುತ್ತಾರೆ. ಆಸ್ಪತ್ರೆಗಳು ಪಾಪಕರ್ಮವನ್ನು ಪ್ರಚಾರ ಮಾಡುವ ಸಾಧನಗಳು. ವೈದ್ಯರು, ಆಸ್ಪತ್ರೆಗಳು ಜಾಸ್ತಿಯಾದ ಮೇಲೆ ಜನ ತಮ್ಮ ಆರೋಗ್ಯ ವಿಚಾರದ ಬಗ್ಗೆ ಅಜಾಗರೂಕರಾಗುತ್ತಿದ್ದಾರೆ. ಸಮಾಜದಲ್ಲಿ ಅನೈತಿಕತೆ ಹೆಚ್ಚುತ್ತಿದೆ. ಅದರ ಪರಿಣಾಮವಾಗಿ ರೋಗಗಳೂ ಹೆಚ್ಚುತ್ತಿವೆ. ಆಸ್ಪತ್ರೆಗಳೂ ಹೆಚ್ಚುತ್ತಿವೆ. ಮೂರನೆಯದಾಗಿ, ಗಾಂಧೀಜಿ ಯಂತ್ರೋದ್ಯಮದ ಕೆಡುಕನ್ನು 'ಹಿಂದ್ ಸ್ವರಾಜ್' ನಲ್ಲಿ ಪ್ರಸ್ತಾಪಿಸಿದ್ದಾರೆ.

ಪ್ರಧಾನಿ ನೆಹರು ಯಂತ್ರೋದ್ಯಮವನ್ನು ಬೃಹತ್ ಪ್ರಮಾಣದಲ್ಲಿ ಬೆಳೆಸುವ ಮೂಲಕ ಹಳ್ಳಿಗರ ಪಟ್ಟಣಿಗರ ನಿರುದ್ಯೋಗ ಸಮಸ್ಯೆಯನ್ನು ಪರಿಣಾಮಕಾರಿಯಾಗಿ ಬಿಡಿಸಬಹುದೆಂದು ಭಾವಿಸಿದರು. ಅದಕ್ಕಾಗಿ ಭಾರತಾದ್ಯಂತ ಬೃಹತ್ ಕೈಗಾರಿಕೆಗಳನ್ನು ಆರಂಭಿಸಲು ಸಂಕಲ್ಪ ಮಾಡಿದರು. ಗ್ರಾಮಗಳೇ ಪ್ರಧಾನವಾಗಿರುವ ಭಾರತದಲ್ಲಿ ಬೃಹತ್ ಕೈಗಾರಿಕೆಗಳು ಜನರ ನಿರುದ್ಯೋಗ ಸಮಸ್ಯೆಯನ್ನು ಬಗೆಹರಿಸಲಾರವು ಎಂದು ನೆಹರು ಅವರಿಗೆ ಗಾಂಧೀಜಿ ವಿಧವಿಧವಾಗಿ ಹೇಳಿದರು. ನೆಹರು ಅದಕ್ಕೆ ಬೆಲೆ ನೀಡಲಿಲ್ಲ. ನೆಹರು ಅವರ ಈ ಯೋಜನೆಯಿಂದ ಭಾರತದ ನಿರುದ್ಯೋಗ ಸಮಸ್ಯೆ ಬಗೆಹರಿಯಲಿಲ್ಲ. ಅದರ ಬದಲು ನಿರುದ್ಯೋಗ ಸಮಸ್ಯೆ ಉಲ್ಬಣಗೊಂಡಿತು.

'ಹಿಂದ್ ಸ್ವರಾಜ್'ನಲ್ಲಿ ಗಾಂಧೀಜಿ ತಮ್ಮ ವಿಚಾರಗಳನ್ನು ಶುದ್ಧವಾದ, ಆದರೆ ಕೋಪಾನಿಷ್ಟವಾದ ಒರಟು ಮಾತುಗಳಲ್ಲಿ ವ್ಯಕ್ತಮಾಡಿದ್ದಾರೆ.

ಬ್ರಿಟನ್ನಿನ ಪಾರ್ಲಿಮೆಂಟನ್ನು ಬಂಜೆಗೆ, ವೇಶ್ಯೆಗೆ ಹೋಲಿಸಿದ್ದಾರೆ. 'ಮದರ್ ಆಫ್ ಪಾರ್ಲಿಮೆಂಟ್' ಎಂಬ ಖ್ಯಾತಿ ಪಡೆದ ಬ್ರಿಟಿಷ್ ಪಾರ್ಲಿಮೆಂಟ್‌ನಲ್ಲಿ ಒತ್ತಡ ಹೇರದೆ ಯಾವ ಒಳ್ಳೆಯ ಕೆಲಸವೂ ನಡೆಯುವುದಿಲ್ಲ ಎನ್ನುತ್ತಾರೆ ಗಾಂಧೀಜಿ.

ಭಾರತ ಸ್ವಾತಂತ್ರ್ಯ ಪಡೆದಿರಬಹುದು. ಆದರೆ ಈ ದುರಾಸೆ ಈ ಸ್ವಾರ್ಥದಿಂದ ನಮ್ಮ ನಾಯಕರು. ಪ್ರಜೆಗಳು ಹೊರಬರದಿದ್ದರೆ, ನಾವು ನಿಜವಾದ ಸ್ವಾತಂತ್ರ್ಯವನ್ನು ಗಳಿಸಿದಂತಾಗುವುದಿಲ್ಲ.

ಯಂತ್ರೋದ್ಯಮ, ರೈಲು ವ್ಯವಸ್ಥೆ, ಆಸ್ಪತ್ರೆಗಳು, ವೈದ್ಯಕೀಯಸೇವೆ, ಆಧುನಿಕ ಶಿಕ್ಷಣ ನೀತಿ,

# ಸಾದರ ಸ್ವೀಕಾರ

**ಉಷೋದಯ** (ಕಾದಂಬರಿ) — ತೆಲುಗು ಮೂಲ : ಓಲ್ಗ
ಕನ್ನಡಕ್ಕೆ : ಮಿಸ್ ಸಂಪತ್
ಪುಟ : ೧೦೮ — ಬೆಲೆ : ರೂ. ೬೫

**ದುಗುಡ ಕಳೆಯುವ ಮಾರ್ಗ** (ಆಪ್ತ ಸಲಹೆ – ಸಮಾಧಾನ) — ಶಾಂತಾ ನಾಗರಾಜ್
ಪುಟ : ೧೫೨ — ಬೆಲೆ : ರೂ. ೯೦

**ಚುಕ್ಕಿ ಚಂದ್ರಮ** ('ಜನಪ್ರಿಯ ವಿಜ್ಞಾನ' ಕವನ ಸಂಕಲನ) — ಎಸ್. ಮಂಜುನಾಥ
ಪುಟ : ೬೪ — ಬೆಲೆ : ರೂ. ೪೦

ಮೇಲಿನ ಮೂರು ಕೃತಿಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ
ಬೆಂಗಳೂರು - ೫೬೦೦೦೧

**ಅನಾವರಣ** (ಕಾದಂಬರಿ) — ಟಿ. ಎನ್. ಷಣ್ಮುಖ
ಪುಟ : ೧೫೩ — ಬೆಲೆ : ರೂ. ೮೦
**ಚಾರ್ವಾಕ ಪ್ರಕಾಶನ**, ವಿಶ್ವನಾಥನಹಳ್ಳಿ, ಕಾಳಘಟ್ಟ ಅಂಚೆ, ಹೊಳಲ್ಕೆರೆ ತಾಲೂಕು, ಚಿತ್ರದುರ್ಗ ಜಿಲ್ಲೆ

**ಯಶೋಧರೆಯ ಶೋಕಗಾಥೆ** — ಡಾ|| ಎಂ. ಬಿ. ಹೂಗಾರ
ಪುಟ : ೮೨ — ಬೆಲೆ : ರೂ. ೬೦
**ಸಂಘರ್ಷ ಸಾಹಿತ್ಯ ಕೂಟ**, ರಾಯಬಾಗ

**ಮುಂಡರಗಿ : ಬ್ರಿಟೀಷ್ ವಿರೋಧಿ ಹೋರಾಟ** — ಹು. ಬಾ. ವಡ್ಡಟ್ಟಿ
ಪುಟ : ೫೬ — ಬೆಲೆ : ರೂ. ೩೦
**ಲಡಾಯಿ ಪ್ರಕಾಶನ**, ೨೧, ಪ್ರಸಾದ್ ಹಾಸ್ಟೆಲ್,
ಗದಗ - ೫೮೨ ೧೦೧

**ಪರಿಮಳವಿಲ್ಲದ ಹೂಗಳ ಮಧ್ಯೆ** (ಕವನ ಸಂಕಲನ) — ದೀಪಾ ಹಿರೇಗುತ್ತಿ
ಪುಟ : ೮೦ — ಬೆಲೆ : ರೂ. ೪೫
**ಸುಮುಖ ಪ್ರಕಾಶನ**, ನಂ. ೧೭೪ಇ/೨೮, ೧ನೇ ಮಹಡಿ
೧ನೇ ಮುಖ್ಯರಸ್ತೆ, ಮಾಗಡಿ ರಸ್ತೆ ಟೋಲ್‌ಗೇಟ್, ವಿದ್ಯಾರಣ್ಯನಗರ
ಬೆಂಗಳೂರು - ೫೬೦ ೦೨೩

**ಪವರ್‌ಫುಲ್ ಲೇಡಿ** (ಉದ್ಯಮಶೀಲ ಮಹಿಳೆಯರ ಯಶೋಗಾಥೆ) — ಡಿ. ಯಶೋದಾ
ಪುಟ : ೨೩೬ — ಬೆಲೆ : ರೂ. ೧೨೦
**ವಸಂತ ಪ್ರಕಾಶನ**, ನಂ. ೩೬೦, ೧೦ 'ಬಿ' ಮೇನ್, ಜಯನಗರ ೩ನೇ ಬ್ಲಾಕ್ (ಕಾಸ್ಮೋಪೊಲಿಟನ್ ಕ್ಲಬ್ ರಸ್ತೆ ಎದುರು), ಬೆಂಗಳೂರು - ೫೬೦ ೦೧೧

**ಕಾವ್ಯ ಡಿಂಡಿಮ** (ಹನಿಗವನ, ಚುಟುಕು, ಕವನಗಳ ಸಂಕಲನ)
ಕೊಡಗಹಳ್ಳಿ ಪುರುಷೋತ್ತಮ
ಪುಟ : ೧೨೦ — ಬೆಲೆ : ರೂ. ೧೦೦
**ಪುರುಷೋತ್ತಮ ಪ್ರಕಾಶನ**, ಶ್ರೀರಾಮ ನಿಲಯ ಅರಕೆರೆ
ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ಜಿಲ್ಲೆ

**ಮಾತು ಮೌನದ ನಡುವೆ** (ಕವನಗಳು) — ಆರ್. ಚೌಡರೆಡ್ಡಿ
ಪುಟ : ೭೨ — ಬೆಲೆ : ರೂ. ೪೫
ಕಾವ್ಯಶ್ರೀ ಪ್ರಕಾಶನ, ಪನಸಮಾಕನಹಳ್ಳಿ, ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲೆ – ೫೬೩ ೧೩೫

**ಪರಮಾನುಭಾವದೆಡೆಗೆ** (ಸ್ಮರಣ ಗ್ರಂಥ) — ವಣ್ಣಯ್ಯ ಆಕ್ಕೂರಮಠ
ಪುಟ : ೧೫೨ — ಬೆಲೆ : ರೂ. ೮೦
ಅನುಷ್ಕಾ ಪ್ರಕಾಶನ, 'ವಸುಂಧರಾ' ಪ್ಲಾಟ್ ನಂ. ೧೭೮, ೩ನೇ ಮುಖ್ಯರಸ್ತೆ, ಕುಮಾರೇಶ್ವರ ನಗರ, ಬೆಳಗಾಂ ರಸ್ತೆ ಧಾರವಾಡ - ೫೮೦ ೦೦೮

**ಕಂದಮಾಲ್‌ನಿಂದ ಕರಾವಳಿಯವರೆಗೆ** [illegible]
ಪ್ರಜಾತಾಂತ್ರಿಕ ಜನರ ವೇದಿಕೆ
ಪುಟ : ೭೨ — ಬೆಲೆ : ರೂ. ೨೫
ಪ್ರಜಾತಾಂತ್ರಿಕ ಜನರ ವೇದಿಕೆ, ೮/೩೦೨, [illegible], ಬೆಂಗಳೂರು - ೫೬೦ [illegible]

ಇವುಗಳೆಲ್ಲ ಬ್ರಿಟಿಷ್ ಪ್ರಭುತ್ವದ ಸತ್ಫಲಗಳು ಎಂದು ಕಲಿತ ಭಾರತೀಯರು ಭಾವಿಸಿದ್ದರು. ಆದರೆ ಗಾಂಧೀಜಿ ಇವುಗಳನ್ನೆಲ್ಲ ಗಂಡಾಂತರಗಳು ಎಂದು ತಿಳಿಸಿದರು. ಅದರ ಫಲವಾಗಿ ಬರೆದುದೇ 'ಹಿಂದ್ ಸ್ವರಾಜ್'. ದುರದೃಷ್ಟವೆಂದರೆ, ಗಾಂಧೀಜಿಯವರು ತಮ್ಮ ಗುರುವೆಂದು ಭಾವಿಸಿದ್ದ ಗೋಪಾಲಕೃಷ್ಣ ಗೋಖಲೆಯವರು ಕೂಡ 'ಹಿಂದ್' ಸ್ವರಾಜ್'ನಲ್ಲಿದ್ದ ಅಭಿಪ್ರಾಯಗಳನ್ನು ಒಪ್ಪಲಿಲ್ಲ. ಗಾಂಧೀಜಿ ಜವಾಹರಲಾಲರಿಗೆ 'ಹಿಂದ್ ಸ್ವರಾಜ್'ನಲ್ಲಿ ಬರೆಯಲಾಗಿದ್ದ ವಿಚಾರಗಳು ಸತ್ಯವಾದವು; ಆ ಮಾರ್ಗದಲ್ಲೇ ಸಾಗಬೇಕು ಎಂದರು. ನೆಹರು ಅದಕ್ಕೆ ಒಪ್ಪಲಿಲ್ಲ.

ನಮ್ಮ ನಿಜವಾದ ವೈರಿ ಬ್ರಿಟಿಷರಲ್ಲ, ಭೌತಿಕ ಸಂಪತ್ತು ಮತ್ತು ಸೌಲಭ್ಯಗಳು ನಮಗೆ ಹೆಚ್ಚಿನ ಸುಖ ನೀಡಬಲ್ಲದು ಎಂಬ ವಿಚಾರವೇ ನಮ್ಮ ನಿಜವಾದ ಶತ್ರು.

ಗಾಂಧೀಜಿ ತತ್ವಗಳಿಗಿಂತ ಹೆಚ್ಚಾಗಿ ಅದರ ಅನುಷ್ಠಾನ ಮುಖ್ಯ ಎನ್ನುತ್ತಿದ್ದರು. ಮಾತಿಗಿಂತ ಕೃತಿಗೆ ಮಹತ್ವ ನೀಡುತ್ತಿದ್ದರು. ತತ್ವಾನುಷ್ಠಾನ ಮಾಡುವ ಮೂಲಕ ಗಾಂಧೀಜಿ ದೊಡ್ಡವರಾಗಿ ಬೆಳೆದರು. ತರ್ಕಕ್ಕಿಂತ ಅವರಿಗೆ ಸೃಜನಾತ್ಮಕ ಜೀವನ ನಡೆಸುವುದರಲ್ಲೇ ಹೆಚ್ಚು ಶ್ರದ್ಧೆ ಇತ್ತು.

ಗಾಂಧೀಜಿಯವರ ಕೆಲವು ಟೀಕೆಗಳಾದರೂ ಅವರು ಭವಿಷ್ಯ ನುಡಿದಿದ್ದಂತೆ ನಿಜವಾಗಿವೆ.

ಹಿಂದೆ ಜನ ಪ್ರಾಣಿಗಳ ಚರ್ಮದಿಂದ ತಮ್ಮ ಮೈಮುಚ್ಚಿಕೊಳ್ಳುತ್ತಿದ್ದರು. ಇಂದು ದೊಗಳೆ ಷರಾಯಿ ಬಂದಿದೆ. ಹಿಂದೆ ಅವರು ತಮ್ಮ ಭುಜಗಳನ್ನೇ ಆಯುಧವಾಗಿ ಉಪಯೋಗಿಸುತ್ತಿದ್ದರು ಈಗ ಅವರ ಭುಜದ ಮೇಲೆ ಬಂದೂಕಗಳು ಬಂದಿವೆ. ಮಚ್ಚು, ಲಾಂಗುಗಳು ಬಂದಿವೆ. ಅಂದು ಜನ ಬಂಡಿಯಲ್ಲಿ ಪ್ರಯಾಣ ಮಾಡುತ್ತಿದ್ದರು. ಈಗ (ಬುಲೆಟ್ ಟ್ರೈನ್) ಬಂದಿದೆ. ಒಂದು ಗುಂಡಿ ಒತ್ತಿದರೆ ಸಾಕು, ತಾವು ತೋರಿದ ಪದಾರ್ಥ ತಮ್ಮ ಮನೆಗೆ ಬಂದು ಬೀಳುತ್ತದೆ. ಹಿಂದೆ ರೋಗ ಕಡಿಮೆ ಇತ್ತು, ತಾವು ಹಿಂದೆ ಕನಸಿನಲ್ಲಿಯೂ ಕಂಡಿರಲಾರದ ಭಯಾನಕ ರೋಗಗಳು ಈಗ ಕಾಣಿಸಿಕೊಂಡಿವೆ. ಅವುಗಳ ನಿವಾರಣೆಗೆ ಸಂಶೋಧನೆಗಳು ನಡೆಯುತ್ತಿವೆ. ಆಸ್ಪತ್ರೆಗಳು ಹೆಚ್ಚುತ್ತಿವೆ. ವೈದ್ಯರ ಪಡೆಯೂ ಬೆಳೆದು ನಿಂತಿದೆ. ಧರ್ಮರಹಿತ ನಾಗರಿಕತೆ ಬೆಳೆಯುತ್ತದೆ. ಸ್ವಚ್ಛಂದತೆ ಬೆಳೆಯುತ್ತಿದೆ. ಇಂಗ್ಲಿಷ್ ಬಲ್ಲ ಜನರ ಮೇಲೆ ಇದರ ಪ್ರಭಾವ ಬಲವಾಗಿದೆ. ಜನ ಈಗ ಅರೆಹುಚ್ಚರಾಗಿದ್ದಾರೆ. ಇದನ್ನು ಸೈತಾನಿ ನಾಗರಿಕತೆ ಎಂದು ಗಾಂಧೀಜಿ ಕರೆದಿದ್ದಾರೆ. ಎರಡನೇ ಮಹಾಯುದ್ಧದಲ್ಲಿ ಅಣು ಬಾಂಬಿನ ಆವಿಷ್ಕಾರವಾಯಿತು. ಯೂರೋಪ್ ಉತ್ತರ ಆಫ್ರಿಕಾ, ಪೂರ್ವ ಮತ್ತೆ ದಕ್ಷಿಣ ಪೂರ್ವ ಏಷ್ಯಾಗಳಲ್ಲಿ ೪ ಕೋಟಿ ಜನ ಹತರಾದರು. ನೂರಾರು ಊರುಗಳು ನಾಶವಾದವು. ವಿನಾಶಕಾರಿ ಅಸ್ತ್ರಗಳನ್ನೂ ಬಳಸಲಾಯಿತು. ಅಮೇರಿಕನ್ನರು ಜಪಾನಿನ ಎರಡು ಪಟ್ಟಣಗಳ ಮೇಲೆ ಪ್ರಯೋಗಾರ್ಥವಾಗಿ ಬಾಂಬುಗಳನ್ನು ಎಸೆದಾಗ ಲಕ್ಷಾಂತರ ಸಂಖ್ಯೆಯಲ್ಲಿ ಜನರು ಹತರಾದದ್ದು ಒಂದು ದುರಂತ.

ಯುದ್ಧದ ಕೊನೆಯ ಮೂರು ವರ್ಷಗಳಲ್ಲಿ ಜರ್ಮನಿಯಲ್ಲಿದ್ದ ೬೦ ಲಕ್ಷ ಯಹೂದ್ಯರು, ಜಿಪ್ಸಿಗಳು, ಸಲಿಂಗ ಕಾಮಿಗಳು ಹಾಗೂ ಮನೋವಿಕಲ್ಪರು. ಗ್ಯಾಸ್ ಚೇಂಬರ್‌ನಲ್ಲಿ ಭಸ್ಮವಾಗಿ ಹೋದರು.

ಮುಂಚೂಣಿಯಲ್ಲಿರುವ ರಾಷ್ಟ್ರಗಳು ಪದೇ ಪದೇ ಯುದ್ಧಗಳನ್ನು ನಡೆಸಿ ನರಮೇಧವನ್ನು ಮಾಡುತ್ತಿರುವಾಗ ಈ ನವ ನಾಗರಿಕತೆಯನ್ನು ಸೈತಾನೀ ನಾಗರಿಕತೆ ಎಂದು ಗಾಂಧೀಜಿ ಕರೆದದ್ದರಲ್ಲಿ ತಪ್ಪೇನು ?

ನದಿಯ ನೀರಿನ ಪ್ರದೂಷಣೆ, ಬೆಳೆಗೆ ವಿಷ ಉಣಿಸುವುದು, ಭೂಮಿಯ ಒಳಗಿರುವ ಎಲ್ಲ ಖನಿಜಗಳನ್ನು ತೆಗೆದು ಬರಿದುಮಾಡಿ ಮುಂದಿನ ಪೀಳಿಗೆಯವರಿಗೆ ಅನ್ಯಾಯ ಎಸಗುವುದು, ಬೆಟ್ಟಗಳನ್ನು ಕರಗಿಸುವುದು, ಅರಣ್ಯ ನಾಶಮಾಡುವುದು, ಸೂರ್ಯನ ಸುತ್ತ ಇರುವ ಓಜೋನ್ ಪದರವನ್ನು ಕಾರ್ಖಾನೆಗಳು ಉಗುಳುವ ರಾಸಾಯನಿಕ ಅನಿಲಗಳು ತಿಂದುಹಾಕುತ್ತಿರುವುದು, ಆಮ್ಲಮಳೆ ಅಲ್ಲಲ್ಲಿ ಆಗುತ್ತಿರುವುದು, ಸೂರ್ಯನ ಕಿರಣಗಳು ನೇರವಾಗಿ ಭೂಮಂಡಲಕ್ಕೆ ತಲಪಿ ವಾತಾವರಣದ ಉಷ್ಣಾಂಶವನ್ನು ಅಧಿಕಗೊಳಿಸುವುದು – ಇವೆಲ್ಲ ಅಭಿವೃದ್ಧಿಯ ಹೆಸರಿನಲ್ಲಿ ನಡೆಯುತ್ತಿವೆ. ಮಾನವನ ನಾಶಕ್ಕೆ ನಮ್ಮ ಉದ್ಯೋಗಪತಿಗಳು ಕಾರಣರಾಗುತ್ತಿದ್ದಾರೆ. ಇವೆಲ್ಲವೂ ಸೈತಾನನ ಕೃತಿಗಳೇ ಅಲ್ಲವೇ ? ನಮ್ಮ ನಾಗರಿಕತೆಯ ಕೊಡುಗೆ ಇದಲ್ಲವೇ ? ಭಾರತದಲ್ಲಿ ಆಧುನಿಕತೆಯ ಹೆಸರಿನಲ್ಲಿ ಹಸಿವು, ಬಡತನ ಹೆಚ್ಚುತ್ತಿದೆ. ಸೇವೆಗಿಂತ ಸ್ವಾರ್ಥವೇ ಮುಖ್ಯವಾಗಿದೆ. ಆದ್ದರಿಂದ ನಾವು 'ಹಿಂದ್ ಸ್ವರಾಜ್' ನಲ್ಲಿರುವ ವಿಷಯಗಳಿಗೆ ಗಮನ ನೀಡಬೇಕಾಗಿದೆ.

ಎಚ್. ಎಸ್. ದೊರೆಸ್ವಾಮಿ
ನಂ. ೭೬೧, ೩೭ನೇ ಕ್ರಾಸ್, ೧೮ನೇ ಮುಖ್ಯ ರಸ್ತೆ, 'ಟಿ' ಬ್ಲಾಕ್
ಜಯನಗರ, ಬೆಂಗಳೂರು - ೫೬೦ ೦೪೧

# ಮಾತಿನ ತೊಡರು ಮತ್ತು ಭಾಷೆ

ನಡೆಯಲ್ಲಿ ಎಡವುವುದು ಅಪರೂಪ ಅನ್ನುವಷ್ಟೇ ಸಾಮಾನ್ಯ ಮಾತಿನಲ್ಲಿ ತೊಡರನ್ನು ಕೇಳುವುದು ಅಥವಾ ಅನುಭವಿಸುವುದೂ ಅಪರೂಪ. ನಡೆಯ ತೊಂದರೆಯಂತೆಯೇ ನುಡಿಯ ತೊಂದರೆಯನ್ನು ನೋಡುಗರೂ ಕೇಳುಗರೂ ಕ್ಷಣಿಕವಾಗಿ ಪರಿಚಯಿಸಿಕೊಂಡು ಸುಮ್ಮನಾಗುತ್ತಾರೆ. ಆದರೆ ಅನುಭವಿಸುವವರಿಗೇ ಆ ತೀವ್ರತೆ ಮತ್ತು ತೊಂದರೆ ಕಾಡುವುದು ಮತ್ತು ಪ್ರಭಾವಿಸುವುದು. ಇವುಗಳ ಪರಿಚಯ, ಅನುಭವ ಎಲ್ಲರಿಗೂ ಇದ್ದರೂ ಮಾತಿನ ತೊಂದರೆ ಏಕೆ, ಹೇಗೆಂದು ವಿಜ್ಞಾನಿಗಳನ್ನೊಳಗೊಂಡು ಎಲ್ಲರಿಗೂ ಅಸ್ಪಷ್ಟ. ಮಾತಿನ ತೊಂದರೆಗಳನ್ನು ಅರಿಯುವುದು ಅಂದರೆ ಮನುಷ್ಯನ ಮಿದುಳನ್ನೂ ಮನಸ್ಸನ್ನೂ ಅರ್ಥಮಾಡಿಕೊಳ್ಳುವ ಕೆಲಸದಂತೆಯೇ ಆಗುತ್ತದೆ. ಆದ್ದರಿಂದ ಅಸಂಪೂರ್ಣ.

ಮಾತಿನಲ್ಲಿ ತಡೆಯನ್ನು ತೊಡರನ್ನು ಅನುಭವಿಸದ ವ್ಯಕ್ತಿಯೇ ಇಲ್ಲವೆನ್ನಬಹುದು. ಸಿಟ್ಟಿನಲ್ಲಿ, ತಳಮಳದಲ್ಲಿ ಎಲ್ಲರೂ ಯಾವಾಗಲಾದರೂ ಮಾತಿನಲ್ಲಿ ತಡವರಿಸಿರುತ್ತಾರೆ. ಮಕ್ಕಳ ಮೊದಲ ಮಾತಂತೂ ತೊದಲ ಮಾತಾದರೂ ಪರವಾಗಿಲ್ಲ, ಅದು ಕೇಳುಗರಿಗೆ ಮುದ ನೀಡುತ್ತದೆ. ಆದರೆ ಮಗು ಬೆಳೆದ ಮೇಲಲ್ಲ. ತುಂಬಿದ ಸಭೆಯಲ್ಲಿ ಮೊದ ಮೊದಲ ಸಲ ಮಾತಾಡುವವರಂತೂ ಮುಗ್ಗರಿಸಬಹುದು. ನಮ್ಮ ಸುತ್ತ ಇರುವ ಜನರಲ್ಲಿ ಉಗ್ಗಿನ ತೊಂದರೆಯಿರುವವರು ಒಬ್ಬರಾದರೂ ಇದ್ದೇ ಇರುತ್ತಾರೆ. ಮಾತಿನ ತೊಂದರೆಗಳು ಅಷ್ಟು ಸಾಮಾನ್ಯವಾಗಿ ಕಂಡುಬರುವಂತಹವು. ಈ ಉದಾಹರಣೆಗಳಲ್ಲಿ ನಮಗೆ ಅವು ದೈಹಿಕ ತೊಂದರೆಗಳು ಎಂದು ಕಾಣಬರುವುದಿಲ್ಲ. ದೈಹಿಕವಾಗಿ ಅಂದರೆ ನರ ಸಂಬಂಧಿತವಾಗಿ ಕಾಯಿಲೆ/ತೊಂದರೆಯಾಗಿ ಹತ್ತಾರು ರೀತಿಗಳಲ್ಲಿ ಮಾತಿನಲ್ಲಿ ಅಸ್ಪಷ್ಟತೆ ಬಂದು ತೋರುತ್ತದೆ. ಆ ವಿಷಯಗಳಲ್ಲಿ ತೊಂದರೆಯ ಕಾರಣ ಸ್ಪಷ್ಟ.

ಸಾಮಾನ್ಯತೆ ಅನ್ನುವುದು ಒಂದು ಜಿಜ್ಞಾಸೆಯ ವಿಚಾರ. ತೊಂದರೆ ಇದ್ದಾಗಲೆಲ್ಲಾ ನಾವು ಸಾಮಾನ್ಯತೆಯನ್ನು ಬಯಸುತ್ತೇವೆ. ಉದಾಹರಣೆಗೆ ಆರೋಗ್ಯ. ಸಾಮಾನ್ಯತೆಯ ಬಗ್ಗೆ ಮಾತನಾಡಿದರೆ ಅದು ಏನು ಅನ್ನುವುದಕ್ಕಿಂತ ಏನು ಅಲ್ಲ ಅನ್ನುವುದನ್ನು ಸುಲಭವಾಗಿ ಹೇಳಬಹುದು. ಮನುಷ್ಯರ ಬಗ್ಗೆ ಹೇಳಹೊರಟಾಗಲಂತೂ ವಿಪರೀತಗಳನ್ನುಳಿದದ್ದೇ ಸಾಮಾನ್ಯತೆ ಅನ್ನಬೇಕಾಗುತ್ತದೆ. ಅಸಾಮಾನ್ಯವಾದದ್ದನ್ನು ಬಿಟ್ಟು ಉಳಿದದ್ದೇ ಸಾಮಾನ್ಯ ಅನ್ನುವುದು ಮಾತಿನ ವಿಚಾರದಲ್ಲಿ ಸರಿ. ಸಿಟಿ ಬಸ್ಸಿನಂತಹ, ಮಾರ್ಕೆಟ್ಟಿನಂತಹ ಜಾಗಗಳಲ್ಲಿ ಬೇರೆಯವರು ಏನು ಮಾತನಾಡುತ್ತಾರೆಂದು ಯಾರೂ ಕಿವಿಗೊಟ್ಟು ಆಲಿಸುವುದಿಲ್ಲ. ಆದರೆ ಯಾರ ಮಾತಿನಲ್ಲಾದರೂ ತೊಂದರೆ ಕಂಡುಬಂದಲ್ಲಿ ಕೇಳುಗರ ಕಿವಿ ನೆಟ್ಟಗಾಗುತ್ತದೆ. ಬೇಡದಿದ್ದರೂ ಅವರ ಮಾತು ಕಿವಿಗೆ ಬಿದ್ದಂತೆ ಆಗುತ್ತದೆ. ಮಾತನ್ನು ಪಾರದರ್ಶಕವೆನ್ನುತ್ತೇವೆ.

> ಭಾಷೆಗಳು ತಮ್ಮದೇ ಆದ ನೀತಿ ನಿಯಮಗಳನ್ನು ಹಾಕಿಕೊಳ್ಳುತ್ತವೆ. ಮಾತು ಸಾಮಾನ್ಯವಾಗಿ ಈ ನಿಯಮಗಳಡಿಯಲ್ಲೇ ಸಾಗುತ್ತದೆ. ತೊಡರಿದಾಗ, ಉಗ್ಗಿದಾಗ ಈ ನಿಯಮವನ್ನು ಮೀರಿದಂತೆ ಶಬ್ದಗಳು ಮಾತಿನಲ್ಲಿ ಬೇರೆ ರೀತಿಯಾಗಿ ಬಂದುಬಿಟ್ಟಿರುತ್ತವೆ. ಅಂದರೆ ಮಾತಿನ ಹುಟ್ಟಿನ ಮಟ್ಟದಲ್ಲಿಯೇ ಈ ತೊಂದರೆ ಆಗಿಬಂದಿರಬೇಕೆಂಬ ಒಂದು ಅಭಿಪ್ರಾಯವೂ ಇದೆ. ಇದು ನಿಜವೇ ಆದಲ್ಲಿ ಈ ಮಾತಿನ ತೊಂದರೆಗೆ ಉತ್ತರ ಮಾತಿನ ಆಯೋಜನೆ – ಅಂದರೆ ಮಿದುಳು / ಮನಸ್ಸಿನಲ್ಲಾಗುವ ಆಯೋಜನೆಯ ಮಟ್ಟದಲ್ಲಿ ಆಗಬೇಕೇ ಹೊರತು ಶಬ್ದಗಳು ನಮಗೆ ತೋರುವಂತೆ ಬಾಯಿಯ ಮಟ್ಟದಲ್ಲಿ ಅಲ್ಲ.

ಡಾ|| ಜಿ. ಪುರುಷೋತ್ತಮ

ಶಬ್ದಗಳು ಹೇಗೆ ಹೊರಡುತ್ತವೆ. ಪದ ಯಾವ ರೀತಿ ಇದೆ. ಪದಗಳು ಎಷ್ಟು, ಯಾವ ರೀತಿ ಹೇಳಿದರು, ಈ ವಿಷಯಗಳು ನಮ್ಮ ಅರಿವಿಗೆ ಬರದೆ ಆಡುವವರ ಮಾತು ಅರ್ಥವಾಗುವುದಷ್ಟೇ ಅಲ್ಲದೆ ನಾವು ಅವರ ಜೊತೆ ಮಾತಿನ ವ್ಯವಹಾರವಲ್ಲಿ ಮುಂದುವರಿಯುತ್ತೇವೆ. ಮಾತನಾಡುವ ವ್ಯಕ್ತಿಯಲ್ಲಿ ಮಾತಿನ ತೊಂದರೆಯಿದ್ದಲ್ಲಿ ಆದರೆ, ಅವರಾಡುವ ಮಾತಿನ ಅರ್ಥಕ್ಕೂ ಮೊದಲೇ ನಮಗೆ ಅವರ ಮಾತಿನ ವಿಶೇಷತೆ ಎದ್ದು ತೋರುತ್ತದೆ. ನಂತರವೇ ನಾವು ಅವರ ಮಾತನ್ನು ಅರ್ಥಮಾಡಿಕೊಂಡು ಮುಂದೆ ವ್ಯವಹರಿಸುವ ಗೋಜಿಗೆ ಹೋಗುವುದು.

ಮಾತಿನಲ್ಲಿ ಯಾವುದೇ ಬಗೆಯ ತೊಡರು ಉಂಟಾಗಲಿ ನಮ್ಮ ಗಮನ ಆ ಕಡೆಗೆ ಹರಿಯುತ್ತದೆ. ನಾವೇ ಮಾತನಾಡುವಾಗ ತೊಡರಿದಾಗಲೂ ಅದು ನಮ್ಮ ಅರಿವಿಗೆ ಬಂದು ಆಭಾಸವೆನಿಸುತ್ತದೆ, ಮುಜುಗರ ಉಂಟಾಗುತ್ತದೆ. ಈ ಆಭಾಸ, ಮುಜುಗರ ಇವು ಯಾವಾಗಲೂ ಹಿತವೆನ್ನಿಸುವ ಅನುಭವಗಳಲ್ಲ, ಒಲ್ಲದ ಅನಿಸಿಕೆಗಳು. ನಮ್ಮಲ್ಲಿ ಹೊಸ ಉಡುಗೆ ತೊಡುಗೆಯಂತಹ ಸಂಭ್ರಮದ ಮನಸ್ಸಿದ್ದಾಗ ಬೇರೆಯವರ ಗಮನ ಬಿದ್ದಲ್ಲಿ ಅದು ಹಿತಕರವಾಗಿರುತ್ತದೆಯೇ ಹೊರತು ಮುಜುಗರವಾಗಿ ಕಾಣಬರುವುದಿಲ್ಲ. ಐಬು ಇದ್ದಾಗ ಅದು ಸಂಭ್ರಮಕ್ಕೆ ವಿರುದ್ಧವಾಗಿ ಕ್ಷಣಿಕವಾದರೂ ಭಿನ್ನತೆಯ ಭಾವವನ್ನು ಹುಟ್ಟಿಸುತ್ತದೆ. ಆ ಕಡೆಗೆ ಗಮನ ಬೇಡದ್ದು ಅನ್ನಿಸುತ್ತದೆ. ಈ ವಿಚಾರ ಎಲ್ಲ ರೀತಿಯ ಮಾತಿನ ತೊಂದರೆಯುಳ್ಳವರಿಗೂ ಕಾಡಿಸುವಂತಹದ್ದು ಬಹಳ ಮುಖ್ಯವಾದ್ದು. ಇದನ್ನು ಕಡೆಗಣಿಸುವ ಅಥವಾ ನಿವಾರಿಸುವಷ್ಟು ಸುಲಭವಾದ ಸಮಾಧಾನಕರ ವಿಧಾನಗಳು ನಮಗಿನ್ನೂ ದೊರಕಿಲ್ಲ. ಅಂದರೆ, ಈ ತೊಂದರೆಯ ಪ್ರದರ್ಶನ ಪ್ರತಿ ಸಲವೂ ಅಹಿತ ಭಾವನೆಯನ್ನು ತಂದೊಡ್ಡುವುದು ಸಾಮಾನ್ಯವಾಗಿ ವ್ಯಕ್ತಿತ್ವಕ್ಕೇ ಕುಂದು ತರುವಂಥ ವಿಚಾರವಾಗಿಬಿಡುತ್ತದೆ.

ಮಾತಿನ ತೊಡರು ಸಹಜವಾಗಿಯೇ ಆಗಲಿ, ಅಸಹಜವಾಗಿಯೇ ಆಗಲಿ, ವೈಜ್ಞಾನಿಕವಾಗಿ ಅದರ ಮಾನಸಿಕ ನೆಲೆ ನಮಗಿನ್ನೂ ಸರಿಯಾಗಿ ಅರಿವಾಗಿಲ್ಲ. ತೊಂದರೆ ಏನೂ ಇಲ್ಲ ಅನ್ನುವವರ ಮಾತಿನಲ್ಲೂ ಅಪರೂಪಕ್ಕಾದರೂ ತೊಡರು ಬಂದು ಅವರಿಗಾದರೂ ತೋರಬಹುದು. ಆದರೆ ಉಗ್ಗು ಒಂದು ತೊಂದರೆಯಾಗಿ ನಮಗೆಲ್ಲ ಪರಿಚಿತವೇ ಸರಿ. ಮಾತಿನ ಬೆಳವಣಿಗೆಯಲ್ಲಿಯೇ ತೊಂದರೆಯಿರುವ ಬುದ್ಧಿಮಾಂದ್ಯ ಮಕ್ಕಳಲ್ಲೂ ಮಾತಿನ ತೊಡರು ಹೆಚ್ಚು ಕಡಿಮೆ ಸಾಮಾನ್ಯ ಅನ್ನುವಷ್ಟು ಹೆಚ್ಚು ಜನರಿಗೆ ಇರುತ್ತದೆ. ಹಲವಾರು ರೀತಿಯ ನರದೋಷಗಳ ಜೊತೆಗೆ ಮಾತಿಗೂ ತೊಂದರೆಯಾಗಿ ತೊಡರು ಕಂಡುಬರುತ್ತದೆ. ಹೀಗೆ ಈ ಕುಂದು ಹಲವಾರು ಕಾರಣಗಳಿಂದ ಉಂಟಾಗಿರಬಹುದೆಂದು ಕಂಡುಬರುತ್ತದೆ. ಅಂತೂ ಕಾರಣ ಅಸ್ಪಷ್ಟ.

ಉಗ್ಗು ಅಥವಾ ತೊದಲು ಮಾತಿನ ತೊಡರುಗಳಲ್ಲೆಲ್ಲಾ ಬಹಳ ಮುಖ್ಯವಾಗಿ ಗಮನ ಸೆಳೆಯುವ ತೊಂದರೆ ಹಾಗೂ ಆಡುಗನಿಗೆ ಮಾನಸಿಕ ಹಿಂಸೆ ಕೊಡುವಂತಹ ತೊಂದರೆ. ಉಗ್ಗಿನ ಬಗ್ಗೆ ತಿಳಿಯುವುದು ಸದ್ಯಕ್ಕೆ ವಾಕ್ ಶ್ರವಣ ವಿಜ್ಞಾನದಲ್ಲಿ ಒಂದು ಮುಖ್ಯವಾದ ಕೆಲಸವಾಗಿ ಈ ದಿಕ್ಕಿನಲ್ಲಿ ಸಂಶೋಧನೆಗಳು ನಡೆಯುತ್ತಲೇ ಇವೆ. ಕನ್ನಡದಲ್ಲಿ ನಾವು ತೊಂದರೆಯ ಹೆಸರಾದ 'ಉಗ್ಗು' ಪದವನ್ನು ವಯಸ್ಕರಿಗೆ ಅನ್ವಯಿಸುತ್ತೇವೆ. ಮಕ್ಕಳಲ್ಲಿ ಆ ತೊಂದರೆಗೂ 'ತೊದಲು' ಅನ್ನುತ್ತೇವೆ. ಹಾಗೆಯೇ ಮಕ್ಕಳ ಮಾತನ್ನು ತೊದಲ ಮಾತೆಂದು ಹೇಳಿ ಅದು ತೊಂದರೆಯೇ ಅಲ್ಲವೆಂದು ಮನ್ನಿಸುತ್ತೇವೆ ಕೂಡ. ಹಾಗೆ ಮನ್ನಿಸುವುದು ಒಳ್ಳೆಯದು.

ಉಗ್ಗಿನ ಸ್ವರೂಪ ಸ್ವಲ್ಪ ವಿಚಿತ್ರವೇ ಅನ್ನಿಸುವಂತಹುದು. ಉಸಿರಿನಷ್ಟೇ ಸಹಜವಾಗಿ ಆಡುಗನಿಗೆ ಮಾತಿನಲ್ಲಿ ತೊಡರು ಬಂದೊದಗಿಬಿಡುತ್ತದೆ. ಉಗ್ಗುವವನಿಗೆ ತೊಡರು ಬರುತ್ತದೆಂಬ ಅರಿವಿರಲು ಸಾಧ್ಯವಾದರೂ ಅವನು ಅದನ್ನು ತಡೆಯಲು ಅಸಹಾಯಕನಾಗಿರುತ್ತಾನೆ. ಅದೇ ಅಲ್ಲಿಯ ಮುಖ್ಯವಾದ ತೊಂದರೆ. ಈ ತೊಡರು ಮಾತು ಸಲೀಸಾಗಿ ಹರಿಯದಂತೆ, ಮುಂದುವರಿಯದಂತೆ ಮಾಡುತ್ತದೆ. ಅದು ಹಲವಾರು ರೀತಿಗಳಲ್ಲಿ ಆಗಲು ಸಾಧ್ಯವಿದೆ. ಮಾತಿನ ಶಬ್ದ ಮತ್ತೆ ಮತ್ತೆ ಬರುವುದು; ಶಬ್ದ ಆಗತ್ಯಕ್ಕಿಂತ ಉದ್ದವಾಗುವುದು; ಮಾತಿನ ಶಬ್ದ ಶುರುವಾಗದೆ ಬರಿ ದನಿ ಬಂದು ನಂತರ ಶುರು ವಾಗುವುದು; ಶಬ್ದಗಳು ಶುರುವೇ ಆಗದೆ ಸ್ವಲ್ಪ ಹೊತ್ತು ನಿಶ್ಶಬ್ದತೆ ಇದ್ದು ನಂತರ ಶುರುವಾಗುವುದು. ಇವು ಸಾಮಾನ್ಯ. ಮಕ್ಕಳಲ್ಲಿ ಹೆಚ್ಚಾಗಿ ಪದಗಳೇ ಪುನಃ ಪುನಃ ಕೇಳಿಬರಬಹುದು. ಈ ರೀತಿಯ ತೊಡರು ಮಾತಿನಿಂದಾಗಿ ಬೇರೆಯವರ ಗಮನ ಆ ಕಡೆ ಹರಿದು ಆಡುಗನಿಗೆ ಮುಜುಗರ. ಈ ಮುಜುಗರ ಬರಿಯ ಒಂದು ಸಲದ ಅನುಭವವಾಗದೆ ಅದು ಮುಂದುವರೆದಷ್ಟೂ ಆಡುಗನಲ್ಲಿ ಖಿನ್ನತೆಯನ್ನೇ ಉಂಟುಮಾಡಬಹುದು. ಮಾತಿನ ತೊಡರುಗಳಿಂದ ಮಾತಿನ ವೇಗ, ಏರಿಳಿತಗಳು ಸಾಮಾನ್ಯವಾಗಿರದೆ ಮಾತಿನ ಮೂಲವಾದ ಅರ್ಥ ಸಂವಹನೆಗೂ ಅಡ್ಡಿಯಾಗುವ ಸಾಧ್ಯತೆಗಳಿದ್ದು ಇದರ ಸ್ವರೂಪ ಗಂಭೀರವಾಗುತ್ತದೆ.

ಉಗ್ಗು ಬೆಳೆದು ನಿಂತಾಗ, ಅದು ಬರಿಯ ಕಿವಿಗೆ ಕೇಳಿಬರುವುದೇ ಅಲ್ಲದೆ ನೋಡುಗರಿಗೂ ಆಡುಗನ ದೇಹದ ಸ್ಥಿತಿ, ಚಹರೆಯಲ್ಲಿ ಅಸಂಬದ್ಧ ಬದಲಾವಣೆಗಳು ಮಾತಿನ ಜೊತೆ ಕಂಡುಬರಲು ಸಾಧ್ಯ. ಮಾತಿಗೂ ಇವುಗಳಿಗೂ ಸಂಬಂಧವಿಲ್ಲದಿದ್ದರೂ, ಅವು ಒಟ್ಟೊಟ್ಟಿಗೆ ಆಗುವುದರಿಂದ ಅದರ ವ್ಯಾಕುಲತೆಯನ್ನು ಇನ್ನಷ್ಟು ಹೆಚ್ಚಿಸುತ್ತವೆ. ಶಬ್ದವನ್ನು ಆಡುವ ಕಷ್ಟದ ಜೊತೆಯಲ್ಲಿ ಆಡುಗ ಕಣ್ಣುಗಳನ್ನು ಬಿಗಿಯಾಗಿ ಮುಚ್ಚಬಹುದು. ಮೂತಿಯನ್ನು ಮುಂದೆ ತರಬಹುದು. ತಲೆಯನ್ನು ಮುಂದಕ್ಕೆ/ಹಿಂದಕ್ಕೆ/ಪಕ್ಕಕ್ಕೆ ಬಾಗಿಸಬಹುದು; ಕುಳಿತಲ್ಲಿಂದ ಮುಂದಕ್ಕೆ ಬಾಗಬಹುದು, ಹಿಂದಕ್ಕೆ ಬಾಗಬಹುದು, ಇತ್ಯಾದಿ. ಈ ಚರ್ಯೆಗಳೂ ಇಷ್ಟವಿಲ್ಲದಂತೆ ಆಗುವುದು ನೋಡುವವರಿಗೆ ವಿಚಿತ್ರವೆನ್ನಿಸುತ್ತವೆ. ಯಾವ ಮಾತುಗಾರನೂ ಕಬ್ಬಿಣದಂತೆ ನಿಶ್ಚಲನಾಗಿ ಮಾತಾಡುವುದಿಲ್ಲವೆಂದರೂ ಈ ರೀತಿಯ ಚರ್ಯೆಗಳು ಸಾಮಾನ್ಯವಾಗಿರದೆ ಮಾತಿಗೆ ಅಸಂಬದ್ಧವಾಗಿ ಅಂಟುಹಾಕಿಕೊಂಡುಬಿಟ್ಟು ತೊಂದರೆಯ ಭಾಗವಾಗಿಬಿಡುತ್ತವೆ.

ಮಾತು ಮಾನವನ ನಡವಳಿಕೆ ಅಥವಾ ವರ್ತನೆಯ ಒಂದು ಭಾಗ. ಹೀಗಾಗಿ ಅದರಲ್ಲಿ ಐಬು ಅನ್ನಿಸಿದರೆ ಅದರ ಅನುಭವ ಬಹಳ ಸಲ ಆತನ ವ್ಯಕ್ತಿತ್ವಕ್ಕೆ ಕುಂದು ತರಲು ಸಾಧ್ಯ. ಅಸಾಮಾನ್ಯತೆಯ ಅರಿವು ಕಾಡಿಸಲು ಸಾಧ್ಯ. ಮನುಷ್ಯ ತನ್ನ ಅನುಭವದಲ್ಲಿ ಮುಜುಗರದ ಸಂಗತಿಗಳನ್ನು ಸಹಿಸುವುದು ಕಷ್ಟ. ಅವನ್ನು ಬಹಳ ಸಲ ಸುಲಭವಾಗಿ ಮರೆಯುವುದೂ ಆಗದು. ಈ ತೊಂದರೆಯ ವಿಚಾರದಲ್ಲಂತೂ ಆ ಬಗೆಯ ಮುಜುಗರ ಮತ್ತೆ ಮತ್ತೆ ಆಗಿ ಮಾತಾಡುವ ಮೊದಲೇ ಆತನಿಗೆ ವ್ಯಕ್ತಿಗತವಾಗಿ ಮುಂದೆ ತನ್ನ ವರ್ತನೆಯಲ್ಲಿ ಮುಜುಗರಕ್ಕೆ ಕಾರಣವಾಗುವ ರೀತಿ ಮಾತು ಆಗಿಬರುತ್ತದೆಂಬ ಅರಿವು ಇರುತ್ತದೆ. ಈ ಅರಿವು ಸಂಕೋಚ ಪ್ರವೃತ್ತಿಗೆ ಕಾರಣವಾಗಬಹುದು.

ಉಗ್ಗಿನ ಸ್ವರೂಪ ಕೂಡ ಸುಲಭ ತರ್ಕಕ್ಕೆ ನಿಲುಕುವಂಥದ್ದಲ್ಲ. ಮುಖ್ಯವಾಗಿ ಮಾತನ್ನು ಶುರುಮಾಡುವಲ್ಲಿ ಶಬ್ದಗಳು ಹೊರಡುವುದು ಕಷ್ಟದ ಕೆಲಸವೆನ್ನಿಸುತ್ತದೆ. (ಅದಕ್ಕೆ ಕಾರಣಗಳು ಹಲವು, ಅವನ್ನು ಮುಂದೆ ವಿವರವಾಗಿ ನೋಡೋಣ.) ಆದರೆ ಅವುಗಳ ರೂಪ ಕೂಡ ಸುಲಭ ವಿವರಣೆಗೆ ಸಿಲುಕದೆ ಹೋಗುತ್ತದೆ. ಉದಾಹರಣೆಗೆ, ಹೆಚ್ಚಾಗಿ ಕಂಡುಬರುವಂತಹ ಮತ್ತೆ ಮತ್ತೆ ಹೇಳುವಂತಹ ಶಬ್ದಗಳ ಉಚ್ಚಾರಣೆ ಏಕೆ ಅನ್ನುವುದು ತಿಳಿಯದು. ಪೆನ್ನನ್ನು ''ಪೆ ಪೆ ಪೆನ್ನು'' ಅನ್ನುವುದಾದರೆ, ತೊಂದರೆಯನ್ನು ಎಲ್ಲಿ ಎಂದು ಗುರುತಿಸಲಾಗದು. 'ಪೆ' ಶಬ್ದವಂತೂ ಹೇಳಲು ಆಗುತ್ತಲೇ ಇದೆ. ಮುಂದಿನ ಶಬ್ದವೂ ಬರುತ್ತಲೇ ಇದೆ. ಅಲ್ಲದೆ ಈ ಶಬ್ದ ಯಾವಾಗಲೂ ಉಚ್ಚಾರಕ್ಕೆ ಕಷ್ಟವೇ ಅನ್ನುವ ಹಾಗೂ ಇಲ್ಲ. ಮುಂದೆ ಅದೇ ವಾಕ್ಯದಲ್ಲಿ ಅದನ್ನು ಸುಲಭವಾಗಿ ಹೇಳಿರಲು ಸಾಧ್ಯ. ಶಬ್ದವನ್ನು ಹೇಳುವಾಗ ಯಾವ ರೀತಿಯ ತೊಂದರೆ ಬಂದರೂ ಅದು ಯಾವಾಗಲೂ ಅಲ್ಲ ಕೆಲವು ಸಲ ಮಾತ್ರ ಏಕೆ ಉಂಟಾಗುತ್ತದೆ ಅನ್ನುವುದು ಬಗೆಹರಿಯದ ಪ್ರಶ್ನೆ.

## ಕವಿಗೋಷ್ಠಿ

ಮೊದಲಿಗೆ ಕವಿಗೋಷ್ಠಿ ಯಾವಾಗ
ಪ್ರಾರಂಭವಾಗುತ್ತೋ ಎಂದು
ಕಾತರಿಸುತ್ತಾರೆ
ಪ್ರಾರಂಭವಾದ ಮೇಲೆ ಯಾವಾಗ
ಮುಗಿಯುತ್ತೋ ಅಂತಾ ಕಂಗಾಲಾಗುತ್ತಾರೆ

ಎಂ.ಡಿ. ಗೋಗೇರಿ
ನವ ಅಯೋಧ್ಯಾನಗರ - ಹುಬ್ಬಳ್ಳಿ - ೨೪

ಹೆಚ್ಚಾಗಿ, ಅಂದರೆ ಅದನ್ನು ಶುರುಪಿನಲ್ಲಿ ಹೇಳಲು ತೊಂದರೆ ಅನ್ನಬಹುದು. ಅದು ಏಕೆ ಹಾಗೆ ಅನ್ನಲು ಹಲವಾರು ವಿವರಗಳು ಸಾಧ್ಯ. ಅದಿರಲಿ, ಮಾತಿಗಂತೂ ಶುರುವಿರಲೇ ಬೇಕಲ್ಲ!

ಉಗ್ಗು ನಾವು ಆಡುವ ಮಾತಿನಲ್ಲಿ ಅನುಭವಿಸುವ ತೊಂದರೆ. ಆಡುವ ಮಾತು ಅಂದರೆ ಒಬ್ಬರು ಇನ್ನೊಬ್ಬ ವ್ಯಕ್ತಿಯ ಜತೆ ಸಂಭಾಷಿಸುವಾಗ ಮಾತ್ರ ಆಗಿಬರುವಂತಹ ತೊಂದರೆ. ಈ ವಿಶಿಷ್ಟವಾದ ಮಾತಿನ ತೊಂದರೆ ಇರುವವರ ಮನೆಯಲ್ಲಿ ಒಂದು ಸಾಕುನಾಯಿ ಇದೆ ಅಂದುಕೊಳ್ಳಿ. ಬಹುತೇಕ ಅವರಿಗೆ ಆ ಮುದ್ದು ಮರಿಯ ಜತೆ ಲಲ್ಲೆಗರೆಯುವಾಗ ಮಾತಿನ ತೊಂದರೆ ಬಾರದು. ಬಹಳವಾಗಿ ಓದುವಾಗಲೂ ಮಾತಿನ ತೊಂದರೆ ಬಾರದು, ಕಾಡಿಸದು. ಅದೇ ರೀತಿ ಮಾತಿನದೇ ಕೆಲಸ ಅನ್ನಬಹುದಾದ ನಾಟಕದ ಪಾತ್ರಧಾರಿಯಾಗಿಯೂ ಮಾತಿನಲ್ಲಿ ತೊಂದರೆ ಬಾರದು (ಅದು ವ್ಯಕ್ತಿಗತ ಮಾತಲ್ಲದೆ, ಪಾತ್ರದ ಮಾತಾಗಿ, ನಟನೆಯಾಗಿ, ಆಡುವ ಕೆಲಸವಾಗಿರುತ್ತದೆ). ಹಾಗೆಯೇ ಪ್ರಾರ್ಥನೆ ಮಾಡುವಾಗ, ಮಂತ್ರ ಹೇಳುವಾಗ, ಹಾಡು ಹೇಳುವಾಗ ಈ ರೀತಿಯ ಮಾತಿನ ತೊಂದರೆ ಕಾಣದು.

ಹಾಡು ಮತ್ತು ಮಾತು ಇವೆರಡಕ್ಕೂ ಇರುವ ಸಂಬಂಧ ಕನಿಷ್ಠವಾದುದು. ಮಾತಿಗೆ ಬೇಕಾದ ಅಂಗಗಳನ್ನು ಬಳಸಿದರೂ, ಮಾತಿನ ಪದಗಳನ್ನೇ ಆಡಿದರೂ ಅದು ಮಾತು ಅನ್ನಿಸಿಕೊಳ್ಳುವುದಿಲ್ಲ. ಅಲ್ಲಿ ಭಾವ, ಭಕ್ತಿ ಮುಖ್ಯವೇ ಹೊರತು ಮಾಹಿತಿಯ ಸಂವಹನವಲ್ಲ. ಹೀಗಾಗಿ ಅದು ಮಾತೇ ಅಂದರೂ ಮಾತು ಅಲ್ಲ!

ಮಾತಿಗೇ ತನ್ನದೇ ಆದ ಸ್ವಂತಿಕೆ ಇದೆ. ಅದು ಮನುಷ್ಯನ ಪ್ರಕೃತಿಯಲ್ಲಿ ಬಹಳ ಮುಖ್ಯವಾದ್ದು. ಮಾತಲ್ಲದೆ ಮನುಷ್ಯನನ್ನು ಪ್ರಾಣಿಗಳಿಂದ ಬೇರ್ಪಡಿಸುವ, ಏಕೆಂದರೆ ಆತ ಎರಡು ಕಾಲಿನ ಮೇಲೆ ನಿಲ್ಲುವ ಶಕ್ತಿ ಮತ್ತು ಅವನ ಕೈಚಳಕ. ಮನುಷ್ಯನ ಕೈಯ ಹೆಬ್ಬೆರಳ ಅಂಗೈ ಒಳಗೆ ಬರುವಂತಹದ್ದಾಗಿ ಪ್ರತಿ ಬೆರಳ ತುದಿಗೂ ಮುಟ್ಟುವಂತಹ ದ್ದಾಗುತ್ತದೆ. ಹೀಗಾಗಿ ಕೈಚಳಕ ಹೆಚ್ಚು. ಮನುಷ್ಯ ಬೇರೆ ಪ್ರಾಣಿಗಳಂತೆ ಕೂಗಬಲ್ಲನಾದರೂ ಅದಕ್ಕಿಂತ ಮಿಗಿಲಾಗಿ ಮಾತಿನ ಶಬ್ದಗಳನ್ನು ಸೇರಿಸಿ ಭಾಷೆಯೆಂಬ ವ್ಯವಸ್ಥೆಯನ್ನು ಮೈಗೂಡಿಸಿಕೊಂಡಿದ್ದಾನೆ. ಇದು ಅವನ ಸ್ವಂತಿಕೆ ಮತ್ತು ವಿಶೇಷತೆ. ಭಾಷೆಯೆಂಬ ವ್ಯವಸ್ಥೆಯ ವಿವರಗಳನ್ನು ಮುಂದೆ ನೋಡೋಣ, ಆದರೆ ಭಾಷೆಯ ಗುರಿ ಮತ್ತು ಕೆಲಸ ಬಹಳ ಆಸಕ್ತಿಯುಳ್ಳ ವಿಚಾರ.

ಇತರೆ ಪ್ರಾಣಿಗಳ ಕೂಗಿನಂತೆಯೇ ಮಾತು ಕೆಲಸ ಮಾಡುತ್ತದೆ. ಉಳಿದವರಿಗೆ ಮಾಹಿತಿ ಕೊಡುವಂತಹ ಕೆಲಸ ಮಾಡುತ್ತದೆ. ಪ್ರಾಣಿಗಳಲ್ಲೂ ಮನುಷ್ಯರಲ್ಲೂ ಹಾವಭಾವ ಮತ್ತು ಚಹರೆಗಳು ಇನ್ನೂ ಅನಾದಿಯಿಂದ ಬಂದಿರುವಂತೆಯೇ ಕೆಲಸ ಮಾಡುತ್ತಿವೆ. ಆದರೆ ಮನುಷ್ಯನ ಸಂಕೀರ್ಣ ನಡವಳಿಕೆಗೆ ಇಷ್ಟೇ ಸಾಲವು. ಮಾತಿನಿಂದ – ಭಾಷೆಯಿಂದ, ಹೆಚ್ಚು ಪೂರ್ಣವಾಗಿ, ನಿಖರವಾಗಿ ಮಾಹಿತಿಯನ್ನು ತಲುಪಿಸಲು ಸಾಧ್ಯ. ಇದು ಹೇಗೆ ಆಗುತ್ತಲಿದೆ ಅನ್ನುವುದು ಕೌತುಕದ ವಿಚಾರ. ನಿಮಗೆ ಹಸಿವು; ಅಡಿಗೆ ಮನೆಯಲ್ಲಿ ಬಾಳೆಹಣ್ಣು ಇದೆ ಎಂದು ನಿಮಗೆ ಗೊತ್ತು. ಅದನ್ನು ನೀವೇ ಅಲ್ಲಿಟ್ಟಿದ್ದೀರಿ. ಮಗಳನ್ನು ಕರೆದು ''ಅಮ್ಮ, ಅಲ್ಲಿ ಒಳಗೆ ಬಾಳೆಹಣ್ಣಿದೆ.

ತಾ'' ಅಂದಿರಿ. ಅಂದರೆ ನಿಮ್ಮ ಮಾಹಿತಿ ಆಕೆಗೆ ತಲುಪಿತು. ಅದರ ಫಲಿತಾಂಶವೆಂದರೆ ಆಕೆ ನಿಮಗೆ ಫಲವನ್ನು ತಂದುಕೊಡುತ್ತಾಳೆ. ಇದು ಮಾತಿನ ಶಕ್ತಿ. ಇದು ಬಹಳವಾಗಿ ರಿಮೋಟ್ ಕಂಟ್ರೋಲ್ ತರಹ ಕೆಲಸಮಾಡಿತು. ಒಂದು ಮನಸ್ಸು/ಮಿದುಳು ತನ್ನಲ್ಲೇ ಆ ದೇಹದಲ್ಲೇ ಅನಿಸಿದ್ದನ್ನು ಅಥವಾ ಯಾವುದೇ ಅನಿಸಿಕೆಯನ್ನೂ ಮಾತಿನ ರೂಪಕ್ಕೆ ಸಂಸ್ಕರಿಸುತ್ತದೆ. ಆ ಕಾರ್ಯವನ್ನು ಸಂಯೋಜಿಸಿದ ಮೇಲೆ ಉಸಿರಿನ, ದನಿಯ, ಗಂಟಲಿನ, ಬಾಯಿಯ, ಅಂಗಳಿನ, ನಾಲಿಗೆಯ, ಮೂಗಿನ ತುಟಿಗಳ ಸಹಯೋಗದಿಂದ ಕಾರ್ಯರೂಪಕ್ಕೆ ತಂದು ಒಂದು ವಿಶಿಷ್ಟವಾದ ಶಬ್ದಗಳ ಅಲೆಯನ್ನು – ಅಂದರೆ ಮಾತನ್ನು – ಹೊರಗೆಡಹುವಂತೆ ಮಾಡುತ್ತದೆ. ಇದು ಅರ್ಧ ಕೆಲಸವಾದರೆ ಇನ್ನರ್ಧ ಈ ಶಬ್ದಗಳನ್ನು ಕಿವಿಯಿಂದ ಆಲಿಸಿ, ಮಿದುಳಿಗೆ ತಲುಪಿಸಿ, ಪುನಃ ಅವನ್ನು ಸಂಸ್ಕರಿಸಿ ಆ ಮಾತಿನ ಇಂಗಿತವಾದ ಅದೇ ಅನಿಸಿಕೆಯನ್ನು ಮನಸ್ಸಿಗೆ ಮುಟ್ಟಿಸುತ್ತದೆ. ಇದು ಮಾತಿನ ಸಂಪರ್ಕ.

ಮಾತಿನ ವಿಚಾರದಲ್ಲಿ ಮನುಷ್ಯನ ಆಸಕ್ತಿ ಬಹುಶಃ ಬಹಳವೇ ಹಳೆಯದು. ಆತನ ಮಾತಿನ ಸ್ವರೂಪ ಅದರಲ್ಲಿರುವ ವ್ಯವಸ್ಥೆ ಮತ್ತು ಭಾಷೆಗಳಲ್ಲಿರುವ ವ್ಯತ್ಯಾಸ – ಇವುಗಳಲ್ಲಿ ಆಸಕ್ತಿ ತೋರಿದ್ದಾನೆ. ಬಹಳ ಹಿಂದಿನಿಂದ ವ್ಯಾಕರಣ ತಜ್ಞರು ಮಾತಿನ ವ್ಯವಸ್ಥೆ ಹೀಗಿರುತ್ತದೆ ಎಂದು ದಾಖಲಿಸಿದ್ದಾರೆ. ಮಾತಿನ ಶಬ್ದಗಳು ಕೇಳಿದಾಗ ಝಗ್ಗನೆ ಬಂದೊದಗುವ ಅರ್ಥವ್ಯಾಪ್ತಿಗೆ ಮಾನವ ಮರುಳಾಗಿದ್ದಾನೆ, ವಿಸ್ಮಯಗೊಂಡಿದ್ದಾನೆ. ಇದು ಆ ಮಟ್ಟದಲ್ಲೇ ಉಳಿದಿದೆ. ಅನಿಸಿಕೆ ಹೇಗೆ ಮಾತು ಆಗುತ್ತದೆ ಅನ್ನುವುದು ಇನ್ನೂ ಸ್ಪಷ್ಟವಾಗಿಲ್ಲ. ಮಿದುಳಿನ ಕಾರ್ಯದ ಬಗ್ಗೆ, ಇತ್ತೀಚಿನ ದಶಕಗಳಲ್ಲಿ ಆಗಿರುವ ಆವಿಷ್ಕಾರಗಳು ಅದರ ಕೆಲಸವನ್ನು ಬಿಚ್ಚಿ ತೋರುವಲ್ಲಿ ಸಹಾಯ ಮಾಡುತ್ತಿವೆ. ಹಾಗೆಯೇ ಕಂಪ್ಯೂಟರುಗಳನ್ನು ಮನುಷ್ಯನ ಯೋಚನೆಗೆ ತಕ್ಕಂತೆ ಸಂಯೋಜಿಸುವ ಕಾರ್ಯವೂ ನಡೆದಿದೆ. ಈಗ್ಗೆ ಪ್ರಪಂಚದಲ್ಲಿ ಆಗುತ್ತಿರುವ ಸಂಶೋಧನೆಗಳಲ್ಲಿ ಇವು ಮುಖ್ಯವಾದುವು. ಒಂದು ವ್ಯವಸ್ಥೆ ಹೇಗೆ ಕೆಲಸ ಮಾಡುತ್ತಿದೆ ಎಂದು ತಿಳಿಯುವಾಗ ಆ ವ್ಯವಸ್ಥೆ ಸರಿಯಾಗಿ ಕೆಲಸ ಮಾಡದಿರುವುದನ್ನು ಕೂಡ ಸರಿಯಾಗಿ ವಿವರಿಸಬೇಕಾಗುತ್ತದೆ. ಹೀಗಾಗಿ ಮಾತನ್ನು, ಅದರ ಕಾರ್ಯವನ್ನು ತಿಳಿಯುವಲ್ಲಿ, ಮಾತಿನ ಹಲವು ದೋಷಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಆಗಿಬಂದಿರುವಂತಹ ಸ್ಪಷ್ಟತೆ ಮತ್ತು ಮಾತಿನಲ್ಲಿ ಬರುವ ತೊಡರುಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಇನ್ನೂ ಅಷ್ಟಾಗಿ ಪ್ರಗತಿ ಸಾಧಿಸಲು ಸಾಧ್ಯವಾಗಿಲ್ಲ. ಈ ತೊಂದರೆ ಅಷ್ಟು ಕಷ್ಟವಾದದ್ದು.

ಮಾತಿನ ಸಂವಹನ/ಸಂಪರ್ಕದಲ್ಲಿ ಆಡುವ ಶಬ್ದಗಳಿಗಿಂತಲೂ ಮುಖ್ಯವಾದುದು ಮಾತಿನಲ್ಲಿ ಬರುವ ದನಿಯ ಏರಿಳಿತಗಳು ಮತ್ತು ಲಯ, ಇವನ್ನು 'ಕಾಕು' ಎಂದೂ ಕರೆಯುತ್ತಾರೆ. ಇವು ಎಷ್ಟು ಮೂಲವಾದುವು ಅಂದರೆ, ನಾವು ಪ್ರಾಣಿಗಳ ಜೊತೆ ಸಂಪರ್ಕ ಇಟ್ಟುಕೊಳ್ಳಲು ಕೂಡ ಇದು ಮಾತ್ರವೇ ಸಹಾಯಕ. ನಿಮ್ಮ ನಾಯಿಯಾಗಲಿ, ಎಮ್ಮೆಯಾಗಲಿ ನಿಮ್ಮ ಮಾತನ್ನು ಆಲಿಸುತ್ತಿದೆ ಎಂದು ನಿಮಗೆ ಅನಿಸುತ್ತಿದ್ದರೆ, ಅದಕ್ಕೆ ಕಾರಣ ನಿಮ್ಮ ಮಾತಿನಲ್ಲಿಯ ಕಾಕು. ಮಾತಿನಲ್ಲಿ ಬರಿ ಮಾಹಿತಿ ಇದೆಯೋ, ಅದು ಒಂದು ಪ್ರಶ್ನೆಯೋ ಅಥವಾ ಬೇಡ

# ಸುವರ್ಣ ರಥ



ಸುವರ್ಣ ರಥ ಬಂತು ನಮ್ಮೂರಿಗೆ
ಹೊಗೆಯಿರದ ನಗೆಯಿರದ ಬಿಗುಮಾನದಿಂದ
ಉರುಳುವ ಗಾಲಿಗಳ ಗಾಂಭೀರ್ಯದಿಂದ
ಸುವರ್ಣ ರಥ ಬಂತು ನಮ್ಮೂರಿಗೆ

ಕಬ್ಬಿಣದ ಹಳಿ ಮೇಲೆ ದಿಬ್ಬಣದ ಗಾಡಿ !
ಒಳಗಡೆಗೆ ಎಷ್ಟೊಂದು ಮದುವೆ ಜೋಡಿ !!
ದೇಶವಿದೇಶಗಳ ರಾಣಿರಾಜರ ಹೊತ್ತು
ಹಾರುತ್ತ ನಾಡನ್ನು ಒಂದು ಸುತ್ತು
ಸುವರ್ಣ ರಥ ಬಂತು ನಮ್ಮೂರಿಗೆ

ಬರುವ ದಾರಿಯಗುಂಟ ಹಳಿಗಳೆಡೆಯಲ್ಲಿ
ಮಳೆಹನಿಯ ಕಾಣದೆ ನಿತ್ರಾಣದಲ್ಲಿ
ಬೀಳುವ ಏಳುವ ಬೆಳೆಯ ಸ್ವಾಗತದಲ್ಲಿ
ಸುವರ್ಣ ರಥ ಬಂತು ನಮ್ಮೂರಿಗೆ

ಯುದ್ಧಮಾಡಿಸುವವರ, ಗದ್ದೆಗಳ ಕಸಿವವರ
ಹದ್ದಾಗಿ ನಮ್ಮನ್ನು ಕುಕ್ಕುವವರ
ಗೆದ್ದುಬರುವಂಥವರ, ಗುದ್ದಾಡಬಲ್ಲವರ
ಸದ್ದುಮಾಡದೆ ಹಣವ ನುಂಗುವವರ ಹೊತ್ತು
ಸುವರ್ಣ ರಥ ಬಂತು ನಮ್ಮೂರಿಗೆ

ನಮ್ಮೂರ ಜನರವರ ಮುಟ್ಟದಂತೆ
ನಮ್ಮೂರ ದೂಳವರ ತಟ್ಟದಂತೆ
ನಮ್ಮೂರ ಬಡತನವು ಕಾಣದಂತೆ
ನಮ್ಮವರ ಗೋಳಾಟ ಕೇಳದಂತೆ
ಸುತ್ತೆಲ್ಲ ದಪ್ಪನೆಯ ಕಪ್ಪನೆಯ ಗಾಜು
ಒಳಗಡೆ ಇದೆಯಂತೆ ಅರಮನೆಯ ಮೋಜು
ಸುವರ್ಣ ರಥ ಬಂತು ನಮ್ಮೂರಿಗೆ

ಹಾಳಾಗುತಿರುವಂಥ ಮನೆಗಳನು ತೋರಿಸದೆ
ಹಾಳುದೇಗುಲಗಳನು ತೋರಿಸುತ್ತಾ
ಅಳುತಿರುವ ಜನರ ಕಥೆಯನ್ನು ಹೇಳದೆ
ಅಳಿದ ಮಹಾರಾಜರ ಕಥೆಗಳನು ಹೇಳುತ್ತಾ
ಸುವರ್ಣ ರಥ ಬಂತು ನಮ್ಮೂರಿಗೆ

ನಮ್ಮೂರ ನೋಡಲು ಅವರು ಬಂದಿದ್ದಾರೆ !
ಅವರ ನೋಡಲು ನಾವು ನಿಂತಿದ್ದೇವೆ !!!
ಅವರಿಗೆ 'ಸಂಸ್ಕೃತಿ'ಯ ದರ್ಶನವ ಮಾಡಿಸುತ
ನಮಗೆ ಶ್ರೀಮಂತಿಕೆಯ ದರ್ಶನವ ಮಾಡಿಸುತ
ಸುವರ್ಣ ರಥ ಬಂತು ನಮ್ಮೂರಿಗೆ

ನಮ್ಮೂರ ಬಾಗಿಲಿಗೇ ಬಂದು ನಿಂತರೂ ರೈಲು
ನಾವದರ ಹತ್ತಿರಕೆ ಹೋಗುವುದು ಸಲ್ಲ !
ರೈಲು ಹತ್ತುವ ಶಕ್ತಿ ನಮಗಿಲ್ಲದಿದ್ದರೂ
ನಮ್ಮನ್ನು ಹತ್ತುವ ಶಕ್ತಿ ರೈಲಿಗಿದೆಯಲ್ಲ !!

ರಾಜೇಂದ್ರ ಬುರಡಿಕಟ್ಟಿ
[illegible]
ಶಿವಮೊಗ್ಗ ಜಿಲ್ಲೆ - [illegible]

ಎನ್ನುವ ಭಾವ ಇದೆಯೋ ಇತ್ಯಾದಿ ಭಾವಗಳು ಪದಗಳಿಗಿಂತಲೂ ಹೆಚ್ಚಾಗಿ ನಮಗೆ ತಲುಪುವುದು ಕಾಕುವಿನಿಂದ. ಹಾಗೆ ನೋಡಿದರೆ ಮಾತನ್ನು ಅರ್ಥಮಾಡಿಕೊಳ್ಳುವುದರಲ್ಲಿ ಕಾಕುವಿಗೆ ಮೊದಲ ಸ್ಥಾನವಾದರೆ, ಪದಗಳಿಗೆ ಎರಡನೆಯ ಸ್ಥಾನ! ಮಾತಿನ ಕೊನೆಯಲ್ಲಿ ದನಿ ಕೀರಲಾಯಿತೆಂದರೆ ನಿಮಗೆ ಒಂದು ಪ್ರಶ್ನೆ ಬಂದಿದೆ ಎಂದು ಗೊತ್ತಾಗುತ್ತದೆ. ಪ್ರಶ್ನೆಯ ವಿವರ ನಿಮಗೆ ಪದಗಳಿಂದ ತಿಳಿಯಬೇಕು. (ಉದಾಹರಣೆಗೆ, ಹೇಳಿಕೊಂಡು ನೋಡಿ – ''ಮೈಸೂರಿಗೆ ಹೋಗ್ತಾ ಇದೀಯಾ ?'') ಇದೂ ಅಲ್ಲದೆ ಅದೇ ವಾಕ್ಯದ ಯಾವ ಭಾಗವನ್ನು ಕುರಿತು ಈ ಪ್ರಶ್ನೆ ಕೇಳಲಾಗುತ್ತಿದೆ ಅನ್ನುವುದನ್ನೂ ಕೂಡ ಕಾಕುವಿನ ಒಂದು ಭಾಗವನ್ನಾಗಿ ತಲುಪಿಸುತ್ತೇವೆ. ಇದಕ್ಕಾಗಿ ಒಂದು ಪದದ ಮೇಲೆ ಹೆಚ್ಚು ಒತ್ತಡ ಕೇಳಿಬರುವಂತೆ ಮಾತು ಹೊರಡುತ್ತದೆ. (''ಮೈಸೂರಿಗೆ ಹೋಗ್ತಾ ಇದೀಯಾ ? / ಮಡಿಕೇರಿಗೆ ಅಲ್ಲವಾ'' ಎನ್ನುವ ಥರದಲ್ಲಿ) ಮಾತು ಅಥವಾ ಶಬ್ದಗಳ ಸರಣಿ ನಿಶ್ಶಬ್ದತೆಗೆ ವಿರುದ್ಧವಾದುದು ಎಂದು ಅನ್ನಿಸಿದರೂ ನಿಶ್ಶಬ್ದಕ್ಕೆ ಮಾತಿನ ಹರಿಯುವಿಕೆಯಲ್ಲಿ ಒಂದು ಕೆಲಸವಿದೆ. ಮಾತಿನ ಶಬ್ದಗಳು ಒಂದರಿಂದ ಇನ್ನೊಂದು ಒಂದೇ ಸಮನೆ ಬಂದರೂ ಮಧ್ಯೆ ಮಧ್ಯೆ ಅವು ನಿಂತು ಮುಂದು ವರಿಯುತ್ತವೆ. ಈ ನಿಲ್ಲುವಿಕೆ ಉಸಿರಾಡುವಿಕೆಗಾಗಿ ಎಂದೇನೂ ಆಗಬೇಕಿಲ್ಲ. ಮಾತು ಅದೇ ಬೇಕಾಗಿ ತಡೆದು ಹೊರಡುವುದೆಂದರೆ, ಅದರ ಮುಂದೆ ಬರುವ ಪದದ ಮೇಲೆ ಒತ್ತಡ ಹಾಕುವ ಒಂದು ವಿಧಾನ ಅದು. ನಿಶ್ಶಬ್ದ ತನ್ನ ಮುಂದಿನ ಶಬ್ದವನ್ನು ಹೆಚ್ಚು ಪ್ರಕಾಶಮಾನ ವಾಗಿಸುತ್ತದೆ. ಹೀಗಾಗಿ ಮೊದಲ ಪದಕ್ಕೆ ಯಾವಾಗಲೂ ಹೆಚ್ಚಿನ ಪ್ರಾಶಸ್ತ್ಯ.

ಮಾತು 'ಸರಾಗ'ವಾಗಿ ಹರಿಯಬೇಕು. ಅದು ಸಾಮಾನ್ಯ. ಅಂತೂ ಮಾತಿಗೂ ಒಂದು ರಾಗವಿದೆ. ಅಪರೂಪಕ್ಕೆಂದರೂ ಈ ರಾಗ ಕೆಡುವುದಿದೆ. ಅಂತಹ ಕೆಲವೇ ಮಾತಿನ ತೊಂದರೆಗಳಲ್ಲಿ ಮಾತಿನ ತೊಡರಾದ ಉಗ್ಗು ಮುಖ್ಯವಾದ್ದು. ಉಗ್ಗಿನ ಜತೆ ಬಂದ ಮಾತು ಅರ್ಥವಾಗುವುದಿಲ್ಲವೆಂದೇನಲ್ಲ. ಆದರೆ ಅಷ್ಟು ಸಲೀಸು ಅಲ್ಲ. ನಮ್ಮ ಗಮನ ತೊಡರಿನ ಮೇಲೆ ಹರಿಯುವುದರ ಬದಲು ಮಾತಿನ ಅರ್ಥದ ಮೇಲೆ ಗಮನಹರಿಯಬೇಕು. ಸಹಜ ಮಾತಿನ ಮೇಲೆ ನಮ್ಮ ಗಮನಹರಿಯದೆ ಅದು ಅರ್ಥವಾಗುತ್ತಾ ಸಾಗುವುದು ಅದರ ಗುಣ.

ಮಾತಿನ ರಾಗಕ್ಕೆ ತೊಂದರೆಯಾಗುವುದನ್ನು ಗಮನಿಸಿದಾಗ, ಉಗ್ಗಿನಲ್ಲಿ ಮಾತು ತನ್ನ ಹುಟ್ಟಿನಲ್ಲೇ ಪೆಟ್ಟು ತಿನ್ನುತ್ತದೆಯೇನೋ ಎನ್ನುವ ಅನುಮಾನ ಬರುತ್ತದೆ. ಆ ತೊಂದರೆಯ ವಿವರಗಳನ್ನು ಕಂಡಾಗಲೂ ಹಾಗೆಯೆ. ಮಾತು ಸಂಪರ್ಕ ಸಾಧನ. ಮಾತಿನ ಇಂಗಿತದ ಹಂತದಿಂದಲೂ ಅದರ ಹುಟ್ಟಿಗೆ ತೊಂದರೆ ಆಗಿಬರುತ್ತದೆ ಎಂದು ಅನ್ನಿಸುತ್ತದೆ. ಉಗ್ಗು ಎಂಬುದು ಮಾತಿನ ಕಲಿಕೆಯಲ್ಲಿ ಆಗುವ ತೊಂದರೆ ಎಂದು ಈಗಿನ ಒಂದು ನಂಬಿಕೆ. ಆದರೂ ಅದರ ಮೂಲಕಾರಣ ಅದರ ಹುಟ್ಟಿನಲ್ಲೇ ಇರಬೇಕು ಎನ್ನುವ ಸೂಚನೆಗಳಿವೆ. ಇದನ್ನು ನೋಡಲು ನಾವು ಮಾತಿನ/ಭಾಷೆಯ ವ್ಯವಸ್ಥೆಯನ್ನೇ ಗಮನಿಸಬೇಕು.

ಮಾತಿನ ಶುರುವಿನಲ್ಲೇ ಉಗ್ಗುವಿಕೆ ಹೆಚ್ಚಾಗಿ ಕಂಡುಬರುತ್ತದೆ. ಮಾತಿನ ಮೊದಲ ಭಾಗದಲ್ಲಿ ಮಾತಿನ ಅರ್ಥದ ಮುಖ್ಯಭಾಗ ಇರುತ್ತದೆ. ಕೇಳುಗರ ಗಮನವೂ ಈ ಭಾಗದ ಮೇಲೆ ಅನಾಯಾಸವಾಗಿ ಬರುತ್ತದೆ. ಅದು ಮಾಹಿತಿಯನ್ನು ಬಿಚ್ಚಿಡಲು ಸೂಕ್ತ ಜಾಗ. (ಆದ್ದರಿಂದಲೇ ಲಂಕೆಗೆ ಹೋಗಿಬಂದ ಹನುಮಂತ ಬುದ್ಧಿವಂತ. ಅವನು ಬಾಯಿಬಿಟ್ಟಾಗ ಮೊದಲು ಬಂದ ಪದಗಳು ''ಸಿಕ್ಕಳು ಸೀತೆ''). ಆದರೆ ಸಾಮಾನ್ಯವಾಗಿ ಮಾತಿನ ಮೊದಲಿಗೆ ಬರುವುದು ನಾಮಪದ, ಕರ್ತೃವಿನ ಮಾಹಿತಿ. ಕೇಳುಗರಿಗೆ ಹೆಚ್ಚು ನೆನಪಿನಲ್ಲಿ ಉಳಿಯುವಂತಹ ಪದಗಳೆಂದರೆ ಮೊದಲ ಹಾಗೂ ಕೊನೆಯ ಪದಗಳು, ಅಲ್ಲಿ ಮಾಹಿತಿ ಹೆಚ್ಚು. ಮಾಹಿತಿಯನ್ನು (ಅನಿಸಿಕೆಯನ್ನು) ಅರುಹುವುದರಲ್ಲಿ ತೊಂದರೆ ಬರುತ್ತದೆಂಬುದು ಒಂದು ವಾದ. ಏಕೆಂದರೆ ನಾಮಪದವನ್ನು, ಮೊದಲ ಶಬ್ದಗಳನ್ನು ಬಿಟ್ಟು ಉಳಿದ ಕಡೆ ಹಾಗೂ ಇತರೆ ರೀತಿಯ ಪದ ಗಳನ್ನು ಆಡುವಲ್ಲಿ ಕಂಡುಬರುವ ತೊಂದರೆ ಕಡಿಮೆ ಎಂದೇ ಅನ್ನಬೇಕು.

ಮೊದಲೇ ಹೇಳಿದ ಹಾಗೆ ಮಾತೆಂದರೆ ಅರ್ಥವನ್ನು ಸಾರುವಂತಹ ಕ್ರಿಯೆ. ಆದ್ದರಿಂದಲೇ, ನಾಟಕದ ಮಾತು, ಮುದ್ದು ಮರಿಗಳ ಜತೆಗಿನ ಲಲ್ಲೆ, ಹಾಡು, ಮಂತ್ರ, ಪ್ರಾರ್ಥನೆ ಇವೆಲ್ಲ ಮಾತು ಎಂದೆನಿಸಿ ಕೊಳ್ಳುವುದಿಲ್ಲ. ಇನ್ನೊಬ್ಬರ ಜತೆ ಒಡನಾಡಿದಾಗ ಮಾತ್ರ ಅದು ಸಹಜ ಮಾತು ಎಂದು ಹೇಳಬಹುದು. ಅಂದರೆ ಉದ್ದೇಶಪೂರಿತ ನುಡಿ ಹಾಗೂ ಅರ್ಥಭರಿತವಾದ್ದು. ಹೀಗೆ ಒಂದರ್ಥದಲ್ಲಿ ಮಾತು ಅಂದರೆ ಯಾವಾಗಲೂ ಉದ್ದೇಶಭರಿತ ಮತ್ತು ಗಂಭೀರವಾದ ಕೆಲಸವಾಗುತ್ತದೆ. ಬಸ್ಸಿನಲ್ಲಾಗಲಿ, ಹೋಟೆಲಿ ನಲ್ಲಾಗಲಿ, ಅಂಗಡಿಯಲ್ಲಾಗಲಿ, ಮನೆಯಲ್ಲಾಗಲಿ, ಸಂದರ್ಶನದಲ್ಲಾಗಲಿ ಮಾತಿಗೆ ತನ್ನ ಉದ್ದೇಶವನ್ನು ಸಾಧಿ ಸುವುದೇ ಮುಖ್ಯವಾಗುತ್ತದೆ. ಆದರೆ ನಮಗೆ ಸಾಮಾನ್ಯವಾಗಿ ಅನ್ನಿಸುವುದು, ಕೆಲವು ಸಲ ಮಾತ್ರ ಜೀವನದಲ್ಲಿ ಗಂಭೀರವಾಗಿ ಮಾತನಾಡುವ ಸ್ಥಿತಿ ಬರುತ್ತದೆ, ಉಳಿದಂತೆ ಅಲ್ಲ ಅನ್ನುವುದು. ಹುಡುಗ ತನ್ನ ಪ್ರೀತಿಯ ಹುಡುಗಿಗೆ ''ನಿನ್ನನ್ನ ಪ್ರೀತಿಸುತ್ತೇನೆ'' ಅನ್ನುವ ''ಛೋಟೀಸಿ ಬಾತ್'' ಎನ್ನಬಹುದಾದ ಪುಟ್ಟ ನುಡಿಯನ್ನು ಆಡಲು ಹೃದಯವನ್ನೇ ಬಾಯಿಗೆ ತಂದುಕೊಂಡು ಬೆವತು ತೊದಲುತ್ತಾನೆ. ಇದು ಪ್ರಸ್ತಾಪದ ತೊಂದರೆ. ನಿಜವೆಂದರೆ, ಮಾತೆಲ್ಲವೂ ಉದ್ದೇಶಪೂರಿತವಾದ ಪ್ರಸ್ತಾಪವೇ ಸರಿ. ಒಂದು ಸಂದರ್ಶನದಲ್ಲಿ ಬಹುಶಃ ಉತ್ತರಿಸಲಾಗದಂತಹ ಪ್ರಶ್ನೆಗಳನ್ನೇನೂ ಕೇಳುವುದಿಲ್ಲ. ಆದರೂ ಅಲ್ಲಿಯ ಕೆಲಸ ಗಂಭೀರವಾಗಿ ಕಾಣುತ್ತದೆ. ಬಹಳ ಉತ್ತಮವಾದ ಉತ್ತರ ಮತ್ತು ಮಾತನ್ನು ಅಪೇಕ್ಷಿಸುತ್ತಾರೆ ಎಂಬುದು ಅಭ್ಯರ್ಥಿಯ ಅನಿಸಿಕೆ, ಅಲ್ಲಿ ಮಾತು ಗಂಭೀರತೆಯನ್ನು ತಂದೊದಗಿಸುತ್ತದೆ. ಸಾಮಾನ್ಯವಾದ ಮಾತು ಎಂಬುದು ಒಂದು ಅಂಗಡಿಯಲ್ಲಾಗಲಿ, ಬಸ್ಸಿನಲ್ಲಾಗಲಿ, ಮನೆಯಲ್ಲಾಗಲಿ ಪ್ರಸ್ತಾಪವೇ ಸರಿ. ಹಣ್ಣು ಬೇಕೆಂದಾಗಲಿ, ಟಿಕೇಟು ಬೇಕೆಂದಾಗಲಿ ಆಡುವ ಮಾತು ಅವಶ್ಯಕತೆಯ ಪ್ರಸ್ತಾಪವಾಗುತ್ತದೆ. ಉಗ್ಗಿನ ಎಚಾರಕ್ಕೆ ಬಂದಾಗ ಯಾವುದೇ ಉದ್ದೇಶಪೂರಿತ ಪ್ರಸ್ತಾಪ ಮಾತಿಗೆ ತೊಂದರೆಯನ್ನು ತಂದೊಡ್ಡುತ್ತದೆ. ನಮ್ಮಲ್ಲಿಗೆ ಬರುವ ಉಗ್ಗುವವರನ್ನು ಪರೀಕ್ಷಿಸುವಾಗ ಎಲ್ಲಿ ತೊಂದರೆ ಬರುತ್ತದೆ ಎಂದರೆ, ಅವರು ಮೊದಲು ಹೇಳುವುದು ತಮಗೆ ಅಂತಹ ತೊಂದರೆ ಸಂದರ್ಶನಗಳಲ್ಲಿ ಮತ್ತು ಪ್ರಭಾವಿ ವ್ಯಕ್ತಿಗಳ ಜತೆ ಉದ್ಭವಿಸುತ್ತದೆ ಎನ್ನುತ್ತಾರೆ. ಹಾಗೆ ಪಟ್ಟಿ ಕೇಳುತ್ತಾ ಹೋದರೆ ಅಂಗಡಿ, ಬಸ್ಸುಗಳಲ್ಲೂ ತೊಂದರೆ ಬರುತ್ತದೆಂದೂ ಹೇಳುತ್ತಾರೆ. ಒಟ್ಟಿನಲ್ಲಿ ಇದು ಆಡುಮಾತಿನ ತೊಂದರೆ. ಒಡನಾಡುವ ವ್ಯಕ್ತಿ ಎದುರಿಗಿಲ್ಲದೆ ಫೋನಿನಲ್ಲಿ ಮಾತು ಆಡಿದರೂ ಕೂಡ ಅದು ಉದ್ದೇಶಪೂರಿತವಾದ ಮಾತೇ ಆದ್ದರಿಂದ ಅಲ್ಲೂ ತೊಂದರೆ ಬರುತ್ತದೆಂದು ವಿಶೇಷವಾಗಿ ಹೇಳಬೇಕಾದ್ದಿಲ್ಲ.

ಮಾತಿನ ಪದಗಳಲ್ಲಿ ಪರಿಚಿತ ಪದಗಳಿಗಿಂತ ಅಪರಿಚಿತ ಪದಗಳು ಹೆಚ್ಚು ಮಾಹಿತಿಯುಳ್ಳದ್ದಾಗಿರುತ್ತವೆ. ಹಾಗೆಯೇ ಹೆಚ್ಚು ಉದ್ದವಿರುವ ಪದಗಳಿಗಿಂತ ಪುಟ್ಟ ಪದಗಳನ್ನೇ ನಾವು ಹೆಚ್ಚು ಬಳಸುತ್ತೇವೆ. ಹೀಗಾಗಿ ಅಪರಿಚಿತ ಪದಗಳನ್ನು ಹಾಗೂ ದೀರ್ಘವಾದ ಪದಗಳನ್ನು ಆಡುವಲ್ಲಿ ಹೆಚ್ಚು ಉಗ್ಗುವಿಕೆ ಕಂಡುಬಂದಲ್ಲಿ ಆಶ್ಚರ್ಯವಿಲ್ಲ, ಅಲ್ಲವೆ ?

ಮನಸ್ಸಿನ ಇಂಗಿತ ಹೇಗೆ ಮಾತಿನ ಶಬ್ದಗಳಾಗಿ ಮಾರ್ಪಾಡಾಗುತ್ತದೆ ಅನ್ನುವುದು ಇನ್ನೂ ಬಗೆಹರಿಯಬೇಕಾಗಿರುವ ಪ್ರಶ್ನೆ. ಆದರೆ ಅದರ ಬಗ್ಗೆ ಈಗಾಗಲೆ ಹಲವಾರು ಸುಳುಹುಗಳಿವೆ. ಇಂಗಿತದಲ್ಲಿ ಕರ್ತೃ ಮತ್ತು ಕಾರ್ಯ ಎರಡೂ ಇರುವುದು ಸಾಮಾನ್ಯ. ಯಾವುದೇ ನುಡಿಯಲ್ಲೂ ಸರಿ ತಪ್ಪು ಇದ್ದೇ ಇರುತ್ತದೆ. ಇಂಗಿತ ಈ ಪದಗಳ ಗುಂಪನ್ನು ಆಯ್ದುಕೊಳ್ಳುತ್ತದೆ. ಈ ಪದಗಳು ಶಬ್ದಗಳನ್ನು ಆಯ್ದುಕೊಳ್ಳುತ್ತವೆ. ಆ ಶಬ್ದಗಳು ಯಾವ ರೀತಿಯ ಸರತಿಯಲ್ಲಿ ಬರಬೇಕು ಅನ್ನುವುದು ಒಂದು ಭಾಷೆಯ ವ್ಯವಸ್ಥೆಯನ್ನು ಅವಲಂಬಿಸುತ್ತದೆ. ಕನ್ನಡವಾಗಲಿ ಬೇರೆ ಭಾಷೆಯಲ್ಲಿಯಾಗಲಿ ಶಬ್ದಗಳನ್ನು ಮತ್ತೆ ಮತ್ತೆ ಎರಡು ಸಾರಿ ಹೇಳಿ ಅರ್ಥವತ್ತಾದ ಪದಗಳನ್ನು ಕೇಳಬಹುದು. (ಉದಾಹರಣೆಗೆ, ಪಾಪಾ, ಮಾಮಾ, ಕಾಕಾ, ತಾತಾ ಇತ್ಯಾದಿ) ಆದರೆ ಇದು ಎಲ್ಲ ಶಬ್ದಗಳನ್ನು ಪುನರುಚ್ಚರಿಸಿದರೂ ಆಗದು. ಹಾಗೆಂದು ಅವನ್ನು ಮೂರು ಸಲ ಹೇಳಿ ಅರ್ಥವತ್ತಾದ ಪದಗಳನ್ನು ಸಾಮಾನ್ಯವಾಗಿ ಯಾವ ಭಾಷೆಯೂ ಮಾಡುವುದಿಲ್ಲ. ಹೀಗೆ ಭಾಷೆಗಳು ತಮ್ಮದೇ ಆದ ನೀತಿ ನಿಯಮಗಳನ್ನು ಹಾಕಿಕೊಳ್ಳುತ್ತವೆ. ಮಾತು ಸಾಮಾನ್ಯವಾಗಿ ಈ ನಿಯಮ ಗಳಡಿಯಲ್ಲೇ ಸಾಗುತ್ತದೆ. ತೊಡರಿದಾಗ, ಉಗ್ಗಿದಾಗ ಈ ನಿಯಮವನ್ನು ಮೀರಿದಂತೆ ಶಬ್ದಗಳು ಮಾತಿನಲ್ಲಿ ಬೇರೆ ರೀತಿ ಆಗಿ ಬಂದುಬಿಟ್ಟಿರುತ್ತವೆ. ಅಂದರೆ ಮಾತಿನ ಹುಟ್ಟಿನ ಮಟ್ಟದಲ್ಲಿಯೇ ಈ ತೊಂದರೆ ಆಗಿಬಂದಿರಬೇಕೆಂಬ ಒಂದು ಅಭಿಪ್ರಾಯವೂ ಇದೆ. ಇದು ನಿಜವೇ ಆದಲ್ಲಿ ಈ ಮಾತಿನ ತೊಂದರೆಗೆ ಉತ್ತರ ಮಾತಿನ ಆಯೋಜನೆ – ಅಂದರೆ ಮಿದುಳು / ಮನಸ್ಸಿನಲ್ಲಾಗುವ ಆಯೋಜನೆಯ ಮಟ್ಟದಲ್ಲಿ ಆಗಬೇಕೇ ಹೊರತು ಶಬ್ದಗಳು ನಮಗೆ ತೋರುವಂತೆ ಬಾಯಿಯ ಮಟ್ಟದಲ್ಲಿ ಅಲ್ಲ.

---

**ಡಾ|| ಜಿ. ಪುರುಷೋತ್ತಮ**
೧೦೩೦/೧೩, ೨೫ನೇ ಮೈನ್, ೩೯ನೇ ಕ್ರಾಸ್, ಜಯನಗರ
'ಟಿ' ಬ್ಲಾಕ್, ಬೆಂಗಳೂರು - ೫೬೦ ೦೪೧

# ಶಿಕ್ಷಣ ಕ್ಷೇತ್ರದಲ್ಲಿ ಲೈಂಗಿಕ ಕಿರುಕುಳ ಸ್ವರೂಪ ಮತ್ತು ಪರಿಣಾಮಗಳು



"ಮಾಷ್ಟ್ರು ತೊಂದ್ರೆ ಕೊಡ್ತಾರೆ", "ಮಾಷ್ಟ್ರು ಸುಮ್ನೆ ಸುಮ್ನೆ ಬೈತಾರೆ" ಎಂದು ಶಾಲಾ ಹಂತದ ವಿದ್ಯಾರ್ಥಿನಿಯರ ಹೇಳದವಿಯ ಮಾತಿನ ಅರ್ಥ. 'ಲೈಂಗಿಕ ಕಿರುಕುಳದ ಸಾಧ್ಯತೆ' ಎಂಬುದನ್ನು ನಾವು ಅರಿಯಬೇಕಾಗಿದೆ. ಎರಡನೆಯದಾಗಿ, ಲೈಂಗಿಕ ಕಿರುಕುಳಕ್ಕೆ ಗುರಿಯಾದಾಗ ಅದನ್ನು ಹೇಗೆ ಎದುರಿಸಬೇಕು ಮತ್ತು ಯಾಕೆ ಎದುರಿಸಬೇಕು ಎಂಬುದರ ಬಗ್ಗೆ ವಿದ್ಯಾರ್ಥಿನಿಯರಲ್ಲಿ ಅರಿವು ಮೂಡಿಸಬೇಕಾಗಿದೆ. ಮೂರನೆಯದಾಗಿ, ಹೆಣ್ಣುಮಕ್ಕಳು ಎಳವೆಯಲ್ಲಿ ಬೇರೆ ಬೇರೆ ಕಾರಣಕ್ಕೆ ಮೂಕರಾಗಿ ಲೈಂಗಿಕ ಕಿರುಕುಳವನ್ನು ಸಹಿಸಿದರೆ, ಪ್ರೌಢ ವಯಸ್ಸಿನಲ್ಲಿ ಇತರ ಕಾರಣಗಳಿಗಾಗಿ ಸಹಿಸುತ್ತಿದ್ದಾರೆ. 'ಸಹಿಸುವಿಕೆ'ಯನ್ನೇ ಮೌಲ್ಯ ಎಂದು ಸಮಾಜವು ಹೆಣ್ಣಿನ ಸಂದರ್ಭದಲ್ಲಿ ಪುನರ್‌ಸ್ಥಾಪಿಸುವುದರಿಂದಾಗಿ, ಅವರನ್ನು ಹೇಳವರನ್ನಾಗಿಸುವಲ್ಲಿ ತನ್ನ ಕೊಡುಗೆಯನ್ನು ನೀಡಿದೆ.

ಡಾ|| ಸಬೀಹಾ ಭೂಮೀಗೌಡ

ಲೈಂಗಿಕ ಕಿರುಕುಳಗಳು ಮನೆ ಎಂಬ ಚಿಕ್ಕ ಮತ್ತು ಆತ್ಮೀಯ ವಲಯದಿಂದ ಆರಂಭಗೊಂಡು ಸಮಾಜದ ವಿವಿಧ ವಲಯಗಳಲ್ಲಿ ವ್ಯಾಪಿಸಿಕೊಂಡಿವೆ. ಇತ್ತೀಚಿನ ವರ್ಷಗಳಲ್ಲಿ ಶಾಲೆಗಳಲ್ಲಿ ಲೈಂಗಿಕ ಕಿರುಕುಳದ ಪ್ರಕರಣಗಳು ಹೆಚ್ಚುಹೆಚ್ಚಾಗಿ ಬೆಳಕಿಗೆ ಬರುತ್ತಿದ್ದು, ಅದಕ್ಕೆ ಕಾರಣಕರ್ತರಾದವರು ಸಾರ್ವಜನಿಕರಿಂದ ಏಟು ತಿಂದುದನ್ನು ಮಾಧ್ಯಮಗಳು ಬಯಲಿಗೆಳೆದಿವೆ. ಬಹುತೇಕ ಸಂದರ್ಭಗಳಲ್ಲಿ ಲೈಂಗಿಕ ಕಿರುಕುಳ ಎಂದರೇನು ಎಂದು ಅರಿವಾಗುವ ಪೂರ್ವದಲ್ಲೇ ಹೆಣ್ಣುಮಕ್ಕಳು ಅದಕ್ಕೆ ಬಲಿಯಾಗುತ್ತಿರುವುದು ವರ್ತಮಾನದ ದುರಂತವಾಗಿದೆ. ಅದೇ ರೀತಿಯಲ್ಲಿ ವ್ಯಕ್ತಿಯ ಬೌದ್ಧಿಕ ವಿಕಸನಕ್ಕೆ ತಳಹದಿಯನ್ನು ನಿರ್ಮಾಣಮಾಡುವ ಶೈಕ್ಷಣಿಕ ವಲಯವೂ ಲೈಂಗಿಕ ಕಿರುಕುಳಗಳಿಂದ ಹೊರತಾಗಿಲ್ಲ ಎಂಬುದು ಅತ್ಯಂತ ಖೇದದ ಸಂಗತಿಯಾಗಿದೆ. ಈ ನೆಲೆಯಲ್ಲಿ ಆಯ್ದ ಸ್ನಾತಕೋತ್ತರ ವಿದ್ಯಾರ್ಥಿಗಳು ಮತ್ತು ಸಂಶೋಧನಾ ವಿದ್ಯಾರ್ಥಿಗಳ ಜೊತೆ ಸಂವಾದ ನಡೆಸಿ, ಅವರ ಸ್ಮೃತಿಯಲ್ಲಿ ದಾಖಲಾದ ಲೈಂಗಿಕ ಕಿರುಕುಳಗಳ ನಿರ್ದಿಷ್ಟ ಘಟನೆಗಳನ್ನು ದಾಖಲಿಸಿಕೊಂಡು, ಇಲ್ಲಿ ವಿಶ್ಲೇಷಣೆಗೆ ಪ್ರಯತ್ನಿಸಿದ್ದೇನೆ.

**ಪ್ರಾಥಮಿಕ ಮತ್ತು ಪ್ರೌಢಶಾಲೆಯ ಹಂತಗಳಲ್ಲಿ**

ವಕ್ತೃಗಳು ಹೇಳಿರುವಂತೆ ಹೆಣ್ಣುಮಕ್ಕಳು ಆರು-ಏಳನೆಯ ತರಗತಿಗಳಿಗೆ ಬಂದಾಗಲೇ ಕಿರುಕುಳಗಳು ಆರಂಭವಾಗುತ್ತವೆ. ಅದರಲ್ಲೂ ಈ ತರಗತಿಗಳಲ್ಲಿ ಇತರರಿಗಿಂತ ಮೈ ಕೈ ತುಂಬಿಕೊಂಡ ಇಲ್ಲವೆ ಕಾಣಲು ಆಕರ್ಷಕರಾದ ಹೆಣ್ಣುಮಕ್ಕಳು ಇಂತಹ ಕಿರುಕುಳಗಳನ್ನು ಹೇರಳವಾಗಿ ಮತ್ತು ಸಂಕೀರ್ಣವಾಗಿ ಅನುಭವಿಸುತ್ತಿರುತ್ತಾರೆ. ಎಂದರೆ ಇವರೆಲ್ಲ ೧೧-೧೨ರ ಎಳೆವಯಸ್ಸಿನಲ್ಲೇ ಲೈಂಗಿಕ ಕಿರುಕುಳಕ್ಕೆ ಒಳಗಾಗುತ್ತಿದ್ದಾರೆ. ಈ ವಯೋಮಾನದ ಮಕ್ಕಳು ಒಂದೋ ಪುಷ್ಪವತಿಯರಾಗುವ ಹೊಸ್ತಿಲಲ್ಲಿ ನಿಂತಿರುತ್ತಾರೆ; ಅಥವಾ ಆಗಷ್ಟೇ ಪುಷ್ಪವತಿಯರಾಗಿರುತ್ತಾರೆ. ಆಗಲೇ ಅವರ ಬದುಕಿನ ಕರಾಳ ಚರಿತ್ರೆ ಆರಂಭಗೊಂಡಂತಾಗುತ್ತದೆ. ಲೈಂಗಿಕ ಕಿರುಕುಳವನ್ನು ನೀಡುವವರು ಹೆಚ್ಚಾಗಿ ದೈಹಿಕ ಶಿಕ್ಷಕರು. ಇದಕ್ಕೆ ಅಪವಾದವೆಂಬಂತೆ ಬೇರೆ ವಿಷಯಗಳನ್ನು ಪಾಠಮಾಡುವ ಶಿಕ್ಷಕರೂ ಸೇರಿರುತ್ತಾರೆ ಎಂದು ಅಧ್ಯಯನ ವೇಳೆಯಲ್ಲಿ ತಿಳಿದುಬರುತ್ತದೆ.

**ಲೈಂಗಿಕ ಕಿರುಕುಳದ ಸ್ವರೂಪ**

- ಅಧ್ಯಾಪಕ ಸುಂದರ ಹುಡುಗಿಯರ ತೊಡೆಯನ್ನು ಚಿವುಟುವುದು
- ಹೊಟ್ಟೆಗೆ ಚಿವುಟುವುದು
- ಎಲ್ಲರ ಮುಂದೆಯೇ ಅವರ ಮೈ ಕೈ ಸವರುವುದು
- ಹುಡುಗಿಯರನ್ನು ಬೆಂಚಿನ ತುದಿಯಲ್ಲೇ ಕೂರುವಂತೆ ನಿರ್ದೇಶಿಸಿ, ಅಚೆ-ಈಚೆ ಹೋಗುವಾಗ ಅವರ ಮೈ ಸವರಿಕೊಂಡು ಹೋಗುವುದು
- ಸುಂದರ ಹುಡುಗಿಯರನ್ನು ಮೊದಲ ಬೆಂಚಿನಲ್ಲಿ ಕೂರಿಸಿ, ಅವರನ್ನು ಮಾತ್ರ ಉದ್ದೇಶಿಸಿ, ಅವರನ್ನು ಮಾತ್ರ ನೋಡಿ ಪಾಠಮಾಡುವುದು
- ಅಧ್ಯಾಪಕರು ತಮ್ಮ ಕೊಠಡಿಗೆ ಏಕಾಂತದಲ್ಲಿ ಕರೆಸುವುದು
- ಅನೈತಿಕ ಸಂಬಂಧಕ್ಕೆ ಒತ್ತಾಯಿಸುವುದು

ಇಂತಹ ಪ್ರಕರಣಗಳನ್ನು ವಕ್ತೃಗಳು ತಮ್ಮ ಶಾಲಾ ದಿನಗಳಂದು ನಡೆದುದಾಗಿ ನೆನಪಿಸಿಕೊಳ್ಳುತ್ತಾರೆ.

**ಕಿರುಕುಳಕ್ಕೆ ಒಳಗಾದವರ ಪ್ರತಿಕ್ರಿಯೆ**

- ಎಳೆಯ ಹೆಣ್ಣುಮಕ್ಕಳಲ್ಲಿ ಹಲವರು ಅಧ್ಯಾಪಕರ ಕಿರುಕುಳಗಳನ್ನು ಒಪ್ಪದೆ ಅಥವಾ ಸಹಿಸದೆ ಅವರು ತಮ್ಮದೇ ಆದ ರೀತಿಯಲ್ಲಿ ಪ್ರತಿಭಟಿಸಿದ್ದೂ ಇದೆ. ಆದರೆ ಪ್ರತಿಭಟಿಸಿದ ಹೆಣ್ಣುಮಕ್ಕಳು ಬೇರೆ ರೀತಿಯ ಕಿರುಕುಳವನ್ನು ಅನುಭವಿಸಬೇಕಾಗುತ್ತದೆ. ತಮ್ಮ ಇಚ್ಛೆಗೆ ವಿದ್ಯಾರ್ಥಿನಿಯರು ಸ್ಪಂದಿಸದೆ ಇದ್ದಾಗ ಅಧ್ಯಾಪಕ ಅವರಿಗೆ (ಪಠ್ಯದ ವಿಚಾರವಲ್ಲಿ) ಹತ್ತಾರು ಪ್ರಶ್ನೆಗಳನ್ನು ಕೇಳಿ, ಅವರು ಉತ್ತರಿಸಲು ವಿಫಲರಾದಾಗ, ಎಲ್ಲರೆದುರೇ ಬೆತ್ತದಿಂದ ಹೊಡೆದು,

ತಮ್ಮ ಸಿಟ್ಟನ್ನು ಪ್ರದರ್ಶಿಸಿ ತೃಪ್ತಿಪಟ್ಟದ್ದಿದೆ.

- ಕೆಲವು ಸಂದರ್ಭಗಳಲ್ಲಿ ಲೈಂಗಿಕ ಕಿರುಕುಳಕ್ಕೆ ಒಳಗಾದವರು ತಮ್ಮ ಸಹಪಾಠಿಗಳ ಜೊತೆ ಕಿರುಕುಳವನ್ನು ಹಂಚಿಕೊಂಡಿದ್ದೂ ಇದೆ. ಆಗ ನಿಧಾನವಾಗಿ ವಿಷಯವು ಸಹ ಅಧ್ಯಾಪಕರಿಗೆ, ಕೆಲವೊಮ್ಮೆ ಹೆತ್ತವರಿಗೆ ಸಂಗತಿ ಬಹಿರಂಗಗೊಂಡು, ಅವರಿಂದ ಪ್ರತಿಭಟನೆಗಳು, ವಿರೋಧಗಳು ಎದುರಾಗಿವೆ. ಲೈಂಗಿಕ ಕಿರುಕುಳವನ್ನು ವಿರೋಧಿಸಿ ವಿದ್ಯಾರ್ಥಿನಿಯ ನೆರವಿಗೆ ಬಂದ ಅಧ್ಯಾಪಕಿಯರನ್ನೂ ಕಿರುಕುಳ ನೀಡಿ ಹಿಂಸಿಸಿದ ನಿದರ್ಶನಗಳು ಇರುವಂತೆ, ಕೆಲವೊಮ್ಮೆ ಕಿರುಕುಳ ನೀಡುವ ಅಧ್ಯಾಪಕರು ಸಸ್ಪೆಂಡ್ ಆದ ನಿದರ್ಶನಗಳೂ ವಕ್ತೃಗಳಿಂದ ತಿಳಿದುಬಂದಿವೆ.
- ಅಧ್ಯಾಪಕರ ಇಂಥ ನೀಚ ವರ್ತನೆಗಳನ್ನು ಎಳೆಯ ವಯಸ್ಸಿನಲ್ಲಿ ಪ್ರತಿಭಟಿಸಲಾಗದ ವಿದ್ಯಾರ್ಥಿಗಳು ಪ್ರೌಢರಾಗಿ ಬೆಳೆದ ನಂತರ ಅಂತಹ ಗುರುಗಳನ್ನು ನಿಕೃಷ್ಟವಾಗಿ ಕಂಡು, ತಮ್ಮ ಅಸಮಾಧಾನ ವ್ಯಕ್ತಪಡಿಸಿ ನೆಮ್ಮದಿ ಹೊಂದಿರುವುದನ್ನು ವಕ್ತೃಗಳು ತಿಳಿಸಿರುತ್ತಾರೆ.

**ಕಾಲೇಜು ಹಂತಗಳಲ್ಲಿ ಲೈಂಗಿಕ ಕಿರುಕುಳಗಳ ಸ್ವರೂಪ**

ವಿಕೃತ ಮನಸ್ಕರು ಸಮಾಜದ ಎಲ್ಲೆಡೆ ವ್ಯಾಪಿಸಿಕೊಂಡಿದ್ದಾರೆ. ಕಾಲೇಜು ಕೂಡಾ ಇದಕ್ಕೆ ಹೊರತಾಗಿಲ್ಲ. ವಕ್ತೃಗಳು ನೀಡಿದ ನಿರ್ದಿಷ್ಟ ಘಟನೆಗಳ ಆಧಾರದಲ್ಲಿ ಕಾಲೇಜಿನಲ್ಲಿ ನಡೆದ ಲೈಂಗಿಕ ಕಿರುಕುಳಗಳ ಸ್ವರೂಪವನ್ನು ಹೀಗೆ ಕ್ರೋಢೀಕರಿಸಬಹುದು.

- ಗ್ರಂಥಪಾಲಕನೇ ಇಂತಹ ವಿಕೃತ ಮನಸ್ಕನಾಗಿದ್ದ ಒಂದು ಕಾಲೇಜಿನಲ್ಲಿ ವಿದ್ಯಾರ್ಥಿನಿಯರಿಗೆ ಪುಸ್ತಕ ನೀಡುವಾಗ ಆತ ಅನಗತ್ಯವಾಗಿ ಹೆಣ್ಣುಮಕ್ಕಳ ಕೈ ಸವರುವುದು, ಕೈ ಚಿವುಟುವುದು, ಓದುತ್ತಾ ಕುಳಿತವರನ್ನೇ ದಿಟ್ಟಿಸಿ ನೋಡುವ ಮೂಲಕ ಕಿರುಕುಳ ನೀಡುವ ಪ್ರಕರಣಗಳು ದಾಖಲಾಗಿವೆ. ಅದನ್ನು ಪ್ರತಿಭಟಿಸಿದ ವಿದ್ಯಾರ್ಥಿನಿಯರಿಗೆ ಅಗತ್ಯದ ಪುಸ್ತಕಗಳನ್ನು ನೀಡದೆ ಸತಾಯಿಸಿ ಆ ಗ್ರಂಥಪಾಲಕ ಸೇಡು ತೀರಿಸಿಕೊಳ್ಳುತ್ತಿದ್ದುದನ್ನೂ ವಕ್ತೃಗಳು ಗುರುತಿಸಿದ್ದಾರೆ. ಇದರಿಂದಾಗಿ ಲೈಂಗಿಕ ಕಿರುಕುಳವನ್ನು ಪ್ರತಿಭಟಿಸಿದ ಹುಡುಗಿಗೆ ತನ್ನ ಅಗತ್ಯದ ಸಂದರ್ಭದಲ್ಲೂ ಯಾವ ಪುಸ್ತಕವೂ ದೊರೆಯದೆ, ಅದರಿಂದ ತೊಂದರೆಗೆ ಒಳಗಾಗಿ ಖಿನ್ನತೆಯನ್ನು ಅನುಭವಿಸುವಂತಾಗುತ್ತದೆ. ಹಾಗೂ ಇತರರ ಗುಮಾನಿಯ ನೋಟಕ್ಕೆ ಈಡಾಗಿ ಹಿಂಸೆಗೆ ಒಳಗಾಗಬೇಕಾಗುತ್ತದೆ.
- ಇನ್ನೊಂದು ಕಾಲೇಜಿನಲ್ಲಿ ಅಧ್ಯಾಪಕನೊರ್ವ ತರಗತಿಯ ಚೆಂದದ ಹುಡುಗಿಯರನ್ನೇ ತನ್ನ ಕೊಠಡಿಗೆ ಕರೆಸುವುದು; ಏಕಾಂತದಲ್ಲಿ ಅವರೊಂದಿಗೆ ಮಾತನಾಡಲು ಪ್ರಯತ್ನಿಸುವುದು, ಅವರಿಗೆ ಮಾತ್ರ ಪತ್ಯದ ಟಿಪ್ಪಣಿ (ನೋಟ್ಸ್)ಗಳನ್ನು ಸಿದ್ಧಪಡಿಸಿ ಕೊಡುವುದು, ಅಂಥವರಿಗೆ ಮಾತ್ರ ಇತರರಿಗಿಂತ ಹೆಚ್ಚಿನ ಅಂಕಗಳನ್ನು ನೀಡುವುದು ಮುಂತಾದ ವಿಶೇಷ ಆಸ್ಥೆ ತೋರುತ್ತಿದ್ದುದನ್ನು ವಕ್ತೃಗಳು ನೆನಪಿಸಿಕೊಳ್ಳುತ್ತಾರೆ. ಅಂತಹ ಸಂದರ್ಭಗಳಲ್ಲಿ ಆತನ ಕೊಠಡಿಯಿಂದ ವಿದ್ಯಾರ್ಥಿನಿಯರು ಹೊರಬರುವಾಗ ಅಳುತ್ತಿದ್ದರೆ, ಇತರ ಸಹಪಾಠಿಗಳಿಗೆ ''ಅಧ್ಯಾಪಕರು ಅವರನ್ನೇ ಯಾಕೆ ಕರೀತಾರೆ?'' ಮತ್ತು ''ಕೊಠಡಿಯಿಂದ ಹೊರಬರುವಾಗ ಇವರ‍್ಯಾಕೆ ಅಳುತ್ತಾರೆ?'' ಎಂಬುದು ಬಿಡಿಸಲಾಗದ ಒಗಟನಂತೆ ಕಾಡುತ್ತಿತ್ತಂತೆ. ಲೈಂಗಿಕ ಕಿರುಕುಳವನ್ನು ಸಹಿಸುವುದು ಅಸಾಧ್ಯವಾಗಿ, ಹುಡುಗಿಯರು ಸಹಪಾಠಿಗಳ ಬಳಿ ಬಾಯಿಬಿಟ್ಟಾಗ ತರಗತಿಯ ಎಲ್ಲರೂ ಅಂಥ ಕೃತ್ಯವನ್ನು ಪ್ರತಿಭಟಿಸಿ ಲೈಂಗಿಕ ಕಿರುಕುಳ ನೀಡುತ್ತಿದ್ದ ಅಧ್ಯಾಪಕನನ್ನು ತರಾಟೆಗೆ ತೆಗೆದುಕೊಂಡುದೂ ನಡೆದಿದೆ.
- ಛಂದಸ್ಸಿನ ಪಾಠಮಾಡುವ ಅಧ್ಯಾಪಕ ಪದ್ಯಭಾಗವೊಂದನ್ನು ಕರಿಹಲಗೆಯ ಮೇಲೆ ಬರೆದು, ಪ್ರಸ್ತಾರ ಹಾಕಲು ವಿದ್ಯಾರ್ಥಿನಿಯರನ್ನು ಕರೆಯುವುದು; ಅವರು ಬಂದಾಗ, ಅವರ ಕೈಮೇಲೆ ತಾನು ಕೈಯಿಟ್ಟು ಬರೆಸುವ ಮೂಲಕ ತನ್ನ ಚಪಲವನ್ನು ತೀರಿಸಿಕೊಳ್ಳುತ್ತಿದ್ದನಂತೆ. ಹೀಗಾಗಿ ಆತ ಅಧ್ಯಾಪಕರ ಕೊಠಡಿಗೆ ಬರಹೇಳಿದರೆ, ಅಲ್ಲಿಗೆ ಹೋಗಲು ವಿದ್ಯಾರ್ಥಿನಿಯರು ಹೆದರುತ್ತಿದ್ದರಂತೆ. ವಿದ್ಯಾರ್ಥಿಗಳೆಲ್ಲ ಒಟ್ಟಾಗಿ 'ದೂರುಪೆಟ್ಟಿಗೆ'ಗೆ ದೂರು ನೀಡುವ ಮೂಲಕ ತಮ್ಮ ವಿರೋಧವನ್ನು ಸೂಚಿಸಿದ್ದಿದೆ.




**ಶಾಲೆ/ಕಾಲೇಜುಗಳ ಹಂತಗಳಲ್ಲಿ ಕಿರುಕುಳಗಳನ್ನು ಸಹಿಸುವುದು ಯಾಕೆ?**

- ತಮ್ಮ ಅಸಮ್ಮತಿಯ ನಡುವೆಯೂ ತಮ್ಮ ದೇಹದ ಮೇಲೆ ಆಗುವ ಕಿರುಕುಳಗಳ ಕುರಿತು ವಿದ್ಯಾರ್ಥಿನಿಯರಿಗೆ ಸ್ಪಷ್ಟತೆ ಇಲ್ಲದಿರುವುದು
- ಅಧ್ಯಾಪಕರ ಕುರಿತು ವಿದ್ಯಾರ್ಥಿನಿಯರು ಹೊಂದಿರುವ ಭಯ, ಗೌರವ
- ಮನೆಯವರು ಅಧ್ಯಾಪಕರ ಕುರಿತು ಹೊಂದಿರುವ ಆದರ
- ತಮ್ಮ ಮೇಲಾಗುವ ಕಿರುಕುಳಗಳನ್ನು ಹೇಳಿದರೆ, ಕಿರುಕುಳ ನೀಡುವವರಿಂದಲೇ ಎದುರಾಗಬಹುದಾದ ತೊಂದರೆಯ ಭಯ
- ತಮ್ಮ ಬಗೆಗಿನ ಅಪಪ್ರಚಾರದ ಭಯ
- ತಮ್ಮ ಸಮಸ್ಯೆಗೆ ಪರಿಹಾರ ದೊರೆಯುವ ಬಗ್ಗೆ ಹುಡುಗಿಯರಿಗೆ ಇರುವ ಅನುಮಾನ
- ತಮ್ಮನ್ನು ಹೆತ್ತವರು ನಂಬಬಹುದೇ ಎಂಬ ಹುಡುಗಿಯರಲ್ಲಿ ಮನೆಮಾಡಿರುವ ಅನುಮಾನ
- ವಿಷಯ ತಿಳಿಸಿದ ತಕ್ಷಣ ತಾವು ಶಾಲೆ/ಕಾಲೇಜು ತೊರೆಯಬೇಕಾಗಿ ಬಂದರೆ ಎಂಬ ಭಯ
- ಅಧ್ಯಾಪಕ ಹೊಂದಿದ ಸಾಮಾಜಿಕ ಘನತೆ ಮತ್ತು ಪ್ರಭಾವ ಕೆಲವೊಮ್ಮೆ ಹುಡುಗಿಯರನ್ನು ಮಾತ್ರವಲ್ಲ, ಹೆತ್ತವರನ್ನೂ ಮೂಕರನ್ನಾಗಿಸುವುದಿದೆ.

**ಸ್ನಾತಕೋತ್ತರ ಪದವಿ ಮತ್ತು ಸಂಶೋಧನಾ ಕಾರ್ಯಗಳ ಹಂತದಲ್ಲಿ**

ಸ್ನಾತಕೋತ್ತರ ಪದವಿಗೆ ಬರುವ ವೇಳೆಗೆ ವಿದ್ಯಾರ್ಥಿ-ವಿದ್ಯಾರ್ಥಿನಿಯರು ದೈಹಿಕ-ಮಾನಸಿಕ ಎರಡೂ ನೆಲೆಯಲ್ಲಿ ಪ್ರೌಢ ಹಂತವನ್ನು ತಲುಪಿರುತ್ತಾರೆ. ಈ ಅವಧಿಯಲ್ಲಿ ವಿದ್ಯಾರ್ಥಿನಿಯರು ತಮ್ಮ ವಾಸಸ್ಥಳದಿಂದ ದೂರ ಬಂದು ವಸತಿ ನಿಲಯಗಳಲ್ಲಿ ಇರಬೇಕಾದ ಸಂದರ್ಭಗಳೂ ಹೇರಳವಾಗಿರುತ್ತವೆ. ಇವರನ್ನು ವಿದ್ಯಾಭ್ಯಾಸಕ್ಕೆ ಹೊರಗೆ ಕಳುಹಿಸುವಾಗ, ಹೆತ್ತವರಿಗೂ ಕಿಶೋರ ವಯಸ್ಸಿನ (ಟೀನೇಜ್) ಮಕ್ಕಳ ಸಂದರ್ಭದಲ್ಲಿ ಇರುವಷ್ಟು ಆತಂಕ ಇರುವುದಿಲ್ಲ. ಎಂದರೆ, 'ಇವರು ತಮ್ಮನ್ನು ತಾವು ರಕ್ಷಿಸಿಕೊಳ್ಳಬಲ್ಲರು' ಎಂಬುದು ಹೆತ್ತವರ ಮತ್ತು ಸಾರ್ವಜನಿಕರ ಸಾಮಾನ್ಯ ನಿಲುವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಸ್ನಾತಕೋತ್ತರ ಪದವಿಯಲ್ಲಿ ವ್ಯಾಸಂಗ ಮಾಡುತ್ತಿರುವ ಮತ್ತು ಪಿಎಚ್.ಡಿ. ಪದವಿಗಾಗಿ ಸಂಶೋಧನೆ ನಡೆಸುತ್ತಿರುವ ಗುಂಪಿನ ಜೊತೆಗೆ ಸಂವಹನ ನಡೆಸಲಾಯಿತು. ಈ ಹಂತದಲ್ಲೂ ಲೈಂಗಿಕ ಕಿರುಕುಳಗಳು ಅಲ್ಲಲ್ಲಿ ನಡೆದಿರುವ ವಿದ್ಯಮಾನ ಸ್ಪಷ್ಟವಾಗಿ ತಿಳಿದುಬಂತು. ಸ್ನಾತಕಪೂರ್ವದ ಮತ್ತು ಇಲ್ಲಿನ ಸಂದರ್ಭಗಳಲ್ಲಿ ಯಾವ ಕಾರಣಗಳು ಲೈಂಗಿಕ ಕಿರುಕುಳ ನೀಡಲು ಅನುವು ನೀಡಿವೆ? ಮತ್ತು ಕಿರುಕುಳಗಳ ಸ್ವರೂಪ ಮತ್ತು ಪರಿಣಾಮ/ಪ್ರತಿರೋಧ ಹೇಗೆ ಮೂಡಿವೆ? – ಈ ಬಗ್ಗೆ ತಿಳಿಯಲು ಪ್ರಯತ್ನಿಸಲಾಗಿದೆ. ಅದರ ಫಲಿತಗಳು ಈ ಕೆಳಗಿನಂತಿವೆ –

**ಪೂರಕ ಪರಿಸರ**

- ಸ್ನಾತಕೋತ್ತರ ಪದವಿ ಮಟ್ಟದಲ್ಲಿ ಪ್ರತಿ ಪತ್ರಿಕೆಯಲ್ಲೂ ವಿಚಾರಗೋಷ್ಠಿಯ ಪ್ರಬಂಧ ಮಂಡಿಸುವ ಕೆಲಸ; ಪ್ರಬಂಧ ರಚನೆಯ ಕೆಲಸ ವಿದ್ಯಾರ್ಥಿಗಳಿಗೆ

ಇರುತ್ತದೆ. ಆದರ ಜೊತೆಗೆ ವಿದ್ಯಾರ್ಥಿಗಳ ಉತ್ತರ ಪತ್ರಿಕೆಗಳನ್ನು ತಮ್ಮ ಅಧ್ಯಾಪಕರೇ ಮೌಲ್ಯಮಾಪನ ಮಾಡುತ್ತಿರುವುದು ಗೊತ್ತಿರುತ್ತದೆ. ಈ ಎಲ್ಲಕ್ಕೂ ಅಂಕಗಳನ್ನು ನೀಡುವಾಗ ಅಧ್ಯಾಪಕರ 'ಮರ್ಜಿ'ಗೆ ಅವಕಾಶ ಹೇರಳವಾಗಿರುತ್ತದೆ. ಕೆಲವು ಅಧ್ಯಾಪಕರು ತರಗತಿಗಳಲ್ಲಿ ''ಹೆಚ್ಚು ತರ್ಲೆ ಮಾಡಿದ್ರೆ ನಿಮ್ಮ್ ಬಾಲ ಕತ್ತರಿಸ್ತೀನಿ'' ಎಂದು ಮೌಖಿಕ ಎಚ್ಚರಿಕೆಗಳನ್ನು ನೀಡುವುದಿದೆ. ಹಲವು ಸಂದರ್ಭಗಳಲ್ಲಿ ವಿದ್ಯಾರ್ಥಿಗಳ ಮನದಲ್ಲಿ 'ಅಧ್ಯಾಪಕರ ಕೈಯಲ್ಲಿ ಅಂಕಗಳಿವೆ' ಎಂಬ ಭಯದ ಭೂತ ಜಾಗೃತವಾಗಿರುತ್ತದೆ. ಇವು ವಿದ್ಯಾರ್ಥಿನಿಯರ ಮೇಲಿನ ಲೈಂಗಿಕ ಕಿರುಕುಳಗಳಿಗೆ ಸೂಕ್ತ ಪರಿಸರವನ್ನು ನಿರ್ಮಿಸಿಬಿಡುತ್ತವೆ.

ಸಂಶೋಧನಾ ವಿದ್ಯಾರ್ಥಿಗಳಂತೂ ದ್ವೀಪದ ಹಾಗೆ ಬದುಕಿರುತ್ತಾರೆ. ಮಾರ್ಗದರ್ಶಕರ ಇನ್ನೊರ್ವ ಅಧ್ಯಾಪಕರ ಜೊತೆ ಮಾತನಾಡಿದರೆ, ಎಲ್ಲಿ ತನ್ನ ಸಂಶೋಧನಾ ಮಾರ್ಗದರ್ಶಕರಿಗೆ ಅಸಮಾಧಾನ ವಾದೀತೋ ಎಂದು ಹೆದರುವ ಪರಿಸ್ಥಿತಿ ಇವರದ್ದಾಗಿರುತ್ತದೆ. ತನ್ನ ಸಂಶೋಧನಾ ಕಾರ್ಯದ ತಿಂಗಳ ವರದಿಗೆ ಸಹಿ ಹಾಕಲು, ಫೆಲೋಶಿಪ್ ಕಾಲಕಾಲಕ್ಕೆ ಬರಲು, ಥೀಸಿಸ್ ಸಜ್ಜುಗೊಳ್ಳಲು ಮಾರ್ಗದರ್ಶಕರ ಮರ್ಜಿ ಅಗತ್ಯವಾದುದರಿಂದ ಇಲ್ಲೂ ಲೈಂಗಿಕ ಕಿರುಕುಳ ತಲೆಯೆತ್ತಲು ಅವಕಾಶವಿರುತ್ತದೆ.

**ವಿದ್ಯಾರ್ಥಿಗಳು ಕಂಡ/ಹಾದುಬಂದ ಲೈಂಗಿಕ ಕಿರುಕುಳಗಳ ಸ್ವರೂಪ**

- ಆತ್ಮೀಯವಾಗಿ ಮಾತನಾಡುತ್ತ ಮಾರ್ಗದರ್ಶಕನಾದವ ವಿದ್ಯಾರ್ಥಿನಿಯರ ಬೆನ್ನು ಸವರುವುದು
- ವಿದ್ಯಾರ್ಥಿನಿಯರ ತಲೆ ಮುಟ್ಟಿ ಮಾತನಾಡುವುದು, ಭುಜ ಸವರುತ್ತ ಸಾಗುವುದು
- ವಿದ್ಯಾರ್ಥಿನಿಯು ನಿಂತೇ ಮಾತನಾಡಲು ಬಯಸಿದರೆ ಕೈ ಹಿಡಿದು ಕೂರಿಸುವುದು
- ಪ್ರತ್ಯೇಕವಾಗಿ ಇರುವ ತಮ್ಮ ಕೊಠಡಿಗೆ ಅವರನ್ನು ಬರಹೇಳುವುದು
- ವಿಭಾಗದಲ್ಲಿ ಯಾರೂ ಇಲ್ಲದ ವೇಳೆಯಲ್ಲಿ ವಿದ್ಯಾರ್ಥಿನಿಗೆ ಬರಲು ಸಮಯ ಕೊಡುವುದು
- ಆಕೆಯನ್ನು ಅಪ್ಪಿಕೊಳ್ಳುವ, ಮುದ್ದಿಸುವವರೆಗೂ ಮುಂದುವರಿಯುವುದು
- ವಿದ್ಯಾರ್ಥಿನಿಯನ್ನು ತನ್ನ ಜೊತೆ ಹೊರ ವಿಹಾರಕ್ಕೆ ಆಹ್ವಾನಿಸುವುದು/ಒತ್ತಾಯಿಸುವುದು
- ಆರಂಭದಲ್ಲಿ ಚಿಕ್ಕ ಚಿಕ್ಕ ಚೇಷ್ಟೆ ಮಾಡುತ್ತ ವಿದ್ಯಾರ್ಥಿನಿಯರನ್ನು ತನ್ನ ಇಷ್ಟಕ್ಕೆ ಒಗ್ಗಿಸುತ್ತಾ ಹೋಗುವುದು
- ವಿದ್ಯಾರ್ಥಿನಿಯರತ್ತ ಅಶ್ಲೀಲ ನೋಟ ಬೀರುವುದು
- ತನ್ನ ವರ್ತನೆಗಳನ್ನು ಒಪ್ಪದವರಿಗೆ ಅಡ್ಡ ಹೆಸರಿಟ್ಟು ಎಲ್ಲರೆದುರು ಅಪಮಾನಿಸುವುದು
- ಒಪ್ಪಿದವರಿಗೆ ಎಲ್ಲರಿಗಿಂತ ವಿಶೇಷವಾದ ಆಸ್ಥೆ ನೀಡುವುದು, ಅಂಕಗಳನ್ನು ನೀಡುವುದು

**ಕಿರುಕುಳಗಳನ್ನು ಪ್ರತಿಭಟಿಸುವುದಕ್ಕಿಂತ ಸಹಿಸುವ ಪ್ರಮಾಣವೇ ಅಧಿಕ. ಇದಕ್ಕೆ ಕಾರಣಗಳೂ ವೈವಿಧ್ಯಮಯ**

- ಆರಂಭದಲ್ಲಿ ಲೈಂಗಿಕ ಕಿರುಕುಳದ ವಾಸನೆ ಹಿಡಿದು ದೃಢ ಅಭಿಪ್ರಾಯ ಪ್ರಕಟಿಸುವುದರಲ್ಲಿ ವಿದ್ಯಾರ್ಥಿನಿಯರು ವಿಫಲವಾದಲ್ಲಿ, ಮುಂದೆ ಆ ಹಿಂಜರಿಕೆಯೇ ಅವರಿಗೆ ನುಂಗಲಾರದ ತುತ್ತಾಗಿ ಪರಿಣಮಿಸುತ್ತದೆ. ಆದರೆ ಮುಕ್ತ ಪರಿಸರದಲ್ಲಿ ಬೆಳೆದ, ಸ್ನೇಹ ಸ್ವಭಾವದ ಹೆಣ್ಣುಮಕ್ಕಳು ಅಧ್ಯಾಪಕರ ಇಂತಹ ವರ್ತನೆಯನ್ನು ಆತ್ಮೀಯವಾದುದು, ಸ್ನೇಹ ಸ್ವಭಾವದ್ದು ಎಂದೇ ತಿಳಿದುಕೊಂಡಿರುತ್ತಾರೆ. ಕ್ರಮೇಣ ಇದು ಲೈಂಗಿಕ ಕಿರುಕುಳ ಎಂದು ವಿದ್ಯಾರ್ಥಿನಿಯರಿಗೆ ಅರಿವಾಗುವುದರೊಳಗೆ ಕಾಲ ಮಿಂಚಿರುತ್ತದೆ.
- ಇಂತಹ ವಿದ್ಯಾರ್ಥಿನಿಯರನ್ನು ಸಹಪಾಠಿಗಳೂ ಗುಮಾನಿಯಿಂದ ನೋಡುವುದರಿಂದ ಅವರು ದ್ವೀಪಗಳಾಗಿ ನಲುಗಬೇಕಾಗುತ್ತದೆ.
- ಅಧ್ಯಾಪಕ ಒಡ್ಡುವ ಅಂಕಗಳು, ರ್‍ಯಾಂಕ್, ಪುಸ್ತಕ, ನೋಟ್ಸ್ ಮುಂತಾದ ಪ್ರಲೋಭನೆಗಳು ವಿದ್ಯಾರ್ಥಿನಿಯರನ್ನು ಮೌನವಾಗಿಸುವುದಿದೆ.
- ಲೈಂಗಿಕ ಕಿರುಕುಳ ನೀಡುವ ಅಧ್ಯಾಪಕ ವಿಭಾಗದಲ್ಲಿ ಹೊಂದಿರುವ ಅಧಿಕಾರದ ಬಲವೂ ವಿದ್ಯಾರ್ಥಿನಿಯರ ಪ್ರತಿರೋಧದ ದನಿಯನ್ನು ಹೊಸಕಿಹಾಕುತ್ತದೆ.




- ಆಡಳಿತ ವ್ಯವಸ್ಥೆಯ ಜೊತೆಗಿನ ಆತನ ನಂಟಿನಿಂದಾಗಿ, ತನಗೆ ಮುಂದೆ ನೀಡಬಹುದಾದ ಅಪಾಯದ ಭಯದಿಂದಲೂ ವಿದ್ಯಾರ್ಥಿನಿಯರು ಮೌನವಾಗಿರುವುದಿದೆ.
- ಅಧ್ಯಾಪಕ ಸಾರ್ವಜನಿಕವಾಗಿ ಹೊಂದಿದ 'ಸಭ್ಯ', 'ಗೌರವಸ್ಥ', 'ಪ್ರತಿಭಾವಂತ', 'ವಿದ್ವಾಂಸ' – ಇವೇ ಮುಂತಾದ ಮುಖವಾಡಗಳು ಲೈಂಗಿಕ ಕಿರುಕುಳದ ವಿದ್ಯಮಾನವನ್ನು ಬಹಿರಂಗಪಡಿಸುವುದಕ್ಕೆ ವಿದ್ಯಾರ್ಥಿನಿಯರಲ್ಲಿ ಆತಂಕವನ್ನು ಹುಟ್ಟಿಸುತ್ತವೆ.
- ಸುಲಭದಲ್ಲಿ ಪಾಸಾಗುವ, ಪದವಿ ಪಡೆಯುವ, ಸಂಶೋಧನೆ ಪೂರೈಸುವ ಅವಕಾಶದ ಪ್ರಲೋಭನೆಗಳೂ ಲೈಂಗಿಕ ಕಿರುಕುಳವನ್ನು ಸಹಿಸಲು ಕಾರಣವಾಗಬಹುದು.
- ತನ್ನನ್ನೇ ಅಪರಾಧಿ ಸ್ಥಾನದಲ್ಲಿ ನಿಲ್ಲಿಸಿಬಿಡುವ ಭಯವೂ ಲೈಂಗಿಕ ಕಿರುಕುಳ ಸಹಿಸಲು ಕಾರಣವಾಗಿರುತ್ತದೆ.

**ಪ್ರತಿರೋಧದ ಎಳೆಗಳು**

- ಲೈಂಗಿಕ ಕಿರುಕುಳದ 'ಬಲಿಪಶು'ಗಳಾದವರಿಂದ ತೀರ ವಿರಳವಾಗಿಯಾದರೂ ಪ್ರತಿರೋಧ ಎದ್ದಿದೆ. ಆದರೆ ಅದು ಹಾಗೆಯೇ ತಣ್ಣಗಾಗಿದ್ದೂ ಇದೆ. ಇದಕ್ಕೆ ಕಾರಣಗಳು ಹತ್ತು ಹಲವು.
- ''ಈ ವಿಷಯವನ್ನು ಬಹಿರಂಗಗೊಳಿಸಿದರೆ ನಾನು ನೇಣು ಹಾಕಿಕೊಳ್ತೀನಿ'' ಎಂದು ಶೋಷಕ ಭಾವನಾತ್ಮಕವಾಗಿ ಬ್ಲ್ಯಾಕ್‌ಮೇಲ್ ಮಾಡಿದ್ದೂ ನಡೆದಿದೆ.
- ತರಗತಿಯ ವಿದ್ಯಾರ್ಥಿಗಳೆಲ್ಲ ಒಟ್ಟಾಗಿ, ಬರಹ ರೂಪದಲ್ಲಿ ಲೈಂಗಿಕ ಕಿರುಕುಳದ ಬಗ್ಗೆ ವಿಭಾಗದ ಮುಖ್ಯಸ್ಥರಿಗೆ ಮತ್ತು ವಿಶ್ವವಿದ್ಯಾನಿಲಯದ ಮುಖ್ಯಸ್ಥರಿಗೆ ದೂರು ನೀಡಿದ್ದಿದೆ. ಇದರಿಂದ ತಪ್ಪಿತಸ್ಥ ಅಧ್ಯಾಪಕ ಕೆಲಕಾಲ ಮುಖ ಕಳೆದುಕೊಂಡಂತೆ ಓಡಾಡಿದರೂ, ಕ್ರಮೇಣ ಮೇಲಧಿಕಾರಿ ಬದಲಾವಣೆಗೊಂಡಾಗ, ಅವರ ಒಲವು ಗಳಿಸಿ, ಕ್ರಮೇಣ ಅವರಿಗೆ ತಾನು ನಿಕಟ ಎಂದು ಜಗಜ್ಜಾಹೀರುಗೊಳಿಸುತ್ತ ತನ್ನ ಪೂರ್ವದ ವರ್ತನೆಯನ್ನು ಪುನರಾರಂಭಿಸಿದ್ದೂ ಇದೆ. ಇದು ವಿದ್ಯಾರ್ಥಿಗಳ ಪ್ರತಿರೋಧದ ಸಾಧ್ಯತೆಯನ್ನು ಹೊಸಕಿ ಹಾಕಿದೆ; ಅವರ ಜಂಘಾಬಲವನ್ನು ಕಸಿದುಕೊಂಡಿದೆ.
- ವಿಶ್ವವಿದ್ಯಾನಿಲಯದಲ್ಲಿ ಲೈಂಗಿಕ ಕಿರುಕುಳ ನಿಗ್ರಹ ಪಡೆ ನಿರ್ಮಾಣಗೊಂಡಿದ್ದರೂ ಅದು 'ಕಾಗದದ ಮೇಲಿನ ಹುಲಿ'ಯಂತಿದೆ. ಅದರ ಕಾರ್ಯಬಾಹುಳ್ಯದ ಕುರಿತು ಸಂಬಂಧಪಟ್ಟ ಅಧಿಕಾರಿಗಳಿಗೆ ಸ್ಪಷ್ಟತೆ ಇಲ್ಲದಿರುವುದು ಮತ್ತು ಅವರೂ ವಿಶ್ವವಿದ್ಯಾನಿಲಯದ ಅಧೀನ ಉದ್ಯೋಗಿಯೇ ಆಗಿರುವುದು ಒಂದು ಅಡ್ಡಿಯಾದರೆ, ನಿಗ್ರಹ ಪಡೆ ಸ್ವತಂತ್ರವಾಗಿ ಕಾರ್ಯನಿರ್ವಹಿಸಲು; ಸಮುದಾಯದಲ್ಲಿ ತನ್ನ ಅಸ್ತಿತ್ವವನ್ನು ಜಾಹೀರು ಪಡಿಸಲು ಅಗತ್ಯವಾದ ಆರ್ಥಿಕ ಬಲ ಇಲ್ಲದಿರುವುದೂ ಇನ್ನೊಂದು ಕಾರಣ.

ಒಟ್ಟಿನಲ್ಲಿ ಲೈಂಗಿಕ ಕಿರುಕುಳಗಳು ಶೈಕ್ಷಣಿಕ ವಲಯದಲ್ಲಿ ನಡೆಯುತ್ತಿರುವುದು ಸರ್ವವ್ಯಾಪ್ತಿಯಾಗಿರುವುದು ಸ್ಪಷ್ಟ. ಬಯಲಾಗುತ್ತಿರುವ ಪ್ರಕರಣಗಳು ಒಂದೆರಡಾದರೆ, ಬಯಲಾಗದವು ಹೇರಳ. ''ಮಾಷ್ಟ್ರು ತೊಂದ್ರೆ ಕೊಡ್ತಾರೆ'', ''ಮಾಷ್ಟ್ರು ಸುಮ್ನೆ ಸುಮ್ನೆ ಬೈತಾರೆ'' ಎಂದು ಶಾಲಾ ಹಂತದ ವಿದ್ಯಾರ್ಥಿನಿಯರ ಕಳವಳದ ಮಾತಿನ ಅರ್ಥ 'ಲೈಂಗಿಕ ಕಿರುಕುಳದ ಸಾಧ್ಯತೆ' ಎಂಬುದನ್ನು ನಾವು ಅರಿಯಬೇಕಾಗಿದೆ. ಎರಡನೆಯದಾಗಿ, ಲೈಂಗಿಕ ಕಿರುಕುಳಕ್ಕೆ ಗುರಿಯಾದಾಗ ಅದನ್ನು ಹೇಗೆ ಎದುರಿಸಬೇಕು ಮತ್ತು ಯಾಕೆ ಎದುರಿಸಬೇಕು ಎಂಬುದರ ಬಗ್ಗೆ ವಿದ್ಯಾರ್ಥಿನಿಯರಲ್ಲಿ ಅರಿವು ಮೂಡಿಸಬೇಕಾಗಿದೆ. ಮೂರನೆಯದಾಗಿ, ಹೆಣ್ಣುಮಕ್ಕಳು ಎಳವೆಯಲ್ಲಿ ಬೇರೆ ಬೇರೆ ಕಾರಣಕ್ಕೆ ಮೂಕರಾಗಿ ಲೈಂಗಿಕ ಕಿರುಕುಳವನ್ನು ಸಹಿಸಿದರೆ, ಪ್ರೌಢ ವಯಸ್ಸಿನಲ್ಲಿ ಇತರ ಕಾರಣಗಳಿಗಾಗಿ ಸಹಿಸುತ್ತಿದ್ದಾರೆ. 'ಸಹಿಸುವಿಕೆ'ಯನ್ನೇ ಮೌಲ್ಯ ಎಂದು ಸಮಾಜವು ಹೆಣ್ಣಿನ ಸಂದರ್ಭದಲ್ಲಿ ಪುನರ್‌ಸ್ಥಾಪಿಸುವುದರಿಂದಾಗಿ, ಅವರನ್ನು ಹೆಳವರನ್ನಾಗಿಸುವಲ್ಲಿ ತನ್ನ ಕೊಡುಗೆಯನ್ನು ನೀಡಿದೆ. ಪ್ರತಿರೋಧ ತೋರಲು ಎಳೆತನಕ್ಕಿಂತ ಪ್ರಾಪ್ತವಯಸ್ಸಿನಲ್ಲಿ ಹೇಡಿತನ ಹೆಚ್ಚಾಗಿ ಕಂಡುಬರುವುದು ಎಲ್ಲಕ್ಕಿಂತ ಹೆಚ್ಚು ವಿಷಾದದ ಸಂಗತಿಯಾಗಿದೆ. ಆದ್ದರಿಂದ, ಸಹಿಸುವಿಕೆ ದೌರ್ಬಲ್ಯ ಎನ್ನುವುದನ್ನು ಅರ್ಥಮಾಡಿಕೊಂಡು ಅದನ್ನು ಮೀರುವಂಥ, ತಮ್ಮ ಮೇಲಾಗುವ ಲೈಂಗಿಕ ಕಿರುಕುಳವನ್ನು ಪ್ರತಿಭಟಿಸುವ ಮತ್ತು ಪ್ರಶ್ನಿಸುವ ಮನೋಭಾವವನ್ನು ಹೆಣ್ಣುಮಕ್ಕಳಲ್ಲಿ ಬೆಳೆಸಬೇಕಾಗಿದೆ.


ಡಾ॥ ಸಬೀಹಾ ಭೂಮೀಗೌಡ
ಕನ್ನಡ ಪ್ರಾಧ್ಯಾಪಕರು, ಮಂಗಳೂರು ವಿಶ್ವವಿದ್ಯಾನಿಲಯ
ಕೊಣಾಜೆ - ೫೭೪ ೧೯೯

# ಇರಾನ್ : ಏಕಸ್ವಾಮ್ಯ ವ್ಯವಸ್ಥೆಯಲ್ಲಿ ಬಿರುಕು




ಸೀಯಾರ್ಕ

ಇರಾನಿನಲ್ಲಿ ಸಾರ್ವತ್ರಿಕ ಚುನಾವಣೆಗಳು ನಡೆದು ಫಲಿತಾಂಶ ಹೊರಬೀಳುತ್ತಿದ್ದಂತೆ ದೇಶದ ಎಲ್ಲ ಭಾಗಗಳಲ್ಲೂ ವ್ಯಾಪಕವಾದ ಗಲಭೆ, ಹಿಂಸಾಚಾರ, ನಾಲ್ಕಾರು ದಿನಗಳ ಕಾಲ ನಡೆದ ದಾಂಧಲೆ, ಪೊಲೀಸರ ಮತ್ತು ಪ್ರತಿಭಟನಾಕಾರರ ಮಧ್ಯೆ ದೊಡ್ಡ ಪ್ರಮಾಣದಲ್ಲಿ ಘರ್ಷಣೆ, ವಾಹನಗಳಿಗೆ ಬೆಂಕಿ ಎಲ್ಲ ಇರಾನಿನಲ್ಲಿ ಮತ್ತೊಂದು ದೊಡ್ಡ ಆಂದೋಳನ ಆರಂಭವಾಗಿರುವಂತೆ ಭಾಸವಾಯಿತು. ವ್ಯವಸ್ಥೆ ಕುಸಿದುಬಿದ್ದು ಹೊಸ ವ್ಯವಸ್ಥೆಯೊಂದು ಬರುವ ಸಾಧ್ಯತೆಯ ಲೆಕ್ಕಾಚಾರದಲ್ಲಿ ಪಾಶ್ಚಾತ್ಯ ರಾಷ್ಟ್ರಗಳ ರಾಜಕಾರಣಿಗಳು ಹರ್ಷಚಿತ್ತರಾಗಿದ್ದರು. ಆದರೆ ಈ ಪ್ರತಿಭಟನೆಗಳು ಅಷ್ಟೇ ಬೇಗ ತಣ್ಣಗಾಯಿತು. ಪಾಶ್ಚಾತ್ಯ ರಾಷ್ಟ್ರಗಳ ಲೆಕ್ಕಾಚಾರ ಸದ್ಯಕ್ಕೆ ತಲೆಕೆಳಗಾಗಿದೆ. ಈಗ ಪ್ರತಿಭಟನೆಗಳೇನೂ ಇಲ್ಲದೆ ಶಾಂತ ಪರಿಸ್ಥಿತಿ ಇದ್ದರೂ ಎಲ್ಲ ಬೂದಿಮುಚ್ಚಿದ ಕೆಂಡದಂತಿವೆ. ಯಾವ ಸಮಯದಲ್ಲಾದರೂ ಅತೃಪ್ತಿ ಭುಗಿಲೇಳುವ ಸಂಭವವಿದೆ. ಇರಾನಿನ ಸಮಾಜ ಹಾಗೂ ವ್ಯವಸ್ಥೆ ಇಂದು ಒಡೆದ ಮನೆಯಂತಾಗಿವೆ ಎಂಬುದಂತೂ ಸ್ಪಷ್ಟ. ಅದು ಬಹಿರಂಗವಾಗಿ ಕಾಣುವುದಿಲ್ಲವಾದರೂ, ಇಸ್ಲಾಮಿಕ್ ಮುಖಂಡರನ್ನೂ ಒಳಗೊಂಡಂತೆ, ವ್ಯವಸ್ಥೆಯ ಸೂತ್ರಧಾರಿಗಳವರೆಗೆ ಬಿರುಕು ಉಂಟಾಗಿದೆ. ಮೂರು ದಶಕಗಳಿಗೂ ಹಿಂದಿನಿಂದ ಇರಾನಿನ ಸಮಾಜದ ಮೇಲೆ ಇದ್ದ ಆ ರಾಷ್ಟ್ರದ ಮಹಾನಾಯಕ ಅಯಾತೊಲ್ಲಾ ಖೊಮೇನಿಯ ಹಿಡಿತ ಜಾರಿದೆ. ಹೊಸ ಪೀಳಿಗೆಯ ಜನ ಈಗ ಬದಲಾವಣೆಯ, ಇಸ್ಲಾಮಿಕ್ ವ್ಯವಸ್ಥೆಯಲ್ಲಿ ಸುಧಾರಣೆಯ ಅಪೇಕ್ಷೆ ಹೊಂದಿದ್ದಾರೆ. ಇದು ಸಹಜವಾದ್ದೆ. ಧಾರ್ಮಿಕ ಚೌಕಟ್ಟಿನ ಕಟ್ಟುಪಾಡುಗಳಿಂದ ಯುವ ಜನಾಂಗ ಬೇಸತ್ತಿದೆ. ಆದರೆ ಈ ಅತೃಪ್ತಿಗೆ ಪೋಷಣೆ ನೀಡುತ್ತಿರುವ ಬಾಹ್ಯ ಶಕ್ತಿಗಳೂ ಇವೆ ಎನ್ನುವುದನ್ನು ಮರೆಯುವ ಹಾಗಿಲ್ಲ. ಬದಲಾವಣೆಯ ಅಪೇಕ್ಷೆ ಅಮೆರಿಕಾದ ಪ್ರೇರಣೆಯಿಂದ, ಬೆಂಬಲದಿಂದ. ಅದರ ಆಮಿಷಗಳಿಗೆ ಬಲಿಯಾಗಬಾರದೆಂಬುದೇ ಅಪೇಕ್ಷೆ.

ಜೂನ್ ತಿಂಗಳಲ್ಲಿ ನಡೆದ ಚುನಾವಣೆಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಅಕ್ರಮಗಳು ನಡೆದಿವೆ ಎಂಬುದು ವಿರೋಧಿ ನಾಯಕ ಹುಸೇನ್ ಮುಸಾವಿ ಹಾಗೂ ಅವರ ಬೆಂಬಲಿಗರ ಆರೋಪವೇ ದೇಶಾದ್ಯಂತ ಬೃಹತ್ ಆಂದೋಲನಕ್ಕೆ ಕಾರಣ. ಅಧಿಕಾರಸ್ಥ ಅಧ್ಯಕ್ಷ ಮಹಮೂದ್ ಅಹ್ಮದಿನೆಜಾದ್ ಅತ್ಯಧಿಕ ಬಹುಮತದಿಂದ ಮತ್ತೆ ಆರಿಸಿಬಂದದ್ದು ಒಂದು ವಿಸ್ಮಯ, ಅನಿರೀಕ್ಷಿತ. ಪ್ರತಿಸ್ಪರ್ಧಿಗಿಂತಲೂ ಅಹ್ಮದಿನೆಜಾದ್ ಎರಡರಷ್ಟು ಅಂತರದಲ್ಲಿ ಗೆದ್ದಿದ್ದಾರೆ. ಗಲಭೆಗಳ ನಂತರ ಪುನರ್ ಎಣಿಕೆಗೆ ಆದೇಶ ನೀಡಲಾಯಿತು. ಇರಾನಿನ ಮಹಾನಾಯಕ ಅಯಾತೊಲ್ಲಾ ಖೊಮೇನಿ ಚುನಾವಣೆಗಳಲ್ಲಿ ಯಾವುದೇ ಅಕ್ರಮ ನಡೆದಿಲ್ಲ, ಫಲಿತಾಂಶ ಸಮರ್ಪಕವಾಗಿದೆ ಎಂದು ಅಧ್ಯಕ್ಷ ಅಹ್ಮದಿನೆಜಾದ್ ಬೆಂಬಲ ನಿಂತದ್ದು ಅಚ್ಚರಿಗೊಳಿಸಿದೆ ಮತ್ತು ಬಹುತೇಕ ಇರಾನಿಯನ್ನರಿಗೆ ಅದು ತೃಪ್ತಿ ತಂದಿಲ್ಲ. ಹೀಗಾಗಿ ಅತೃಪ್ತಿ ಇನ್ನೂ ಹೊಗೆಯಾಡುತ್ತಿದೆ.

ಚುನಾವಣೆಗಳ ನಂತರ ನಡೆದ ಪ್ರತಿಭಟನೆಗಳಲ್ಲಿ ಭಾಗಿಯಾಗಿದ್ದವರು ಅಧಿಕವಾಗಿ ವಿದ್ಯಾರ್ಥಿಗಳು. ಮೊದಲಿಗೆ ಇರಾನಿನ ವಿಶ್ವವಿದ್ಯಾಲಯದಿಂದಲೇ ಪ್ರತಿಭಟನೆಯ ಕಿಡಿ ಹಾರಿದ್ದು. ಚುನಾವಣೆಗಳಲ್ಲಿ ಅಮೆರಿಕಾ ಅತೀವ ಆಸಕ್ತಿ ಹೊಂದಿತ್ತು. ಪ್ರತಿಸ್ಪರ್ಧಿಗೆ ಸಾಕಷ್ಟು ನೆರವನ್ನೂ ನೀಡಿತು. ಪ್ರಚಲಿತ ಇರಾನ್ ಅಧ್ಯಕ್ಷರು ಮತ್ತು ಅಮೆರಿಕಾದ ಆಡಳಿತೆಯ ನಡುವೆ ಇರುವ ವೈಮನಸ್ಯ ರಹಸ್ಯವೇನಲ್ಲ. ಅದರಿಂದಲೇ ಪಾಶ್ಚಾತ್ಯ ರಾಷ್ಟ್ರಗಳು ಇರಾನಿನ ಚುನಾವಣೆಗಳ ಫಲಿತಾಂಶದಲ್ಲಿ ತೀವ್ರವಾದ ಆಸಕ್ತಿ ಹೊಂದಿದ್ದವು. ಪ್ರತಿಸ್ಪರ್ಧಿ ಮುಸಾವಿ ಪಾಶ್ಚಾತ್ಯರ ಏಜಂಟರೇನಲ್ಲ. ಆದರೆ ಮೃದುಧೋರಣೆ ಪರವಾಗಿರುವಾತ ಹಾಗೂ ಇರುವ ಇಸ್ಲಾಮಿಕ್ ವ್ಯವಸ್ಥೆಯಲ್ಲಿಯೇ ಸುಧಾರಣೆಗಳನ್ನು, ಮಾರ್ಪಾಟುಗಳನ್ನು ತರಬಯಸಿದ್ದ ವ್ಯಕ್ತಿ. ಬದಲಾವಣೆಗೆ ಯುವಜನರಲ್ಲಿ ಅಪೇಕ್ಷೆಯೂ ಬಲವಾಗಿದ್ದುದರಿಂದ ಚುನಾವಣೆಗಳಲ್ಲಿ ಜಯಗಳಿಸುವ ಭರವಸೆಯಿತ್ತು. ಇರಾನಿನ ಚುನಾವಣೆಯ ವಿವಾದ ಇಷ್ಟಕ್ಕೆ ಮುಗಿದಂತಿಲ್ಲ. ಕಾಲಕ್ರಮೇಣ ಮತ್ತೆ ಅದು ತಲೆ ಎತ್ತುವ ಸಾಧ್ಯತೆಗಳೇ ಹೆಚ್ಚು. ಪಶ್ಚಿಮ ಏಶಿಯಾದಲ್ಲಿ ಅಮೆರಿಕಾವನ್ನು ಎದುರಿಸುತ್ತಿರುವ ರಾಷ್ಟ್ರ ಇರಾನ್. ನ್ಯೂಕ್ಲಿಯರ್ ಶಕ್ತಿ ವಿಷಯದಲ್ಲಿ ಮನಸ್ತಾಪ, ವಿವಾದ ಹಾಗೆಯೇ ಇದೆ. ಇರಾನ್‌ಅನ್ನು ಮಣಿಸಲು ಅಮೆರಿಕಾದ ಆಡಳಿತ ತನ್ನ ಪ್ರಯತ್ನಗಳನ್ನು ಮುಂದುವರಿಸಿದೆ.

ಇರಾನಿನ ವ್ಯವಹಾರಗಳಲ್ಲಿ ಅಮೆರಿಕಾದ ಆಸಕ್ತಿ ಇಂದು ನಿನ್ನೆಯದಲ್ಲ. ಅರ್ಧ ಶತಮಾನಕ್ಕೂ ಹಿಂದಿನಿಂದ ಅದು ಇರಾನಿನ ವ್ಯವಹಾರಗಳಲ್ಲಿ ತಲೆಹಾಕುತ್ತ ಬಂದಿದೆ. ಇರಾನಿನಲ್ಲಿ ಕ್ರಾಂತಿಕಾರಿ ಬದಲಾವಣೆಗೆ ಪ್ರಾರಂಭವಾದುದು ಐವತ್ತರ ದಶಕದಲ್ಲಿ. ಅಮೆರಿಕಾದ ಕೈಗೊಂಬೆಯಾಗಿದ್ದ ಷಾ ವಂಶಸ್ಥರನ್ನು ಪದಚ್ಯುತಗೊಳಿಸಿ ೧೯೫೧ರಲ್ಲಿ ಮೊಸಾದೆಕ್ ನೇತೃತ್ವದಲ್ಲಿ ಹೊಸ ಸರಕಾರ ಅಸ್ತಿತ್ವಕ್ಕೆ ಬಂದಿತು. ಅದು ಶೀತಲಯುದ್ಧದ ಪ್ರಾರಂಭದ ಕಾಲ ಬೇರೆ. ಮೊಸಾದೆಕ್ ಪುರೋಗಾಮಿ ಚಿಂತಕ. ಅಂದಿನ ದಿನಗಳಲ್ಲಿ ರಾಷ್ಟ್ರೀಯವಾದ ಉತ್ತುಂಗದಲ್ಲಿತ್ತು. ಹೊಸದಾಗಿ ಸ್ವತಂತ್ರಗೊಂಡ ದೇಶಗಳು ತಮ್ಮ ಸಂಪನ್ಮೂಲಗಳ ಮೇಲೆ ಸ್ವಾಮ್ಯ ಸ್ಥಾಪಿಸಲು ಕಾತುರವಾಗಿದ್ದುವು. ಇರಾನ್‌ನ ತೈಲೋದ್ಯಮವನ್ನು ರಾಷ್ಟ್ರೀಕರಣಗೊಳಿಸುವ ಮೊಸಾದೆಕ್‌ರ ಕ್ರಮ ಅಮೆರಿಕಾದ ಕಣ್ಣು ಕೆಂಪಗಾಗಿಸಿತು. ಸಿಐಎ ಸಂಚುಮಾಡಿ ಆತನನ್ನು ಪದಚ್ಯುತಗೊಳಿಸಿ ಕೊಲೆಮಾಡಿತು. ಇದನ್ನು ಬಹಿರಂಗವಾಗಿ ಸಿಐಎ ದಾಖಲೆಗಳೇ ಈಚೆಗೆ ಒಪ್ಪಿಕೊಂಡಿವೆ. ಅದಾದನಂತರ ಅಮೆರಿಕಾ ತನ್ನ ನೆಚ್ಚಿನ ಭಂಟ ಷಾನನ್ನು ಸಿಂಹಾಸನದ ಮೇಲೆ ಕೂರಿಸಿತು. ಎರಡು ದಶಕಗಳ ಆಡಳಿತ ನಡೆಸಿದ ಈತ ಭ್ರಷ್ಟಾಚಾರದಿಂದ ತನ್ನ ಗೋರಿಯನ್ನು ತಾನೇ ತೋಡಿಕೊಂಡ. ದೇಶತ್ಯಾಗ ಮಾಡಿ ಪ್ಯಾರಿಸ್‌ನಲ್ಲಿ ತಂಗಿದ್ದ ಅಯಾತೊಲ್ಲಾ ಖೊಮೇನಿ ಅಲ್ಲಿಂದಲೇ ನಿರ್ದೇಶಿಸಿದ ಇಸ್ಲಾಮಿಕ್ ಆಂದೋಲನ ಷಾನ ಆಡಳಿತವನ್ನು ಅಂತ್ಯಗೊಳಿಸಿ ೧೯೭೦ರ ದಶಕದಲ್ಲಿ ಇಸ್ಲಾಮಿಕ್ ಆಡಳಿತ ತಂದಿತು. ಮೂರು ದಶಕಗಳ ನಂತರ ಈಗ ಮತ್ತೆ ಇರಾನಿನ ಸಮಾಜದಲ್ಲಿ ತಳಮಳ. ಇದು ಯಾವ ರೂಪ ತಳೆಯುವುದೋ ಕಾದು ನೋಡಬೇಕು.



# ಬಹುಮುಖೀ ಜಾಗತಿಕ ಆರ್ಥಿಕ ವ್ಯವಸ್ಥೆಯತ್ತ

ಜಾಗತಿಕ ಹಣಕಾಸು ವ್ಯವಸ್ಥೆಯಲ್ಲಿ, ಅರ್ಥವ್ಯವಸ್ಥೆಯಲ್ಲಿ ತಲೆದೋರಿರುವ ಅಲ್ಲೋಲಕಲ್ಲೋಲದಲ್ಲಿ ಏನಾದರೂ ಆಶಾಕಿರಣ ಕಂಡುಬಂದಿದೆ ಎಂದರೆ, ಅದು ಬಹುಮುಖೀ ಜಾಗತಿಕ ಅರ್ಥವ್ಯವಸ್ಥೆಯತ್ತ ನಡೆಯುತ್ತಿರುವ ಹುಡುಕಾಟ ಎನ್ನಬಹುದು. ಬಂಡವಾಳಶಾಹಿ ಜಾಗತಿಕ ಅರ್ಥವ್ಯವಸ್ಥೆಯಲ್ಲಿ, ಮುಖ್ಯವಾಗಿ ಅಮೆರಿಕಾದ ಅರ್ಥವ್ಯವಸ್ಥೆಯಲ್ಲಿ ಸಂಭವಿಸಿರುವ ಮಹಾ ಆರ್ಥಿಕ ಕುಸಿತ ಪ್ರಪಂಚದ ಎಲ್ಲ ದೇಶಗಳನ್ನು ಬಾಧಿಸಿದೆ. ಜಾಗತೀಕರಣ, ಉದಾರೀಕರಣಗಳ ಭರಾಟೆಯಲ್ಲಿ ಸಿಕ್ಕಿಬಿದ್ದು, ವಿದೇಶೀ ಬಂಡವಾಳದ ಮುಕ್ತ ಪ್ರವಾಹಕ್ಕೆ ಬಾಯಿತೆರೆದ ಅಭಿವೃದ್ಧಿಶೀಲ ದೇಶಗಳ ಪ್ರಗತಿಗೆ ಭಾರಿ ಹೊಡೆತ ಬಿದ್ದಿದೆ. ಈ ಬಿಕ್ಕಟ್ಟಿನಿಂದ ಪಾರಾಗಲು ಬಂಡವಾಳಶಾಹಿ ಜಗತ್ತಿನ ಶ್ರೀಮಂತ ರಾಷ್ಟ್ರಗಳು ಈವರೆಗೆ ನಡೆಸಿರುವ ಶೃಂಗಸಭೆಯ ಕಸರತ್ತುಗಳೆಲ್ಲ ಮಣ್ಣುಮುಕ್ಕಿವೆ. ಜಿ.೭, ಜಿ.೮, ಜಿ.೨೦ರ ಸಮಾವೇಶಗಳು ದಾರಿಕಾಣದ ನೀರಸ ಹೇಳಿಕೆಗಳಿಂದ ತೃಪ್ತಿಪಟ್ಟುಕೊಳ್ಳಬೇಕಾಗಿ ಬಂದಿದೆ. ಇತ್ತೀಚೆಗೆ ಜರುಗಿದ ಜಿ.೮ರ ಶೃಂಗಸಭೆ ಅದಕ್ಕೆ ಉದಾಹರಣೆ. ಇವೆಲ್ಲ ನೋಡಿದರೆ ಸದ್ಯಕ್ಕಂತೂ ಬಂಡವಾಳಶಾಹಿ ಜಗತ್ತು ಚೇತರಿಸಿಕೊಳ್ಳುವ ಸೂಚನೆ ಕಂಡುಬರುತ್ತಿಲ್ಲ. ಹೊಸ ಹಾದಿ ಅರಸಬಯಸದ ಶ್ರೀಮಂತ ಬಂಡವಾಳಶಾಹಿ ದೇಶಗಳು ಬೇರೆ ದಾರಿಕಾಣದೆ ಸ್ವಹಿತ ರಕ್ಷಣೆಯ ಮಾರ್ಗ ಅನುಸರಿಸುತ್ತಿವೆ. ಅವುಗಳಿಗೆ ಅಭಿವೃದ್ಧಿಶೀಲ ಬಡರಾಷ್ಟ್ರಗಳ ಚಿಂತೆ ಎಲ್ಲಿಂದ ಬಂದೀತು !

ಹೊಸ ಹಾದಿ ಕಂಡುಕೊಳ್ಳುವುದು ಈಗ ಅಭಿವೃದ್ಧಿ ರಾಷ್ಟ್ರಗಳ ಪಾಲಿಗೆ ಬಂದಿದೆ. ಜಾಗತಿಕ ವಿತ್ತೀಯ ಸಂಸ್ಥೆಗಳಲ್ಲಿ ಸುಧಾರಣೆಯನ್ನು ತರಲು ಈಗ ಈ ರಾಷ್ಟ್ರಗಳು ಒತ್ತಾಯ ತರುತ್ತಿವೆ. ಐಎಂಎಫ್, ವರ್ಲ್ಡ್‌ಬ್ಯಾಂಕ್, ವಿಶ್ವವಾಣಿಜ್ಯ ಸಂಸ್ಥೆ ಮೊದಲಾದವುಗಳಲ್ಲಿ ಶ್ರೀಮಂತ ರಾಷ್ಟ್ರಗಳ ಬಿಗಿಹಿಡಿತವನ್ನು ಮುರಿಯಲು ಅವು ಬಯಸುತ್ತಿವೆ. ಪ್ರಪಂಚದ ಸಂಖ್ಯೆಯಲ್ಲಿ ಶೇ. ೪೦ರಷ್ಟನ್ನು ಪ್ರತಿನಿಧಿಸುವ ದೇಶಗಳು ಬ್ರೆಜಿಲ್, ರಷ್ಯಾ, ಭಾರತ ಮತ್ತು ಚೀನಾ [ಇಂಗ್ಲಿಷಿನಲ್ಲಿ ಈ ರಾಷ್ಟ್ರಗಳ ಗುಂಪನ್ನು 'ಬಿಆರ್‌ಐಸಿ' (ಬ್ರಿಕ್) ಎನ್ನುತ್ತಾರೆ.] ಪ್ರಪಂಚದ ನಿವ್ವಳ ಉತ್ಪಾದನೆಯಲ್ಲಿ ಇವುಗಳ ಪಾಲು ಸುಮಾರು ಶೇ. ೨೦ರಷ್ಟು. ಇವು ಪ್ರಪಂಚದ ಹಣಕಾಸಿನ ನಿಕ್ಷೇಪದಲ್ಲಿ ಅರ್ಧದಷ್ಟು ಪಾಲು ಹೊಂದಿವೆ. ಆದರೆ ಈ ದೇಶಗಳು ಐಎಂಎಫ್‌ನಲ್ಲಿ ಹೊಂದಿರುವ ಮತ ಶೇ. ೧೦ರಷ್ಟು ಮಾತ್ರ. ಆದರೆ ಅಮೆರಿಕಾ ಶೇ. ೧೭ರಷ್ಟು ಹೊಂದಿದೆ! ಎಲ್ಲ ಶ್ರೀಮಂತ ರಾಷ್ಟ್ರಗಳನ್ನು ಸೇರಿಸಿದರೆ ಅದು ಶೇ. ೫೦ಕ್ಕಿಂತ ಹೆಚ್ಚಿದೆ. ಈ ಅಸಮತೆ, ತಾರತಮ್ಯ ಏಕೆ ? ಎಲ್ಲ ದೇಶಗಳಿಗೂ ಸಮಾನ ಅವಕಾಶ ಇರಬೇಕಲ್ಲವೆ ಎಂಬುದು ಇಂದಿನ ಪ್ರಶ್ನೆ.

ಜೂನ್ ತಿಂಗಳಲ್ಲಿ ರಷ್ಯಾದ ಎಕತೆರೀನ್‌ಬರ್ಗ್ ಎಂಬಲ್ಲಿ 'ಬ್ರಿಕ್' ದೇಶಗಳ ಶೃಂಗಸಭೆ ಜರುಗಿತು. ಅದೇ ಸಮಯದಲ್ಲಿ ಅಲ್ಲಿಯೇ ಶಾಂಘಾಯ್ ಸಹಕಾರ ತಂಡದ ದೇಶಗಳ ಶೃಂಗಸಭೆಯೂ ಜರುಗಿತು. ಭಾರತ ಇವೆರಡರಲ್ಲೂ ಭಾಗವಹಿಸಿತ್ತು. ಪ್ರಧಾನಿ ಮನಮೋಹನ ಸಿಂಗ್ ಭಾರತವನ್ನು ಪ್ರತಿನಿಧಿಸಿದ್ದರು. ಈ ಶತಮಾನದ ಪ್ರಾರಂಭದಲ್ಲಿ ಅನೌಪಚಾರಿಕವಾದ ಸಮಾಲೋಚನೆಯೊಂದಿಗೆ ಅಸ್ತಿತ್ವಕ್ಕೆ ಬಂದ ಈ ಗುಂಪುಗಳು ಈಗ ಸಾಕಷ್ಟು ಮುನ್ನಡೆ ಸಾಧಿಸಿವೆ. ವಿಶ್ವಸಂಸ್ಥೆಯ ಅಂತರರಾಷ್ಟ್ರೀಯ ಸಮಾವೇಶಗಳು ನಡೆಯುತ್ತಿದ್ದ ಸಮಯದಲ್ಲಿ ವಿದೇಶಾಂಗ ಸಚಿವರ, ಅಧಿಕಾರಿಗಳ ಮಟ್ಟದಲ್ಲಿ ಪರಸ್ಪರ ಸಮಾಲೋಚನೆಯಲ್ಲಿ ತೊಡಗಿದ್ದ ಈ ದೇಶಗಳು, ಅಂದರೆ ಶಾಂಘಾಯ್ ಗುಂಪು ಮತ್ತು ಬ್ರಿಕ್ ಗುಂಪಿನ ದೇಶಗಳು ಈ ಸಂಘಟನಾರೂಪ ತಳೆದಿರುವುದು ಒಂದು ಮುಖ್ಯ ಬೆಳವಣಿಗೆ. ಅದಕ್ಕೆ ಎಕತೆರೀನ್‌ಬರ್ಗ್‌ನಲ್ಲಿ ಜರುಗಿದ ಶೃಂಗಸಭೆಯೇ ಸಾಕ್ಷಿ. ಶಾಂಘಾಯ್ ಗುಂಪಿನ ದೇಶಗಳು ವ್ಯವಸ್ಥಿತವಾದ ರೀತಿಯಲ್ಲಿ ಪರಸ್ಪರ ಸಹಕಾರಕ್ಕೆ ಅಗತ್ಯವಾದ ಸಂಘಟನಾರೂಪ ಪಡೆದುಕೊಂಡು ಮುನ್ನಡೆ ಸಾಧಿಸಿವೆ. 'ಬ್ರಿಕ್' ದೇಶಗಳ ಶೃಂಗಸಭೆ ಈಗ ಸ್ಪಷ್ಟವಾಗಿ ಸಂಘಟನಾರೂಪ ಪಡೆಯುತ್ತಿದೆ. ೨೦೧೦ರಲ್ಲಿ ಬ್ರೆಜಿಲ್‌ನಲ್ಲಿ ಇನ್ನೊಂದು ಶೃಂಗಸಭೆ ಜರುಗಲಿದೆ. ಅದಕ್ಕೆ ಸಿದ್ಧತೆ ನಡೆಸಲು ವಿದೇಶಾಂಗ ಸಚಿವರ ಮಟ್ಟದಲ್ಲಿ ಒಂದು ವ್ಯವಸ್ಥೆ ಮಾಡಲಾಗಿದೆ. ಪರಸ್ಪರ ಸಹಕಾರದ ಜೊತೆಗೆ ಈ ಎರಡು ಸಂಘಟನೆಗಳ ಮೂಲ ಉದ್ದೇಶ ಏಕಮುಖೀ ಜಾಗತಿಕ ಅರ್ಥವ್ಯವಸ್ಥೆಯನ್ನು ಮಾರ್ಪಡಿಸಿ, ಅದನ್ನು ಬಹುಮುಖಿಯಾಗಿಸುವುದೇ ಆಗಿದೆ. ಈ ಪ್ರಯತ್ನ ಸಫಲಗೊಳ್ಳಲಿ ಎನ್ನುವುದೇ ಎಲ್ಲರ ಹಾರೈಕೆ. ಪ್ರಾದೇಶಿಕವಾಗಿ ಈಗಾಗಲೇ ಲ್ಯಾಟಿನ್ ಅಮೆರಿಕಾ ದೇಶಗಳು ಈ ದಿಶೆಯಲ್ಲಿ ಮುಂದೆ ಹೆಜ್ಜೆ ಇರಿಸಿವೆ. ಇಂಥದೇ ಪ್ರಯತ್ನವನ್ನು ಇತರ ಪ್ರಾದೇಶಿಕ ಸಮೂಹಗಳು ಅದರಲ್ಲೂ ಮುಖ್ಯವಾಗಿ ಸಾರ್ಕ್ ಮತ್ತು ಆಸಿಯಾನ್ ರಾಷ್ಟ್ರಗಳು ಹೆಜ್ಜೆ ಇರಿಸಬೇಕಾಗಿದೆ.


ಸೀಯಾರ್ಕೆ

'ಚೌಡೇಶ', ೪೦೯, ಬನಶಂಕರಿ ೩ನೇ ಹಂತ, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫





ತಾ|| ೨೧-೦೬-೨೦೦೯ರಂದು ನವಕರ್ನಾಟಕದ 'ವನಿತಾ ಚಿಂತನ ಮಾಲೆ'ಯ ಹತ್ತು ಕೃತಿಗಳ ಲೋಕಾರ್ಪಣೆ ಸಮಾರಂಭ ಬೆಂಗಳೂರಿನಲ್ಲಿ ನಡೆಯಿತು. ಡಾ|| ವಿಜಯಾ ಸಮಾರಂಭದ ಅಧ್ಯಕ್ಷತೆ ವಹಿಸಿ ಪುಸ್ತಕ ಅನಾವರಣ ಮಾಡಿದರು. ಡಾ|| ಪ್ರೀತಿ ಶುಭಚಂದ್ರ ಮುಖ್ಯ ಅತಿಥಿಯಾಗಿ ಭಾಗವಹಿಸಿ 'ಸ್ತ್ರೀವಾದಿ ಪರ ಆಂದೋಳನ'ಗಳ ಕುರಿತು ಉಪನ್ಯಾಸ ನೀಡಿದರು. ಹತ್ತು ಪುಸ್ತಕಗಳ ಪೈಕಿ ಮೂರು ಕನ್ನಡ ಕೃತಿಗಳು. ಉಳಿದವು ತಮಿಳು, ಮಲಯಾಳಂ, ಮರಾಠಿ, ಹಿಂದಿ, ಬಂಗಾಳಿ ಭಾಷೆಗಳಿಂದ ಅನುವಾದಗೊಂಡ ಆತ್ಮಕಥೆಗಳು ಮತ್ತು ಕಾದಂಬರಿಗಳು. ಕೃತಿಗಳ ಅನುವಾದಕರು ಸಮಾರಂಭದಲ್ಲಿ ಭಾಗವಹಿಸಿದ್ದರು.

ಚಿತ್ರದಲ್ಲಿ (ಎಡದಿಂದ ಬಲಕ್ಕೆ) ಆರ್. ಎಸ್. ರಾಜಾರಾಮ್, ಜಿ. ಎಸ್. ಜಯದೇವ, ಕುಸುಮಾ ಶಾನುಭಾಗ, ಜಾನಕಿ ಸುಂದರೇಶ್, ಡಾ|| ಪ್ರೀತಿ ಶುಭಚಂದ್ರ, ಡಾ|| ವಿಜಯಾ, ಪ್ರೊ|| ಪಾರ್ವತಿ ಜಿ. ಐತಾಳ್, ಮಿಸ್ ಸಂಪತ್, ಜಿ. ಎನ್. ಕುಸುಮ ಗೀತ, ಜಿ. ಕುಮಾರಪ್ಪ ಮತ್ತು ಎಸ್. ಫ್ರ್ಯಾಂಕ್ಲಿನ್ ದಾಸ್.



# ಎಡ್ವರ್ಡ್ ಜೆನ್ನರ್

ಹಿಂದೊಮ್ಮೆ ಒಂದು ಭಯಂಕರ ದುಃಸ್ವಪ್ನವಾಗಿದ್ದ ಸಿಡುಬು ರೋಗ ಈಗ ಹೇಳ ಹೆಸರಿಲ್ಲದಂತೆ ಈ ಜಗತ್ತಿನಿಂದ ಕಣ್ಮರೆಯಾಗಿಹೋಗಿದೆ. ಆ ರೋಗದ ಮೂಲೋತ್ಪಾಟನೆಗೆ ಕಾರಣವಾದವನು ಎಡ್ವರ್ಡ್ ಜೆನ್ನರ್ ಎಂಬ ಬ್ರಿಟಿಷ್ ವೈದ್ಯ. ಕಳೆದ ಮೇ ತಿಂಗಳ ೧೭ಕ್ಕೆ ಸರಿಯಾಗಿ ಇನ್ನೂರ ಅರುವತ್ತು ವರ್ಷಗಳ ಹಿಂದೆ, ಅಂದರೆ ೧೭೪೯ರ ಮೇ ೧೭ರಂದು ಇಂಗ್ಲೆಂಡಿನ ಗ್ಲೌಸೆಸ್ಟರ್ ಜಿಲ್ಲೆಯ ಬರ್ಕ್ಲಿ ಎಂಬಲ್ಲಿ ಪಾದ್ರಿಯೊಬ್ಬನ ಮಗನಾಗಿ ಜನಿಸಿದ ಜೆನ್ನರ್, ಶಾಲಾ ವಿದ್ಯಾಭ್ಯಾಸ ಮುಗಿಸಿದ ತರುವಾಯ ವೈದ್ಯನೊಬ್ಬನ ಬಳಿ ಕಲಿಕೆ ಕಸುಬಿಯಾಗಿ ಸೇರಿ, ೧೭೯೨ರಲ್ಲಿ ಸೇಂಟ್ ಆಂಡ್ರ್ಯೂಸ್ ವಿಶ್ವವಿದ್ಯಾನಿಲಯದಿಂದ ವೈದ್ಯಕೀಯ ಡಿಗ್ರಿ ಪಡೆದುಕೊಂಡ. ವೈದ್ಯಕೀಯ ವೃತ್ತಿಯಲ್ಲಿ ತೊಡಗಿದ ತರುವಾಯ ಅವನ ಆಸಕ್ತಿ ಸಂಪೂರ್ಣವಾಗಿ ಸಿಡುಬು ರೋಗದ ಕಡೆಗೆ ಹೊರಳಿತು. ಅಂದಿನ ದಿನಗಳಲ್ಲಿ ಲಘುವಾಗಿಯಾಗಲೀ ಉಗ್ರವಾಗಿಯಾಗಲೀ ಆ ರೋಗ ಹೆಚ್ಚು ಕಡಿಮೆ, ಎಲ್ಲರಿಗೂ ತಗಲುತ್ತಿತ್ತು. ಅದರಿಂದ ತಪ್ಪಿಸಿಕೊಂಡವರೇ ವಿರಳ. ರೋಗ ಸಾಂಕ್ರಾಮಿಕವಾಗಿ ಹರಡ ತೊಡಗಿದಾಗ, ರೋಗ ತಗುಲಿದವರಲ್ಲಿ ಮೂರರಲ್ಲೊಂದು ಭಾಗದಷ್ಟು ಜನ ಸಾವನ್ನಪ್ಪುತ್ತಿದ್ದರು. ಹಾಗೆ ಸಾಯದೆ ಉಳಿದವರ ಮೈಮೇಲೆಲ್ಲ ಬೊಕ್ಕೆಗಳ ಗುರುತುಗಳು ಉಳಿದುಬಿಡುತ್ತಿದ್ದುವು. ಮುಖದ ಮೇಲೂ ಹಾಗೆ ಗುರುತುಗಳು ಉಳಿದು ಬಿಡುತ್ತಿದ್ದುದರಿಂದ ಮುಖ ಅಂದಗೆಡುತ್ತಿತ್ತು. ಆ ಬಗ್ಗೆ ಭೀತಿ ಜನರನ್ನು ಕಾಡುತ್ತಿತ್ತು.

ಲಘುವಾಗಿ ರೋಗ ತಗುಲಲಿ ಎಂದು ಅನೇಕರು ಅಪೇಕ್ಷಿಸುತ್ತಿದ್ದರಂತೆ. ಏಕೆಂದರೆ, ಹಾಗೆ ಲಘುವಾಗಿ ರೋಗ ತಗುಲಿ ಅದರಿಂದ ಚೇತರಿಸಿಕೊಂಡು ಬಿಟ್ಟರೆ ಪುನಃ ಆ ರೋಗ ತಗಲುವುದಿಲ್ಲವೆಂಬುದು ಹೆಚ್ಚು ಕಡಮೆ ಸಾರ್ವತ್ರಿಕ ಅನುಭವವಾಗಿತ್ತು. ಲಘುವಾಗಿ ರೋಗ ತಗುಲಿದ್ದ ವ್ಯಕ್ತಿಯ ಮೈ ಮೇಲಿನ ಬೊಕ್ಕೆಯ ದ್ರವವನ್ನು ತಮ್ಮ ಮೈಗೆ ಚುಚ್ಚಿಕೊಂಡು ತಮಗೂ ಅಂಥ ಲಘು ರೋಗ ಬರಮಾಡಿಕೊಳ್ಳುವ ಪ್ರಯತ್ನಗಳು ಟರ್ಕಿಯಲ್ಲೂ ಚೀಣಾದಲ್ಲಿಯೂ ನಡೆದುವಂತೆ. ಆದರೆ ಹಾಗೆ ಮಾಡುವುದು ಅಪಾಯಕರವೆಂಬುದು ಬಹು ಬೇಗ ಗೊತ್ತಾಗಿ, ಅಂಥ ಪ್ರಯತ್ನವನ್ನು ಜನರು ಕೈ ಬಿಡಬೇಕಾಯಿತು. ಏಕೆಂದರೆ, ಬೊಕ್ಕೆಯಿಂದ ದ್ರವವನ್ನು ತೆಗೆದುಕೊಂಡುದು ಲಘುರೋಗಿಯ ದೇಹದಿಂದ ಆದರೂ ಚುಚ್ಚಿಕೊಂಡವರಿಗೆ ಉಗ್ರಸ್ವರೂಪದ ರೋಗ ಬಂದ ನಿದರ್ಶನಗಳು ಸಾಕಷ್ಟು ಕಂಡುಬಂದು ಅವರನ್ನು ಕಂಗೆಡಿಸಿದ್ದುವು.

ಸಿಡುಬು ರೋಗದಂಥದೇ ಆದರೂ ಅದಕ್ಕಿಂತ ಬಹಳವೇ ಸೌಮ್ಯವಾದ ಒಂದು ಬಗೆಯ ರೋಗ ಹಸುಗಳಿಗೆ ತಗಲುವುದುಂಟು. ಅದನ್ನು ಆಕಳ ಸಿಡುಬು ಎನ್ನುತ್ತಾರೆ. ದನದಕೊಟ್ಟಿಗೆಯಲ್ಲಿ ಕೆಲಸ ಮಾಡುವವರಿಗೂ ಕೆಲವೊಮ್ಮೆ ಸೋಂಕಿನಿಂದ ಆಕಳ ಸಿಡುಬು ತಗಲುವುದುಂಟು. ಹಾಗೆ ಒಮ್ಮೆ ಆಕಳ ಸಿಡುಬು ತಗಲಿದವರಿಗೆ ಅನಂತರ ಆಕಳ ಸಿಡುಬೂ ತಗಲುವುದಿಲ್ಲ, ಮನುಷ್ಯರಿಗೆ ತಗಲುವ ಸಿಡುಬೂ ತಗಲುವುದಿಲ್ಲ ಎಂಬ ಒಂದು ಅಡುಗೂಲಜ್ಜಿಯ ಕಥೆ ಗ್ಲೌಸೆಸ್ಟರ್ ಜಿಲ್ಲೆಯಲ್ಲಿ ಪ್ರಚಲಿತವಾಗಿತ್ತು. ಅದು ನಿಜವೇ ಎಂದು ಏಕೆ ಪರೀಕ್ಷೆ ಮಾಡಿ ನೋಡಬಾರದು ಎಂಬ ಯೋಚನೆ ಜೆನ್ನರ್‌ಗೆ ಬಂದಿತು. ಹಾಗೆ ಪರೀಕ್ಷೆ ಮಾಡಿ ನೋಡುವುದರಲ್ಲಿ ಒಂದು ಅಪಾಯವಿದೆ ಎಂಬುದು ಆತನಿಗೆ ಹೊಳೆಯದೆ ಆತ ಪರೀಕ್ಷೆ ನಡೆಸಲು ನಿರ್ಧರಿಸಿದ. ಸಿಡುಬು ರೋಗದ ನಿವಾರಣೆಗೆ ಏನಾದರೊಂದು ಉಪಾಯವನ್ನು ಕಂಡುಹಿಡಿಯಲೇ ಬೇಕೆಂಬ ಅವನ ಮಹದಾಸೆಯ ಕಾರಣ ಆ ಅಪಾಯದ ಸಂಭವ ಅವನಿಗೆ ಹೊಳೆಯಲಿಲ್ಲ ಎಂದು ಕಾಣುತ್ತದೆ.

ಆಕಳ ಸಿಡುಬು ತಗಲಿದ ಒಬ್ಬ ವ್ಯಕ್ತಿ ಎಲ್ಲಿಯಾದರೂ ಸಿಕ್ಕಬಹುದೇ ಎಂದು ಸುತ್ತಮುತ್ತ ನೋಡುತ್ತಿದ್ದಾಗ, ೧೭೯೬ರ ಮೇ ೧೪ರಂದು ಆಕಳ ಸಿಡುಬು ತಗಲಿದ್ದ ಒಬ್ಬ ಹಾಲು ಮಾರುವ ಹುಡುಗಿ ಅವನ ಕಣ್ಣಿಗೆ ಬಿದ್ದಳು. ಅವಳ ಮೈ ಮೇಲಿನ ಬೊಕ್ಕೆಯಲ್ಲಿನ ದ್ರವವನ್ನು ತೆಗೆದುಕೊಂಡು ಅದನ್ನು ಒಬ್ಬ ಹುಡುಗನಿಗೆ ಚುಚ್ಚಿದ. ನಿರೀಕ್ಷಿಸಿದಂತೆ ಅವನಿಗೆ ಆಕಳ ಸಿಡುಬು ಬಂದಿತು. ಆಗ ಅವನಿಗೆ ಮನುಷ್ಯರಿಗೆ ತಗಲುವ ಸಿಡುಬು ಸೋಂಕಿನಿಂದಲೂ ರಕ್ಷಣೆ ದೊರೆತಿದೆಯೇ ಎಂಬುದು ಅವನ ಮುಂದಿದ್ದ ಪ್ರಶ್ನೆ. ಅದನ್ನು ಪರೀಕ್ಷಿಸಲು ಅವನಿಗೆ ಸಿಡುಬು ಬೊಕ್ಕೆಯಿಂದ ತೆಗೆದ ದ್ರವವನ್ನು ಚುಚ್ಚಿ ನೋಡಬೇಕಷ್ಟೆ? ಅದೇ ಅತ್ಯಂತ ಅಪಾಯಕರವಾಗಿರುವ ಕ್ರಮ. ಜೆನ್ನರ್, ಅಸಾಮಾನ್ಯ ಎದೆಗಾರಿಕೆಯಿಂದ, ಸಿಡುಬು ಬೊಕ್ಕೆಯಿಂದ ತೆಗೆದುಕೊಂಡ ದ್ರವವನ್ನು ಆ ಹುಡುಗನಿಗೆ ಚುಚ್ಚಿದ. ಆ ಬಾಲಕನಿಗೆ ಸಿಡುಬು ರೋಗವೇನಾದರೂ ತಗುಲಿಬಿಟ್ಟಿದ್ದರೆ, ಜೆನ್ನರ್ ಅಪರಾಧಿ ಅನ್ನಿಸಿಕೊಳ್ಳಬೇಕಾಗುತ್ತಿತ್ತು. ಹುಡುಗ ಸಿಡುಬೂ ರೋಗದ ಕಾರಣ ಸತ್ತುಹೋಗಿದ್ದರಂತೂ ಕಾನೂನು ಕ್ರಮದಿಂದ ತಪ್ಪಿಸಿಕೊಳ್ಳುವುದು ಅವನಿಗೆ ಸಾಧ್ಯವಾಗುತ್ತಿತ್ತೋ ಇಲ್ಲವೋ ಹೇಳುವುದು ಕಷ್ಟ. ಆದರೆ ಬಾಲಕನಿಗೆ ಸಿಡುಬು ತಗುಲಲಿಲ್ಲವಾದುದರಿಂದ ಜೆನ್ನರ್ ಒಬ್ಬ ಸಾಹಸಿಯಾಗಿ ವಿಜೃಂಭಿಸಿದ.

ಜೆನ್ನರ್, ಇನ್ನೊಮ್ಮೆ ತನ್ನ ಪ್ರಯೋಗವನ್ನು ಮಾಡಿ ಫಲಿತಾಂಶವನ್ನು ಖಚಿತಪಡಿಸಿಕೊಳ್ಳಲು ಎರಡು ವರ್ಷ ಕಾಯಬೇಕಾಯಿತು. ಆಕಳ ಸಿಡುಬು ತಗುಲಿದ ಇನ್ನೊಬ್ಬ ವ್ಯಕ್ತಿ ಅವನಿಗೆ ದೊರೆತದ್ದು ೧೭೯೮ರಲ್ಲಿ. ಜೆನ್ನರ್ ಪುನಃ ತನ್ನ ಪ್ರಯೋಗವನ್ನು ಮಾಡಿದಾಗ ಅದೇ ಹರ್ಷದಾಯಕ ಫಲಿತಾಂಶ ದೊರೆತದ್ದರಿಂದ ಅವನು ತನ್ನ ಪ್ರಯೋಗಗಳು ಮತ್ತು ಫಲಿತಾಂಶಗಳ ವಿವರವಾದ ವರದಿಯನ್ನು ಪ್ರಕಟಿಸಿದ. ಲ್ಯಾಟಿನ್ ಭಾಷೆಯಲ್ಲಿ ವ್ಯಾಕ್ಸ್ ಎಂದರೆ ಹಸು. ಅದರಿಂದಾಗಿ ಆಕಳ ಸಿಡುಬಿಗೆ ವ್ಯಾಕ್ಸೀನಿಯ ಎಂಬ ಹೆಸರು ಬಂದಿತು. ಆದುದರಿಂದ ಆಕಳ ಸಿಡುಬಿನ ಬೊಕ್ಕೆಯ ದ್ರವವನ್ನು ಚುಚ್ಚುವ ಪ್ರಕ್ರಿಯೆಯನ್ನು ಜೆನ್ನರ್ ವ್ಯಾಕ್ಸಿನೇಷನ್ ಎಂದು ಕರೆದ. ಅದು ಸಿಡುಬು ರೋಗದಿಂದ ರಕ್ಷಣೆ ಒದಗಿಸುವ ಒಂದು ಕ್ರಮವಾಯಿತು.

ಸಿಡುಬಿನ ಬಗ್ಗೆ ಮಹದ್ಭಯ ವ್ಯಾಪಕವಾಗಿದ್ದುದರಿಂದ



ವ್ಯಾಕ್ಸಿನೇಷನ್ ಬಹುಬೇಗ ಜನಪ್ರಿಯತೆ ಗಳಿಸಿತು. ಬ್ರಿಟಿಷ್ ರಾಜಮನೆತನದ ಎಲ್ಲರೂ ಕೂಡಲೇ ವ್ಯಾಕ್ಸಿನೇಷನ್ ಹಾಕಿಸಿಕೊಂಡರು. ಮೊದಲು ಯೂರೋಪಿನಲ್ಲಿ, ಅನಂತರ ಪ್ರಪಂಚದ ಎಲ್ಲ ಕಡೆಯೂ ಜನ ವ್ಯಾಕ್ಸಿನೇಷನ್ ಹಾಕಿಸಿಕೊಳ್ಳತೊಡಗಿದರು. ೧೮೦೨ರಲ್ಲಿ ಬ್ರಿಟಿಷ್ ಪಾರ್ಲಿಮೆಂಟ್ ಜೆನ್ನರ್‌ಗೆ ಹತ್ತು ಸಾವಿರ ಪೌಂಡ್‌ಗಳ ಸಹಾಯಧನವನ್ನು ಮಂಜೂರು ಮಾಡಿತು. ೧೮೦೭ರಲ್ಲಿ ಪುನಃ ಇಪ್ಪತ್ತು ಸಾವಿರ ಪೌಂಡ್‌ಗಳನ್ನು ಮಂಜೂರು ಮಾಡಿತು. ವ್ಯಾಕ್ಸಿನೇಷನ್‌ಗೆ ಪ್ರೋತ್ಸಾಹ ನೀಡುವುದಕ್ಕಾಗಿ ಜೆನ್ನರ್‌ನ ಅಧ್ಯಕ್ಷತೆಯಲ್ಲಿ ರಾಯಲ್ ಜೆನ್ನೇರಿಯನ್ ಸೊಸೈಟಿ ಎಂಬ ಸಂಸ್ಥೆಯನ್ನು ಸ್ಥಾಪಿಸಲಾಯಿತು. ಸುಮಾರು ಒಂದು ಒಂದೂವರೆ ವರ್ಷದಲ್ಲಿ ಇಂಗ್ಲೆಂಡ್‌ನಲ್ಲಿಯೇ ಹನ್ನೆರಡು ಸಾವಿರ ಜನಕ್ಕೆ ವ್ಯಾಕ್ಸಿನೇಷನ್ ಹಾಕಲಾಯಿತು. ಜರ್ಮನಿಯಲ್ಲಿ ಜೆನ್ನರನ ಜನ್ಮದಿನದಂದು ರಜೆ ಘೋಷಿಸಲಾಯಿತು.

ಜೆನ್ನರ್‌ನ ಹೆಸರು ಗಳಿಸಿದ ಬೆಲೆ, ಯುದ್ಧಕಾಲದಲ್ಲಿನ ರಾಷ್ಟ್ರ-ರಾಷ್ಟ್ರಗಳ ವೈಷಮ್ಯದ ಎಲ್ಲೆಯನ್ನು ಮೀರಿ ಬೆಳೆಯಿತು. ಏಕೆಂದರೆ, ನೆಪೋಲಿಯನ್, ಯುದ್ಧಗಳ ಸಂದರ್ಭದಲ್ಲಿ, ಸೆರೆ ಹಿಡಿದಿದ್ದ ಬ್ರಿಟಿಷ್ ನಾಗರಿಕರನ್ನು ಬಿಡುಗಡೆ ಮಾಡಬೇಕೆಂದು ಅವನನ್ನು ಕೇಳಿಕೊಂಡು ಅವನಿಗೆ ಸಲ್ಲಿಸಿದ್ದ ಮನವಿಗೆ ಸಹಿ ಮಾಡಿದವರ ಪಟ್ಟಿಯಲ್ಲಿ ಜೆನ್ನರ್‌ನ ಹೆಸರಿದ್ದುದನ್ನು ಗಮನಿಸಿದ ನೆಪೋಲಿಯನ್ ಆ ಮನವಿಗೆ ಮಣಿದು ನಾಗರಿಕರನ್ನು ಬಿಡುಗಡೆ ಮಾಡಿದನಂತೆ. ಇಂದು ಜಗತ್ತಿನ ಯಾವ ಮೂಲೆಯಲ್ಲಿಯೂ ಸಿಡುಬು ರೋಗ ಇಲ್ಲ ಎಂಬ ವಾಸ್ತವಾಂಶವನ್ನು ಹೆಚ್ಚು ಕಡಿಮೆ ಎಲ್ಲ ಅಕ್ಷರಸ್ಥರೂ ಬಲ್ಲರು. ಎಲ್ಲಿಯಾದರೂ ಸಿಡುಬು ತಗುಲಿರುವ ಒಬ್ಬರೋಗಿಯನ್ನು ತೋರಿಸಿದವರಿಗೆ ಅದೆಷ್ಟೋ ಡಾಲರ್‌ಗಳ ಬಹುಮಾನವನ್ನು ನೀಡುವುದಾಗಿ ವಿಶ್ವ ಜನಾರೋಗ್ಯ ಸಂಸ್ಥೆ (WHO) ಘೋಷಿಸಿದೆ. ಅಂಥ ಪರಿಸ್ಥಿತಿ ಉಂಟಾಗಿರುವುದು ಜೆನ್ನರ್‌ನಿಂದ.

**ಪ್ರೊ|| ಜೆ. ಆರ್. ಲಕ್ಷ್ಮಣ ರಾವ್**
'ಸ್ಮೃತಿ', ೧೨ನೆಯ ಮುಖ್ಯರಸ್ತೆ, ಸರಸ್ವತಿಪುರ, ಮೈಸೂರು - ೫೭೦೦೦೯

ಅಮೆರಿಕಾದಿಂದ ಪತ್ರ

# ಅಮೆರಿಕಾದಿಂದ ಒಂದೆರಡು ಟಿಪ್ಪಣಿಗಳು

ಜಿ. ಎಸ್. ಸದಾಶಿವ

**ಅಮೆರಿಕಾದ ರಾಜಕೀಯ ನಮ್ಮ ರಾಜಕೀಯಕ್ಕಿಂತಲೂ ತೀರ ಭಿನ್ನವೇನಲ್ಲ. ಎಲ್ಲ ಬೂರ್ಷ್ವಾ ಪ್ರಜಾಪ್ರಭುತ್ವದ ರಾಜಕೀಯವೂ ಇಂದು ಹೊಲಸಾಗಿದೆ. ಅದು ಲಂಗುಲಗಾಮಿಲ್ಲದ ಬಂಡವಾಳದ ಬೆಳವಣಿಗೆಯ ಪ್ರತಿಬಿಂಬವಷ್ಟೆ. ನಮ್ಮ ರಾಜಕೀಯ ಧುರೀಣರು ಮೆಚ್ಚಿಕೊಂಡು, ನೂರಕ್ಕೆ ನೂರುಪಟ್ಟು ಅನುಕರಿಸಲು ಹವಣಿಸುತ್ತಿರುವ ಅಮೆರಿಕಾದ ಮಾದರಿಯನ್ನು ಒಂದಿಷ್ಟು ಬಿಚ್ಚಿಡಲು ಈ ಟಿಪ್ಪಣಿಗಳು.**



ಅಮೆರಿಕಾದ ರಾಜಕೀಯ ನಮ್ಮ ರಾಜಕೀಯಕ್ಕಿಂತಲೂ ತೀರ ಭಿನ್ನವೇನಲ್ಲ. ಎಲ್ಲ ಬೂರ್ಷ್ವಾ ಪ್ರಜಾಪ್ರಭುತ್ವದ ರಾಜಕೀಯವೂ ಇಂದು ಹೊಲಸಾಗಿದೆ. ಅದು ಲಂಗುಲಗಾಮಿಲ್ಲದ ಬಂಡವಾಳದ ಬೆಳವಣಿಗೆಯ ಪ್ರತಿಬಿಂಬವಷ್ಟೆ. ನಮ್ಮ ರಾಜಕೀಯ ಧುರೀಣರು ಮೆಚ್ಚಿಕೊಂಡು, ನೂರಕ್ಕೆ ನೂರುಪಟ್ಟು ಅನುಕರಿಸಲು ಹವಣಿಸುತ್ತಿರುವ ಅಮೆರಿಕಾದ ಮಾದರಿಯನ್ನು ಒಂದಿಷ್ಟು ಬಿಚ್ಚಿಡಲು ಈ ಟಿಪ್ಪಣಿಗಳು.

ನ್ಯೂಯಾರ್ಕ್ ರಾಜ್ಯದ ಶಾಸನ ಸಭೆಗೆ ಕಳೆದ ಮೂರು ದಿವಸಗಳಿಂದ ಬೀಗ ಜಡಿದಿದ್ದಾರೆ. ಜಡಿದವರು ಇಲ್ಲಿಯವರೆಗೆ ಕೇವಲ ಎರಡು ಮತಗಳ ಬಹುಮತದಿಂದ ಅಧಿಕಾರದಲ್ಲಿದ್ದ ಡೆಮೋಕ್ರಾಟ್ ಪಕ್ಷದವರು. ಅವರ ಇಬ್ಬರು ಸದಸ್ಯರನ್ನು ರಿಪಬ್ಲಿಕ್ ಪಕ್ಷದವರು ಹಲವಾರು ಆಮಿಷಗಳನ್ನೊಡ್ಡಿ ತಮ್ಮ ಬುಟ್ಟಿಗೆ ಹಾಕಿಕೊಂಡಿದ್ದಾರೆ. ಹೀಗಾಗಿ ಈಗ ಅವರಿಗೆ ಬಹುಮತ. ಸಭಾಭವನವನ್ನು ಪ್ರವೇಶಿಸಲಾಗದೆ ರಿಪಬ್ಲಿಕನ್ನರು ದಾಳಿ ಮಾಡಿ ಸಭೆಸೇರುವುದಾಗಿ ಹೇಳುತ್ತ ಗವರ್ನರ್‌ಗೆ ಮೊರೆಹೋಗಿದ್ದಾರೆ. ತಾನು ಮಧ್ಯೆ ಪ್ರವೇಶಿಸುವುದಿಲ್ಲವೆಂದು ತಾಟಸ್ಥ್ಯ ನಿಲುವು ತಾಳುವುದಾಗಿ ಗವರ್ನರ್ ಹೇಳುತ್ತಾರೆ. ಕಳೆದ ಕೆಲವು ವರ್ಷಗಳಿಂದಲೂ ಇಲ್ಲಿ ಡೆಮೋಕ್ರಾಟ್ ಪಕ್ಷದವರದೇ ಆಡಳಿತ. ಇಲ್ಲಿ ಪಕ್ಷಾಂತರ ಮಸೂದೆ ಇಲ್ಲವೆಂದೆನಿಸುತ್ತದೆ. ಈ ರಾಜ್ಯದಲ್ಲಿ ಜರುಗುತ್ತಿರುವ ಪ್ರಸಂಗವನ್ನು ವಿಶೇಷ ಎಂದು ಪರಿಗಣಿಸಬೇಕಾಗಿಲ್ಲ. ರಾಜ್ಯದ ಸೆನೆಟ್‌ನಲ್ಲಿ (ನಮ್ಮ ರಾಜ್ಯಸಭೆಯಂಥದು) ಬಹುಮತ ಪಡೆಯಲು ಹಾಗೂ ಪ್ರತಿನಿಧಿ ಸಭೆಯಲ್ಲಿ ಮೂರನೆಯ ಎರಡರಷ್ಟು ಬಹುಮತವನ್ನು ಗಳಿಸಲು ಹವಣಿಸುತ್ತಿರುವ ಡೆಮೊಕ್ರಾಟ್ ಪಕ್ಷ ಈಗಾಗಲೇ ರಿಪಬ್ಲಿಕನ್ ಪಕ್ಷದ ಕೆಲವು ಸವಲತ್ತುಗಳನ್ನು ತನ್ನ ಕಡೆ ಸೆಳೆದುಕೊಂಡಿದೆ.

ನ್ಯೂಯಾರ್ಕ್‌ನಲ್ಲಿ ಇಂತಹ ಪರಿಸ್ಥಿತಿ ಹೇಗೆ ಉದ್ಭವವಾಯಿತು ಎಂಬುದೇ ಸ್ವಾರಸ್ಯದ ಸಂಗತಿ. ಕಳೆದ ನಲವತ್ತು ವರ್ಷಗಳಲ್ಲಿ ರಿಪಬ್ಲಿಕನ್ ಪಕ್ಷ ಇದೇ ಮೊದಲಬಾರಿಗೆ ಜನವರಿಯ ಚುನಾವಣೆಯಲ್ಲಿ ಬಹುಮತ ಕಳೆದುಕೊಂಡಿತು.

**ಸಂಬಳದ ಆಧಾರದ ಮೇಲೆ ಸಾಲ**

ಇಲ್ಲಿ ಸಂಬಳದ ಆಧಾರದ ಸಾಲ ನೀಡುವ ಪದ್ಧತಿಯಿದೆ. ಬಡ ಕಾರ್ಮಿಕರು ಹೆಚ್ಚು ಕಡಿಮೆ ತಿಂಗಳ ಮಧ್ಯಭಾಗದಲ್ಲಿ ಸಾಲ ತೆಗೆದುಕೊಳ್ಳುತ್ತಾರೆ. ಆ ಸಾಲವನ್ನು ಸಂಬಳದ ದಿನ ತೀರಿಸಬೇಕೆಂಬ ಕರಾರು ಇರುತ್ತದೆ. ಇದಕ್ಕೆ ಶೇಕಡ ನೂರಕ್ಕೆ ನೂರು ಅಥವಾ ಇನ್ನೂ ಹೆಚ್ಚಿನ ದರದ ಬಡ್ಡಿ ವಿಧಿಸುತ್ತಾರೆ – ಈ ಲೇವಾದೇವಿದಾರರು. ಹಿಂದೆಯೂ ನಮ್ಮಲ್ಲಿ ಪಠಾಣರು ಇಂಥದೇ ಬಗೆಯ ಸಾಲ ಕೊಡುತ್ತಿದ್ದರು. ಸರ್ಕಾರ ಇಂಥ ವ್ಯವಹಾರಗಳಲ್ಲಿ ಶೇಕಡ ೩೬ಕ್ಕಿಂತ ಹೆಚ್ಚು ಬಡ್ಡಿ ಸಂಗ್ರಹಿಸುವುದು ಅಪರಾಧ ಎಂದು ಪರಿಗಣಿಸುವ ಮಸೂದೆಯೊಂದನ್ನು ತರಲು ಪ್ರಯತ್ನಪಡುತ್ತಿದೆ. ಮೊನ್ನೆ ಇಬ್ಬರು ಶಾಸನಸಭೆಯ ಸದಸ್ಯರು, ಅವರಲ್ಲಿ ಒಬ್ಬ ಡೆಮೊಕ್ರಾಟ್, ಮತ್ತೊಬ್ಬ ರಿಪಬ್ಲಿಕನ್ ಪಕ್ಷದವ, ಇಬ್ಬರೂ ಈ ಲೇವಾದೇವಿ ಕಂಟಕರೊಡನೆ ಭೋಜನಕೂಟದಲ್ಲಿ ಭಾಗವಹಿಸಿದ್ದನ್ನು ಪತ್ರಿಕೆಗಳು ಬಹಿರಂಗಪಡಿಸಿವೆ. ಇವೆಲ್ಲವನ್ನು ನೋಡಿದರೆ ಖಂಡಿತವಾಗಿ ನಾವು ಅಮೆರಿಕಾದವರಿಗಿಂತ ಹಿಂದೆಬಿದ್ದಿಲ್ಲ ಎಂದು ಜಂಭ ಕೊಚ್ಚಿಕೊಳ್ಳಬಹುದೇನೋ, ಅಲ್ಲವೇ? ಭಾಜಪದ ಯಡಿಯೂರಪ್ಪ ಮುಂತಾದವರು ಅಮೆರಿಕಾದ ಪ್ರಜಾಪ್ರಭುತ್ವದಲ್ಲಿ ಸಂಜಿಕೆಯಿಟ್ಟವರಿಗೆ ಒಂದಿಷ್ಟು ಪಾಠ ಹೇಳಲೂ ಬರಬಹುದು ಎಂದಾದರೆ ಆಚ್ಚರಿಯೇನಿಲ್ಲ.

**ಅತಿ ಶ್ರೀಮಂತ ಕ್ಯಾಲಿಫೋರ್ನಿಯಾ ದಿವಾಳಿಯತ್ತ!**

ಕ್ಯಾಲಿಫೋರ್ನಿಯಾ ರಾಜ್ಯ ಜಗತ್ತಿನಲ್ಲೇ ಅತ್ಯಂತ ಶ್ರೀಮಂತ ಪ್ರದೇಶವೆಂದು ಹೇಳಲಾಗುತ್ತದೆ. ಇಲ್ಲಿಯ ಕೈಗಾರಿಕಾ ತಾಂತ್ರಿಕ ಉತ್ಪನ್ನ ಅಷ್ಟೊಂದು ಭಾರಿ ಪ್ರಮಾಣದ್ದು. ಹಾಗೂ ಈ ರಾಜ್ಯದಲ್ಲಿ ವಿಧಿಸುವ ತೆರಿಗೆ ಜಗತ್ತಿನಲ್ಲೇ ಅತಿ ಹೆಚ್ಚಂತೆ! ಆದರೂ ಈ ರಾಜ್ಯದ ಬೊಕ್ಕಸ ಬರಿದಾಗಿದೆ, ಹಾಗೆಂದು ಸರ್ಕಾರಿ ಮಟ್ಟದಲ್ಲಿ ಅಂಥ ಭ್ರಷ್ಟಾಚಾರವೂ ಇಲ್ಲ. ಹಾಗಾದರೆ ಸರ್ಕಾರ ಸಂಪಾದಿಸಿದ ಹಣವೆಲ್ಲ ಏನಾಯ್ತು? ಇಲ್ಲಿ ಸಾಮಾಜಿಕ ಕ್ಷೇತ್ರಕ್ಕಾಗಿ ಅತಿ ಹೆಚ್ಚಿನ ಪ್ರಮಾಣದಲ್ಲಿ ಖರ್ಚು ಮಾಡಲಾಗುತ್ತದೆ. ಸರ್ಕಾರಿ ನೌಕರರ ಸಂಖ್ಯೆಯಂತೂ ವಿಪರೀತ. ಅವರಿಗೆ ನೀಡುವ ಸಂಬಳ ತೀರ ಹೆಚ್ಚು. ಇಲ್ಲಿಯ ಪಾರ್ಕಿನಲ್ಲಿ ಕಸಗುಡಿಸುವ ಒಬ್ಬ ಯುವ ಕಾರ್ಮಿಕನನ್ನು ಮಾತನಾಡಿಸಿದೆ. ಅವನಿಗೆ ಸುಮಾರು ೬೦೦೦ ಡಾಲರುಗಳ ತಿಂಗಳ ಸಂಬಳವಂತೆ.

ನಮ್ಮೂರಿನ ಯುವ ಇಂಜಿನಿಯರ್‌ಗೆ ಇಲ್ಲಿ ಐಟಿಯಲ್ಲಿ ಮೊದಲ ಹಂತದಲ್ಲಿ ದೊರೆಯುವ ಸಂಬಳ ಕೇವಲ ೪೦೦೦ ಡಾಲರುಗಳು. ಜಲಮಂಡಳಿಯವನೊಬ್ಬ ನಲ್ಲಿ ರಿಪೇರಿ ಮಾಡುತ್ತಿದ್ದ. ಅವನಿಗೆ ೭-೮ ಸಾವಿರ ಡಾಲರುಗಳು ಸಂಬಳ. ಇವರೆಲ್ಲರ ವೇಷಭೂಷಣ ಬಹಳ ಅಚ್ಚುಕಟ್ಟಾಗಿದೆ. ಅವರದ್ದೇ ವಾಹನಗಳಿರುತ್ತವೆ. ಕಸ ಗುಡಿಸುವವನ ಕೈಯಲ್ಲೇ ಚಲಿಸಬಹುದಾದ ಯಂತ್ರವಿದೆ! ಇಲ್ಲಿ ಅಗ್ನಿಶಾಮಕದಳದವರಿಗೆ, ಪೊಲೀಸ್‌ನವರಿಗೆ ತಿಂಗಳ ಸಂಬಳ ೧೦-೧೫ ಸಾವಿರ ಡಾಲರ್‌ವರೆಗೂ ಇದೆ. ನಮ್ಮ ಹುಡುಗರು ೧೦ ವರ್ಷಗಳು ಸೇವೆ ಸಲ್ಲಿಸಿದ ನಂತರ ೧೦ ಸಾವಿರ ಡಾಲರ್‌ಗಳ ಸಂಬಳ ಗಳಿಸುವಷ್ಟು ದುಡಿದು ಅಷ್ಟಕ್ಕೇ ನಿಲ್ಲುತ್ತಾರೆ. ಇಲ್ಲಿಯ ಶಾಲೆಗಳು, ಉದ್ಯಾನವನ, ರಸ್ತೆ, ಸಾರ್ವಜನಿಕ ಲೈಬ್ರರಿ, ಕಲಾಭವನ ಎಲ್ಲವೂ ನೋಡಲು ತುಂಬ ಸುಂದರವಾಗಿವೆ. ಮುನಿಸಿಪಾಲಿಟಿಗಳು ನಿರ್ವಹಿಸುವ ರೈಲು, ಬಸ್ಸುಗಳು, ಉತ್ತಮವಾಗಿವೆ. ನಷ್ಟದಲ್ಲೇ ಓಡುತ್ತವೆ. ಜನ ಇವೆಲ್ಲ ತಮ್ಮ ಹಕ್ಕು ಎನ್ನುತ್ತಾರೆ. ಉದ್ಯಮಿಗಳು ತಮ್ಮ ಮೇಲೆ ಇನ್ನೂ ಹೆಚ್ಚು ತೆರಿಗೆ ವಿಧಿಸಲಾಗದು ಎನ್ನುತ್ತಾರೆ. ಇನ್ನೊಂದು ಸ್ವಾರಸ್ಯಕರ ಸಂಗತಿಯೆಂದರೆ ಅಮೆರಿಕಾದಲ್ಲೇ ಏಕೆ, ಇಡೀ ಜಗತ್ತಿನಲ್ಲೇ ಇಲ್ಲಿಯ ಆಸ್ತಿಯ ಬೆಲೆ ಅತಿ ಹೆಚ್ಚಿನದು. ಆದರೆ ಆಸ್ತಿ ತೆರಿಗೆ ತುಂಬಾ ಕಡಿಮೆ. ಜಗತ್ತಿನ ಶ್ರೀಮಂತರೆಲ್ಲ ಇಲ್ಲೊಂದು ಮನೆ ಹೊಂದಲು ಹಂಬಲಿಸುತ್ತಾರೆ. ಹವಾಗುಣ ನಮ್ಮ ಊಟಿಯ ಹವಾಗುಣದಂತಿದೆ. ನಾನಿರುವ ಈ ಸಣ್ಣ ಊರು ಸಾಂತಾ ಕ್ಲಾರ. ಸರ್ಕಾರ ೫೦೦೦ ಕೋಟಿ ಡಾಲರ್ ಖರ್ಚುಮಾಡಿ ಸ್ಟೇಡಿಯಂನ್ನು ಕಟ್ಟಲು ಯೋಜಿಸುತ್ತಿದೆ. ಅದು ಒಂದು ಲಾಭದಾಯಕ ಉದ್ಯಮವಾಗುವು ದಂತೆ. ಕ್ಯಾಲಿಫೋರ್ನಿಯಾ ರಾಜ್ಯ ಇನ್ನು ಇಪ್ಪತ್ತು ವರ್ಷಗಳಲ್ಲಿ ಅಸಾಂಪ್ರದಾಯಿಕ ಮೂಲದ ಶಕ್ತಿಯ ಮೂಲಕ ಸೌರಶಕ್ತಿ, ವಾಯುಶಕ್ತಿ ಮುಂತಾದ ಯೋಜನೆಗಳ ಮೂಲಕ ತನ್ನ ಇಂಧನದ ಕೊರತೆಯನ್ನು ನೀಗಿಕೊಳ್ಳಲು, ಪೆಟ್ರೋಲ್‌ಗೆ, ಗ್ಯಾಸಿಗೆ ವಿದಾಯ ಹೇಳಲು ಸಿದ್ಧಗೊಳ್ಳುತ್ತಿದೆ. ಈ ರಾಜ್ಯದ ಬೊಕ್ಕಸದ ಸಮಸ್ಯೆ ಉದ್ಭವಿಸಿ ಒಂದು ವರ್ಷವೇ ಆಯಿತು.

**ನ್ಯಾಯಾಲಯಗಳಲ್ಲಿ ಭ್ರಷ್ಟಾಚಾರ**

ಹಿಂದಿನಿಂದಲೂ ಇಲ್ಲಿಯ ನ್ಯಾಯಾಲಯಗಳಲ್ಲಿ ಭ್ರಷ್ಟಾಚಾರ ಲೋಕಪ್ರಸಿದ್ಧ. ಆಳುವ ಪಕ್ಷ ತನಗೆ ಬೇಕಾದ ನ್ಯಾಯಾಧೀಶರನ್ನು ಆಯ್ಕೆ ಮಾಡಿಕೊಂಡು ಬೇಕಾದ ತೀರ್ಮಾನಗಳನ್ನು ಪಡೆದುಕೊಳ್ಳುವುದು. ಇದೆಲ್ಲಾ ಬೂರ್ಷ್ವಾ ವ್ಯವಸ್ಥೆಯಲ್ಲಿ ಇದ್ದದ್ದೇ. ರಾಜಕೀಯ ಸ್ಥಾನಗಳು, ವಾಣಿಜ್ಯ ಹಿತಾಸಕ್ತಿಗಳು, ಹಣ ನೀಡಿ ಅಥವಾ ಲಾಬಿ ಮಾಡಿ ಸ್ಥಾನಗಳನ್ನು ಗಿಟ್ಟಿಸಿಕೊಳ್ಳುವುದು ಮುಚ್ಚುಮರೆಯಿಲ್ಲದೆ ನಡೆಯುತ್ತಿರುತ್ತದೆ. ಯಾವ ಕಂಪನಿ ಯಾರಿಗೆ ಎಷ್ಟು ಹಣಕೊಟ್ಟಿತು ಎಂಬುದು ನಿರ್ಭಿಡೆಯಿಂದ ಚರ್ಚಿಸಲ್ಪಡುತ್ತದೆ. ಅಷ್ಟೇ ಸೋಜಿಗದ ವಿಷಯವೆಂದರೆ, ಎಲ್ಲ ಹಂತದಲ್ಲೂ ಅಟಾರ್ನಿಯಾಗಲು, ಜಿಲ್ಲೆ, ರಾಜ್ಯ ಹಾಗೂ ರಾಷ್ಟ್ರಮಟ್ಟದ ನ್ಯಾಯಾಧೀಶರನ್ನು ನಿಯಮಿಸಲು, ಅಂತಹ ಸ್ಥಾನ ಬಯಸುವ ವ್ಯಕ್ತಿಯೂ ಸೇರಿ, ವಾಣಿಜ್ಯಲೋಕದ ಕಾರ್ಪೊರೇಟರುಗಳು ಬಹಿರಂಗವಾಗಿಯೇ ಲಾಬಿ ಮಾಡುತ್ತಾರೆ. ಮಿಲಿಯಗಟ್ಟಲೆ ಹಣ ಖರ್ಚುಮಾಡುತ್ತಾರೆ. ಪ್ರಚಾರ ಮಾಡುತ್ತಾರೆ. ಹೀಗೆ ಆರಿಸಿಬಂದ ನ್ಯಾಯಾಧೀಶ ತನಗೆ ಸಮರ್ಥನೆ ನೀಡಿದವರಿಗೆ ಆಸಕ್ತಿಯಿರುವ ಕಟ್ಟಳೆಗಳನ್ನು ವಿಚಾರಣೆ ಮಾಡಬಾರದಂತೆ. ಹಾಗೂ ನ್ಯಾಯಾಧೀಶರನ್ನು, ಅವರ ಕೆಲಸದಿಂದ ತೆಗೆಯಬೇಕಾದರೆ ಶಾಸನಸಭೆಗೆ ಮಾತ್ರ ಸಾಧ್ಯವಿದೆ. ಇಲ್ಲವೆ ಅವನೇ ರಾಜಿನಾಮೆ ನೀಡಬೇಕು. ಒಂದು ರೀತಿಯಲ್ಲಿ ಈ ಸ್ಥಾನಗಳು ಜೀವಾವಧಿಯವು. ಶಾಸನಸಭೆಯ ಪ್ರಕ್ರಿಯೆ ಬಹಳ ವಿಳಂಬವಾದುದು.

ಇಲ್ಲಿ ಇದೀಗ ಸುದ್ದಿ ಮಾಡಿರುವ ಎರಡು ಪ್ರಸಂಗಗಳು ಹೀಗಿವೆ : ಒಬ್ಬ ರಾಜ್ಯಮಟ್ಟದ, ಅಂದರೆ ನಮ್ಮ ಹೈಕೋರ್ಟ್ ಮಟ್ಟದ, ನ್ಯಾಯಾಧೀಶ ತಿಮಿಂಗಿಲದಂತಹ ಒಬ್ಬ ಕಾರ್ಪೊರೇಟರ್‌ನ ಕಟ್ಟಳೆಯಲ್ಲಿ ಅವನ ಪರವಾಗಿ ತೀರ್ಮಾನ ನೀಡಿದ. ಫೆಡರಲ್ ಕೋರ್ಟ್‌ನವಲ್ಲಿ, ಅಂದರೆ ಸುಪ್ರೀಂ ಕೋರ್ಟ್‌ನಲ್ಲಿ, ಇದನ್ನು ವಜಾಮಾಡಿದ ನ್ಯಾಯಾಧೀಶ ಹೈಕೋರ್ಟ್ ನ್ಯಾಯಾಧೀಶನನ್ನು ತರಾಟೆಗೆ ತೆಗೆದುಕೊಂಡಿದ್ದಾನೆ. ಆದರೂ ಅವನೇನೂ ರಾಜಿನಾಮೆ ನೀಡಲಿಲ್ಲ. ಮತ್ತೊಂದು ಕೇಸಿನಲ್ಲಿ ನ್ಯಾಯಾಧೀಶನ ಭ್ರಷ್ಟಾಚಾರ ಬಯಲಿಗೆ ಬಂದು ಅವನಿಗೆ ಜೈಲುಶಿಕ್ಷೆ ವಿಧಿಸಲಾಗಿದೆ. ಅವರೂ ಈ ನ್ಯಾಯಾಧೀಶ ತನ್ನ ಸ್ಥಾನಕ್ಕೆ ರಾಜಿನಾಮೆ ನೀಡಿಲ್ಲ. ಆತ ಜೈಲಿನಲ್ಲಿ ಇದ್ದೇ ಸಂಬಳ ತೆಗೆದುಕೊಳ್ಳುವಂತಹ ಪರಿಸ್ಥಿತಿ ಉಂಟಾಗಿದೆ. ಅವನೇ ತನಗೆ ಮುಂದಿನ ಒಂದು ವರ್ಷ ಸಂಬಳ ದೊರೆಯುವಂತೆ ಸೂಚನೆ ನೀಡಿಕೊಂಡಿದ್ದಾನೆ! ಒಂದು ವರ್ಷವಾದರೂ ಬೇಕು ಶಾಸನ ಸಭೆ ಈತನನ್ನು ವಜಾಮಾಡಲು. ಈತ ತಾನಾಗಿಯೇ ರಾಜಿನಾಮೆ ನೀಡುತ್ತಿಲ್ಲ, ಪತ್ರಿಕೆಗಳು ಅವನನ್ನು ತರಾಟೆಗೆ ತೆಗೆದುಕೊಂಡಿವೆ.

ಈ ವಿಷಯದಲ್ಲಿ ಮಾಧ್ಯಮಗಳಲ್ಲಿ ತಮ್ಮ ತಮ್ಮ ವಿರುದ್ಧ ಪ್ರಚಾರ ನಡೆಸುವುದು ಮೆಚ್ಚಬೇಕಾದ ವಿಷಯ. ಕಣ್ಣಿನ ಮೇಲೆ ಕಣ್ಣಿಟ್ಟು ಭ್ರಷ್ಟಾಚಾರಿಗಳನ್ನು ಹೊರಗೆಡಹುವುದು ಮೆಚ್ಚಬೇಕಾದ ವಿಷಯ. ಹಾಗೆಯೇ ತುರ್ತಾಗಿ ಶಿಕ್ಷೆ ನೀಡುವುದೂ ಇಲ್ಲಿ ಸಾಧ್ಯ.

**ಸಾಲಮಾಡಿ ತುಪ್ಪ ತಿನ್ನೋದು ಅಂದ್ರೆ ಹೀಗೆ**

ಹದಗೆಟ್ಟುಹೋಗಿರುವ ಪರಿಸ್ಥಿತಿಯನ್ನು ತಿಳಿಯಪಡಿಸುವ ಈ ದೇಶದ ಆರ್ಥಿಕ ವ್ಯವಸ್ಥೆಯ ಕೆಲವೊಂದು ಅಂಕಿ ಅಂಶಗಳು ಹೀಗಿವೆ :

* ೧೯೬೦ರಲ್ಲಿ ವ್ಯಕ್ತಿಯ ವೈಯಕ್ತಿಕ ಆದಾಯದ ಶೇಕಡ ೫೫ರಷ್ಟು ಸಾಲ ಇತ್ತು.
* ೨೦೦೭ರಲ್ಲಿ ಈ ಪ್ರಮಾಣ ಶೇಕಡ ೧೩೩ರಷ್ಟಾಯಿತು. ಅಂದರೆ ನೂರು ಡಾಲರ್ ಆದಾಯ ಇದ್ದವ, ೫೫ ಡಾಲರ್ ಸಾಲ ಮಾಡುತ್ತಿದ್ದವ, ಇಂದು ೧೩೩ ಡಾಲರ್ ಸಾಲ ಮಾಡುತ್ತಾನೆ.
* ೧೯೫೧ರಲ್ಲಿ ವ್ಯಕ್ತಿ ಮತ್ತು ವಾಣಿಜ್ಯಲೋಕದ ಎಲ್ಲ ರೀತಿಯ ಸಾಲ ಒಟ್ಟಾರೆಯಾಗಿ ರಾಷ್ಟ್ರದ ಆದಾಯದ, ಜಿಡಿಪಿಯ ಶೇಕಡ ೧೪೩ರಷ್ಟಿತ್ತು. ಇದು ೨೦೦೮ರಲ್ಲಿ ಶೇಕಡ ೩೫೦ಕ್ಕೆ ಏರಿತು. ಇಪ್ಪತ್ತನೆಯ ಶತಮಾನದ ಉದ್ದಕ್ಕೂ, ೧೯೮೦ರವರೆಗೆ ಸಾಲವೇ ವ್ಯವಸ್ಥೆಯ ಅಡಿಪಾಯವಾಗಿ ಒಂದೇ ಸಮನೆ ಏರುತ್ತ ಹೋಗಿದೆ. ಇದು ೧೯೮೦ರಿಂದೀಚೆಗೆ ದಾಪುಗಾಲು ಹಾಕಿ ಏರುತ್ತಲೇ ಇದೆ.

ಸಾಲ ಏರುವಿಕೆ ಮತ್ತು ಅನುಭೋಗದ ಮಟ್ಟ (ಕನ್ಸಂಪ್ಷನ್) ಎರಡೂ ಜತೆಜತೆಗೆ ಏರಿವೆ. ೧೯೬೦ರಲ್ಲಿ ರಾಷ್ಟ್ರಾದಾಯದ ಶೇಕಡ ೬೨ರಷ್ಟು ಅನುಭೋಗವಿತ್ತು. ೨೦೦೮ರಲ್ಲಿ ಇದು ಶೇಕಡ ೭೩ಕ್ಕೆ ಏರಿದೆ. ಅದೇ ಸಂದರ್ಭದಲ್ಲಿ ಯೂರೋಪ್, ಜಪಾನ್ ಮತ್ತು ಚೀನಾದ ಉತ್ಪಾದನಾ ವ್ಯವಸ್ಥೆ ಅಮೆರಿಕಾದ ಉಪಭೋಗಕ್ಕೆ ಪೂರೈಸುವ ಮಾರುಕಟ್ಟೆಗಳಾಗಿ ವೃದ್ಧಿಯಾದುವು. ಆರ್ಥಿಕ ಕುಸಿತ ಈಗ ಈ ಎಲ್ಲವನ್ನೂ ಬಾಧಿಸಿರುವುದಕ್ಕೆ ಇಲ್ಲಿದೆ ಕಾರಣ. ಅಮೆರಿಕಾದ ಆರ್ಥಿಕ ಕುಸಿತ ಸ್ವಯಂಕೃತ ಅಪರಾಧ. ಆದಾಯಕ್ಕೆ ಮೀರಿದಂತೆ ವೆಚ್ಚ ಮಾಡುವವನನ್ನು ಯಾವ ಬಂಡವಾಳಶಾಹಿ ಆರ್ಥಿಕವ್ಯವಸ್ಥೆಯ ಚಿಂತಕರೂ ಒಪ್ಪಲಾರರು. ಆದರೆ ಕಳೆದ ಎರಡು ದಶಕಗಳಲ್ಲಿ ಬೂರ್ಷ್ವಾ ವ್ಯವಸ್ಥೆ ಅರ್ಥಶಾಸ್ತ್ರವನ್ನು ಕಡೆಗಣಿಸಿ ಹಣಕಾಸು ಶಾಸ್ತ್ರ ಮ್ಯಾನೇಜ್‌ಮೆಂಟ್, ಮಾರುಕಟ್ಟೆ ಶಾಸ್ತ್ರವನ್ನಷ್ಟೇ ಪೋಷಿಸುತ್ತಿದೆ. ಇವರ ಈ ಮಹಾ ದುಂದುಗಾರಿಕೆಯೂ ಜಾಗತೀಕರಣದ ರೂಪದಲ್ಲಿ ನಮ್ಮನ್ನೂ ಬಾಧಿಸುತ್ತಿದೆ. ನಮ್ಮ ರಿಸರ್ವ್ ಬ್ಯಾಂಕ್‌ನ ಗವರ್ನರ್ ಆರ್. ವಿ. ರೆಡ್ಡಿಯವರು ಇತ್ತೀಚೆಗೆ ಈ ಕುರಿತು ಬಹಳ ಅರ್ಥಪೂರ್ಣವಾಗಿ ಚರ್ಚಿಸಿದ್ದಾರೆ.

ಈ ಮುಗ್ಗಟ್ಟನ್ನು ಸರಿಪಡಿಸಲು ವೈಯಕ್ತಿಕ ಹಾಗೂ ಉದ್ಯಮಗಳ ಸಾಲವನ್ನು ಸರ್ಕಾರದ, ಅಂದರೆ ಸಾರ್ವಜನಿಕ ಸಾಲವಾಗಿ ಪರಿವರ್ತಿಸಿ ಆ ರೂಪದಲ್ಲಿ ನೆರವು ನೀಡಿ, ಖಾಸಗಿ ವಲಯಕ್ಕೆ ಮತ್ತೆ ಜೀವಕೊಡುವ ಪ್ರಯತ್ನ ನಡೆದಿದೆ. ಇದು ತಕ್ಷಣಕ್ಕೆ ಪರಿಣಾಮ ಬೀರುತ್ತಿರುವಂತಿದೆ. ಫೆಡರಲ್ ಸರ್ಕಾರ ಸಿಕ್ಕಾಪಟ್ಟೆ ನೋಟುಗಳನ್ನು ಮುದ್ರಿಸಿದೆ. ರಾಷ್ಟ್ರಮಟ್ಟದ ಬಜೆಟ್‌ನಲ್ಲಿ, ೨೦೦೭ರಲ್ಲಿ ಇದ್ದ ಕೊರತೆ ಜಿಡಿಪಿಯ ಶೇಕಡ ೧.೨ರಷ್ಟಾದರೆ, ಈಗ ಎರಡೇ ವರ್ಷದಲ್ಲಿ ಅದು ಶೇಕಡ ೧೩ಕ್ಕೆ ಏರಿದೆ! ಅಮೆರಿಕಾದ ಕುಟುಂಬಗಳು ಶೇಕಡ ೪ರಷ್ಟು ಮಾತ್ರ ಉಳಿತಾಯ ಮಾಡುತ್ತಿದ್ದು, ಒಂದುವೇಳೆ ಇದು ೨೦೧೦ರ ವೇಳೆಗೆ ಶೇಕಡ ೧೦ಕ್ಕೆ ಏರಿದರೆ, ಅಗತ್ಯವಿರುವ ತಿದ್ದುಪಡಿ ತರಲು ಸಾಧ್ಯವಾದೀತು ಎನ್ನಲಾಗಿದೆ. ಅಂತಹ ಸಂದರ್ಭದಲ್ಲಿ ಅಮೆರಿಕನ್ನರು ವಿಪರೀತ ವೈಭೋಗದ ಜೀವನವನ್ನು ಕೈಬಿಡಬೇಕಾಗುತ್ತದೆ. ಬರುವ ಒಂದೆರಡು ಪೀಳಿಗೆಗಳ ಈ ರಾಷ್ಟ್ರೀಯ ಸಾಲವನ್ನು ಹೊರಬೇಕಾಗಿದೆ. ಅಂದರೆ, ಅಮೆರಿಕಾ ಕೊಳ್ಳುತ್ತದೆ ಎಂದು ನಾವು ಹೆಚ್ಚು ಉತ್ಪಾದಿಸಿದರೆ ಅವರಿಗಾದಂತೆಯೇ ನಮಗೂ ಕಷ್ಟದ ದಿನಗಳು ದೂರವಿರುವುದಿಲ್ಲ. ಚೀನಾ ಈಗ ಆಂತರಿಕವಾಗಿ ಅನುಭೋಗವನ್ನು ಹೆಚ್ಚಿಸುವ, ಅಂದರೆ ಸಾರ್ವಜನಿಕ ಹೂಡಿಕೆಯನ್ನು ಹೆಚ್ಚು ಮಾಡುವತ್ತ ಒಲವು ತೋರಿದೆ. ಯಾವತ್ತಿಗೂ ಪಾಶ್ಚಿಮಾತ್ಯ ವ್ಯವಸ್ಥೆಯಲ್ಲಿ ಆಗಾಗ್ಗೆ ಸಂಭವಿಸುವ ಅತಿ ದುಬಾರಿ ಬೆಲೆ ಏರಿಕೆ ಅವರನ್ನು ಪೀಡಿಸುತ್ತಿದೆ. ಅಮೆರಿಕಾ ಅನುಸರಿಸುತ್ತಿರುವ ಪರಿಹಾರ ಮಾರ್ಗ ಸರಿಯಲ್ಲ ಎನ್ನುವ ಯೂರೋಪ್ ವ್ಯವಸ್ಥೆ ಮುಳುಗುವ ಕಂಪನಿಗಳು ಮುಳುಗಲು ಬಿಡುವುದೇ ಸರಿಯಾದ ಮಾರ್ಗ ಎನ್ನುತ್ತದೆ. ಅದು ಬಂಡವಾಳ ಅರ್ಥಶಾಸ್ತ್ರದ ಮಾರ್ಗ. ಬರುವ ದಿನಗಳಲ್ಲಿ ಬಂಡವಾಳ ವ್ಯವಸ್ಥೆಯನ್ನು ಅನುಸರಿಸುತ್ತಿರುವ ಭಾರತ ಎತ್ತ ಸಾಗಲಿದೆ ಎನ್ನುವುದು ಅಭ್ಯಸನೀಯ ಮತ್ತು ಕುತೂಹಲಕಾರಿ ವಿಷಯ. ಈಗಿನ ಅಮೆರಿಕಾ ಸರ್ಕಾರ ಸಾಗುತ್ತಿರುವ ಮಾರ್ಗವನ್ನು ಇಲ್ಲಿನ ರಿಪಬ್ಲಿಕನ್ನರು ಸಮಾಜವಾದವೆಂದು ಆಪಾದಿಸುತ್ತ ಪ್ರತಿದಿನವೂ ತರಾಟೆಗೆ ತೆಗೆದುಕೊಳ್ಳುತ್ತಿದ್ದಾರೆ! ಕಂಪನಿಗಳಿಗೆ ಸರ್ಕಾರ ಹಣ ನೀಡಬೇಕಂತೆ! ಆದರೆ ಸರ್ಕಾರಿ ಪ್ರತಿನಿಧಿಗಳನ್ನು ಅವರ ಆಡಳಿತ ಮಂಡಳಿಗೆ ನಿಯಮಿಸಕೂಡದಂತೆ!

ಕೆ. ಎಸ್. ಪಾರ್ಥಸಾರಥಿ
ಸಾಂತಾಕ್ಲಾರ ನಗರ, ಕ್ಯಾಲಿಫೋರ್ನಿಯ, ಅಮೆರಿಕಾ ಸಂಯುಕ್ತ ಸಂಸ್ಥಾನ

# ಭಾರತದ ಎಡರಂಗ ಪ್ರಾಮಾಣಿಕ ಆತ್ಮಾವಲೋಕನಕ್ಕೆ ಸಕಾಲ

**ಮ. ಶ್ರೀ. ಮುರಳಿಕೃಷ್ಣ**

> ಎಡರಂಗದ ನಾಯಕರು ಈ ತೃತೀಯ ರಂಗವನ್ನು ಒಂದು ಧರ್ಮನಿರಪೇಕ್ಷಕ ರಂಗ ಎಂದು ಘೋಷಿಸಿದರು. ಟಿಡಿಪಿ. ಅಣ್ಣಾಡಿಎಂಕೆ, ಜೆಡಿ (ಎಸ್), ಮುಂತಾದ ಪಕ್ಷಗಳು ಅಧಿಕಾರಕ್ಕೋಸ್ಕರ ಎನ್‌ಡಿಎಯೊಡನೆ ಕೈ ಜೋಡಿಸಿರಲಿಲ್ಲವೆ ? ಒರಿಸ್ಸಾದಲ್ಲಿ ಬಿಜೆಡಿಯಂತೂ ಸುಮಾರು 11 ವರ್ಷಗಳ ಕಾಲ ಎನ್‌ಡಿಎ ಸಖ್ಯದಲ್ಲಿತ್ತು, ಇನ್ನು ಬಿಎಸ್‌ಪಿ ಸಹ ಬಿಜೆಪಿಯೊಡನೆ ಉತ್ತರಪ್ರದೇಶದಲ್ಲಿ ಅಧಿಕಾರವನ್ನು ಹಂಚಿಕೊಂಡಿರಲಿಲ್ಲವೇ ? ಇಂಥಾ ಪಕ್ಷಗಳಿಂದ ಯಾವ ಬಗೆಯ ಸೈದ್ಧಾಂತಿಕ, ಸುಸ್ಥಿರ, ರಾಜಕೀಯ ಪರ್ಯಾಯವನ್ನು ನಿರೀಕ್ಷಿಸಬಹುದು ?

ಇತ್ತೀಚಿನ ಲೋಕಸಭಾ ಚುನಾವಣೆಯ ಫಲಿತಾಂಶ ಪ್ರಕಟವಾದ ನಂತರ ಅನೇಕರು ಎಡಪಕ್ಷಗಳ ಬಗೆಗೆ ಕಟುವಾಗಿ ವಿಮರ್ಶಿಸಿದ್ದಾರೆ. ಈ ವಿಷಯದಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳು ಸಂವಾದ, ಚರ್ಚೆ ಮತ್ತು ವಿಷಯ ವಿನಿಮಯಗಳಿಗೆ ಗ್ರಾಸವಾಗಬಲ್ಲದು. ಮಹಾ ಚುನಾವಣೆಯಲ್ಲಿ ಎಡರಂಗಕ್ಕೆ ಎಡವಟ್ಟಾದದ್ದು ಏಕೆ ಎಂದು ವಿಶ್ಲೇಷಿಸಿದಾಗ, ಕಂಡುಬರುವ ಕಾಣ್ಕೆಗಳು ಅನೇಕ.

ಎಡರಂಗ ಯುಪಿಎ ಸರ್ಕಾರಕ್ಕೆ ತನ್ನ ಬೆಂಬಲವನ್ನು ವಾಪಸ್ಸು ಪಡೆದ ಹಿನ್ನೆಲೆಯಲ್ಲಿ ಪ್ರಮುಖ ಕಾರಣವಾದದ್ದು ಅಮೆರಿಕದೊಡನೆ ಜರುಗಿದ ಅಣು ಒಪ್ಪಂದ. ನಿಜ, ನಮ್ಮ ರಾಷ್ಟ್ರದ ಸಾರ್ವಭೌಮತೆ ಮತ್ತು ಸ್ವಾಯತ್ತತೆಯನ್ನು ಎತ್ತಿ ಹಿಡಿಯುವ ದಿಶೆಯಲ್ಲಿ ಎಡರಂಗದ ಈ ಪಾತ್ರ ಸಕಾರಾತ್ಮಕವಾದುದ್ದೇ ಆಗಿತ್ತು. ಆದರೆ ಅದೊಂದೇ ಕಾರಣದಿಂದ ಎಡರಂಗ ಯುಪಿಎ ಸರ್ಕಾರಕ್ಕೆ ನೀಡಿದ ಬೆಂಬಲವನ್ನು ವಾಪಸ್ಸು ತೆಗೆದುಕೊಳ್ಳಲಿಲ್ಲ. ಹಲವು ಆರ್ಥಿಕ ವಿಷಯಗಳೂ ಇದ್ದವು ಎಂಬುದು ಬಹಳ ಮುಖ್ಯ. ಆದರೆ ಮಾಧ್ಯಮಗಳಲ್ಲಿ ಹೆಚ್ಚು ಬಿಂಬಿತವಾದದ್ದು ಅಣು ಒಪ್ಪಂದಕ್ಕೆ ಒಡ್ಡಿದ ಎಡರಂಗದ ಪ್ರತಿರೋಧ. ಸಾಮಾನ್ಯ ಕನಿಷ್ಠ ಕಾರ್ಯಕ್ರಮದ ಯಾವ ಅಂಶಗಳಿಂದ ಯುಪಿಎ ಸರ್ಕಾರ ದೂರವಾಗಿತ್ತು ಎಂಬುದನ್ನು ಸಾರ್ವಜನಿಕ ವಲಯದ ಮುಂದೆ ಮಂಡಿಸುವುದರಲ್ಲಿ ಎಡರಂಗ ವಿಫಲವಾಯಿತು. ಸಾಮಾನ್ಯ ಜನರ ಮಧ್ಯೆ ಅಣು ಒಪ್ಪಂದ ಒಂದು ಗಹನವಾದ ವಿಷಯವಾಗಲಿಲ್ಲ. ಬೆಲೆಏರಿಕೆ, ಆರ್ಥಿಕ ಹಿಂಜರಿತ, ನಿರುದ್ಯೋಗ ಮುಂತಾದ ಗಂಭೀರ ಸಮಸ್ಯೆಗಳಿಂದ ಕಂಗಾಲಾಗಿರುವ ಜನತೆಗೆ ಅಣು ಒಪ್ಪಂದದಂಥ ವಿಷಯ ತಟ್ಟಲಿಲ್ಲ. ಮತದಾರರಲ್ಲಿ ಶೇ. ೩೦-೩೫ರಷ್ಟು ಇರುವ ಯುವಕರಿಗೆ ಎಡರಂಗ ಈ ಕಾರಣಕ್ಕಾಗಿ ಕೇಂದ್ರ ಸರ್ಕಾರಕ್ಕೆ ಬೆಂಬಲ ವಾಪಸ್ಸು ಪಡೆದದ್ದು ಕಿರಿಕಿರಿಯೆಂದೆನಿಸಿರಬಹುದು.

ಇನ್ನು ತೃತೀಯ ರಂಗದ ವಿಷಯ. ಯುದ್ಧಕಾಲೇ ಶಸ್ತ್ರಾಭ್ಯಾಸ ಎಂಬ ನಾಣ್ನುಡಿಗೆ ಸರಿಹೊಂದುವಂತಿತ್ತು ಇದರ ರಚನೆ. ಇದು 'ತೃತೀಯ' ಗಂಗದಲ್ಲಿ, 'ಪರ್ಯಾಯ' ಎಂದು ಎಡರಂಗದ ನಾಯಕರು ಮಾಧ್ಯಮಗಳಲ್ಲಿ ಸಮಜಾಯಿಷಿ ನೀಡಿದರೂ. ಅದರ ಅಂಗಪಕ್ಷಗಳ ರಾಜಕೀಯ ವರಸೆಗಳು ಜನರಿಗೆ ತಿಳಿಯದ ವಿಷಯವೇನಾಗಿರಲಿಲ್ಲ. ಯಾವ ಸಿದ್ಧಾಂತವು ಇವುಗಳನ್ನು ಸಮರ್ಥವಾಗಿ ಶಕ್ತಿಶಾಲಿಯಾಗಿ ಬೆಸೆಯುವ ಕೊಂಡಿಯಾಗಿತ್ತು? ಹೋಗಲಿ, ಸಾಮಾನ್ಯ ಕನಿಷ್ಠ ಕಾರ್ಯಕ್ರಮಗಳನ್ನೇನಾದರೂ ಅವು ಹಾಕಿಕೊಂಡಿದ್ದವೇ ? ಖಂಡಿತ ಇಲ್ಲ. ಎಡಪಕ್ಷಗಳನ್ನು ಹೊರತುಪಡಿಸಿ, ಬೇರೆ ಪಕ್ಷಗಳಿಗೆ ಇದ್ದದ್ದು ಕಾಂಗ್ರೆಸ್ಸನ್ನು ಸೋಲಿಸುವ ಉದ್ದೇಶ ಮಾತ್ರ. ವಿಷಯ ಹೀಗಿದ್ದಾಗ, ಎಡಪಕ್ಷಗಳು ಈ ಕಿಚಡಿ ರಂಗಕ್ಕೆ ನಾಯಕತ್ವ ನೀಡಲು ತರಾತುರಿ ತೋರಿಸಿದ್ದುದರ ಹಿಂದೆ ಯಾವ ಪ್ರಬಲ ಕಾರಣಗಳು ಇದ್ದವು ?

ಹಿಂದೆಯೂ ಈ 'ತೃತೀಯ ರಂಗ'ದ ಪ್ರಹಸನ ಫಲ ಕೊಟ್ಟಿರಲಿಲ್ಲ. ಈಗಲೂ ಅಷ್ಟೇ. ಕಳೆದ ವರ್ಷ ಕರ್ನಾಟಕದಲ್ಲಿ ಜರುಗಿದ ವಿಧಾನಸಭೆಯ ಚುನಾವಣೆಯ ಸಂದರ್ಭದಲ್ಲೂ ಒಂದು ಬಗೆಯ ತೃತೀಯ ರಂಗದ ರಚನೆಯಾಗಿತ್ತು. (ಸಿಪಿಎಂ ಪಕ್ಷ ಇದರಿಂದ ಹೊರಗುಳಿದಿತ್ತು)

ಆಗಲೂ ಆತುರಾತುರವಾಗಿ ಈ ರಂಗವನ್ನು ಕಟ್ಟಲಾಯಿತು. ಈ ಪ್ರಹಸನವನ್ನು ಮತದಾರರು ತಿರಸ್ಕರಿಸಿದರು. ಚುನಾವಣೆಗಳಲ್ಲಿ ಸೋಲು, ಗೆಲುವು ಇದ್ದದ್ದೇ ಆದರೆ ಸೈದ್ಧಾಂತಿಕ ಹಿನ್ನೆಲೆಯಿರುವ ಎಡಪಕ್ಷಗಳು ರಾಜಕೀಯ ಪರ್ಯಾಯವೊಂದನ್ನು ಜನರ ಮುಂದಿಡುವಾಗ ಜತನದಿಂದಿರಬೇಕಲ್ಲವೇ ?

ಎಡರಂಗದ ನಾಯಕರು ಈ ತೃತೀಯ ರಂಗವನ್ನು ಒಂದು ಧರ್ಮನಿರಪೇಕ್ಷಕ ರಂಗ ಎಂದು ಘೋಷಿಸಿದರು. ಟಿಡಿಪಿ, ಅಣ್ಣಾ ಡಿಎಂಕೆ, ಜೆಡಿ (ಎಸ್), ಮುಂತಾದ ಪಕ್ಷಗಳು ಅಧಿಕಾರಕ್ಕೋಸ್ಕರ ಎನ್‌ಡಿಎಯೊಡನೆ ಕೈ ಜೋಡಿಸಿರಲಿಲ್ಲವೆ ? ಒರಿಸ್ಸಾದಲ್ಲಿ ಬಿಜೆಡಿಯಂತೂ ಸುಮಾರು ೧೧ ವರ್ಷಗಳ ಕಾಲ ಎನ್‌ಡಿಎ ಸಖ್ಯದಲ್ಲಿತ್ತು. ಇನ್ನು ಬಿಎಸ್‌ಪಿ ಸಹ ಬಿಜೆಪಿಯೊಡನೆ ಉತ್ತರ ಪ್ರದೇಶದಲ್ಲಿ ಅಧಿಕಾರವನ್ನು ಹಂಚಿಕೊಂಡಿರಲಿಲ್ಲವೇ ? ಇಂಥಾ ಪಕ್ಷಗಳಿಂದ ಯಾವ ಬಗೆಯ ಸೈದ್ಧಾಂತಿಕ, ಸುಸ್ಥಿರ, ರಾಜಕೀಯ ಪರ್ಯಾಯವನ್ನು ನಿರೀಕ್ಷಿಸಬಹುದು ?

೧೯೪೦ರ ದಶಕದ ಕೊನೆಯಲ್ಲಿ ಭಾರತ ಕಮ್ಯುನಿಸ್ಟ್ ಪಕ್ಷ ಶಸ್ತ್ರಾಸ್ತ್ರಗಳ ಹೋರಾಟದಿಂದ ವಿಮುಖವಾಯಿತು. ಅಂದರೆ, ಸಂಸದೀಯ ಪ್ರಜಾಪ್ರಭುತ್ವ ವ್ಯವಸ್ಥೆಯೊಡನೆ ತನ್ನನ್ನು ಗುರುತಿಸಿಕೊಂಡಿತು.

೧೯೫೨ರಲ್ಲಿ ಜರುಗಿದ ಮೊದಲ ಸಾರ್ವತ್ರಿಕ ಮಹಾ ಚುನಾವಣೆಯಲ್ಲಿ ಅದು ಪ್ರಮುಖ ವಿರೋಧ ಪಕ್ಷವಾಗಿ ಹೊರಹೊಮ್ಮಿತು. ಸಂಸದೀಯ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಒಪ್ಪಿಕೊಂಡ ಮೇಲೆ, ಚುನಾವಣೆಯ ದೃಷ್ಟಿಯಿಂದ ಕೆಲವು ಕಾರ್ಯತಂತ್ರಗಳನ್ನು ರೂಪಿಸುವುದು ಸಹಜ. ಆ ನಿಟ್ಟಿನಲ್ಲಿ ಎಡವೂ ಅಲ್ಲದ ಬಲವೂ ಅಲ್ಲದ ಅಡ್ಡಗೋಡೆಯ ಮಧ್ಯಮ ಪಕ್ಷಗಳ ಜೊತೆಗೆ ಸೇರಿ ಚುನಾವಣೆಗಳನ್ನು ಎದುರಿಸಬೇಕು ಎಂಬುದು ಒಂದು ಕಾರ್ಯತಂತ್ರವಷ್ಟೇ ಎಂಬ ಅಂಶವನ್ನು ಎಡರಂಗದ ಪಕ್ಷಗಳು ಪ್ರತಿಪಾದಿಸುತ್ತಲೇ ಬಂದಿವೆ. ಇದೊಂದು ಮಕ್ಕಳು ಆಡುವ (ಈಗಿನ ಕಾಲದ ಮಕ್ಕಳಿಗೆ ಬಹುಶಃ ಈ ಆಟದ ಪರಿಚಯವಿರುವುದಿಲ್ಲವೇನೋ) 'ಕೂಸುಮರಿ' ಆಟದಂತೆ. ಇನ್ನೆಷ್ಟು ವರ್ಷಗಳ ಕಾಲ ಎಡಪಕ್ಷಗಳು 'ಕೂಸುಮರಿ'ಗಳಾಗಿರುತ್ತವೆ ?

ಯುಪಿಎ ಸರ್ಕಾರ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ, ಬುಡಕಟ್ಟು ಜನಾಂಗಗಳಿಗೆ ಸಂಬಂಧಿಸಿದಂತೆ ಟ್ರೈಬಲ್ಸ್ ಆ್ಯಕ್ಟ್ (ಗುಡ್ಡುಗಾಡು ಜನರಿಗೆ ಸಂಬಂಧಿಸಿದ ಶಾಸನ) ವಿತ್ತೀಯ ಸೇರ್ಪಡೆ, ರೈತರಿಗೆ ಸಾಲ ಮನ್ನಾ – ಮುಂತಾದಂಥ ಜನಪರ ಕಾರ್ಯಕ್ರಮಗಳನ್ನು ಜಾರಿ ಮಾಡಿತು. ಅವುಗಳ ಹಿಂದೆ ಎಡಪಕ್ಷಗಳ ಗಮನಾರ್ಹ ಕೊಡುಗೆಗಳಿದ್ದವು. ಆದರೆ ಇವುಗಳ ರಾಜಕೀಯ ಲಾಭ ಪಡೆದದ್ದು ಕಾಂಗ್ರೆಸ್ ಪಕ್ಷ ಎಂಬುದು ಕೆಲವು ರಾಜಕೀಯ ವಿಶ್ಲೇಷಕರ ಅಂಬೋಣ. ಅಂದರೆ ಈ ಸಾಮಾಜಿಕ, ಪ್ರಜಾಪ್ರಭುತ್ವವಾದಿ ಕ್ರಿಯಾಶಾಲಿತ್ವಕ್ಕೆ ಇರುವ ಅವಕಾಶವು ಕಾಂಗ್ರೆಸ್ ಪಕ್ಷಕ್ಕೆ ವರದಾನವಾಗಿ ಪರಿಣಮಿಸಿತೆಂದು

[illegible] ಈ ದಿಶೆಯಲ್ಲಿ ಎಡಪಕ್ಷಗಳು ಎಡವಿದ್ದಾದರೂ ಎಲ್ಲಿ?

ಈ ಕೆಲವು ಅಂಶಗಳನ್ನು ಗಮನದಲ್ಲಿರಿಸಿಕೊಂಡು, ನಮ್ಮ ಸಂಸದೀಯ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಎಡಪಕ್ಷಗಳು ಮುನ್ನಡೆಯಬೇಕಾದರೆ, ಅವು ತಮ್ಮ ಐಕ್ಯತೆಗಾಗಿ ಸರಿಯಾದ, ಸೂಕ್ತವಾದ, ಐತಿಹಾಸಿಕ ನಿರ್ಧಾರಗಳನ್ನು ತೆಗೆದುಕೊಳ್ಳಬೇಕು. ಈ ನಿಟ್ಟಿನಲ್ಲಿ ಎಡರಂಗ ಆತ್ಮಾವಲೋಕನ ಮಾಡಿಕೊಳ್ಳಬೇಕು. ೧೯೬೪ರಲ್ಲಿ ಭಾರತ ಕಮ್ಯುನಿಸ್ಟ್ ಪಕ್ಷ ವಿಭಜನೆಯಾಯಿತು. ಅದರ ಹಿಂದೆ, ಸೈದ್ಧಾಂತಿಕ ಭಿನ್ನಾಭಿಪ್ರಾಯಗಳಿದ್ದವು. ಅಂತಾರಾಷ್ಟ್ರೀಯ ಆಯಾಮವೂ ಇತ್ತು. ಆದರೆ ಈ ನಲ್ವತ್ತೈದು ವರ್ಷಗಳಲ್ಲಿ ಪ್ರಪಂಚದಾದ್ಯಂತ ಅನೇಕ ಬಗೆಯ ಪಲ್ಲಟಗಳು ಜರುಗಿವೆ. ಅವುಗಳನ್ನು ಗಣನೆಗೆ ತೆಗೆದುಕೊಂಡು, ಮೊದಲು, ಭಾರತದ ಎಡಪಕ್ಷಗಳು ಐಕ್ಯತೆ ಸಾಧಿಸುವ ದಿಶೆಯಲ್ಲಿ ಪ್ರಾಮಾಣಿಕವಾಗಿ ಶ್ರಮಿಸಬೇಕು. ನಂತರ, ರೈತ, ದಲಿತ ಮತ್ತು ಇತರ ಪುರೋಗಾಮಿ ಸಂಘಟನೆಗಳು/ಗುಂಪುಗಳ ಜೊತೆ ಸೂಕ್ತವಾದ ಕಾರ್ಯಕ್ರಮಾಧಾರಿತ ಹೊಂದಾಣಿಕೆಯನ್ನು ಮಾಡಿಕೊಂಡು ಅವ್ಯಾಹತವಾಗಿ ಜನರ ನಡುವೆ ಕೆಲಸ ಮಾಡಬೇಕು. ಆಗ ಮಾತ್ರ ಚುನಾವಣಾ ಕಣದಲ್ಲಿ ಕೆಲವೊಂದು ಫಲಗಳನ್ನು ನಿರೀಕ್ಷಿಸಬಹುದು. ಕೆಲವು ಸೀಟುಗಳಿಗಾಗಿ, ಚುನಾವಣೆಗಳ ಮುನ್ನ, ರಾಜಕೀಯ ದೊಂಬರಾಟದಲ್ಲಿ ತೊಡುಗುವುದು ಎಡಪಕ್ಷಗಳಿಗೆ ಶೋಭೆ ತರುವುದಿಲ್ಲ.

ಭಾರತದ ಎಡಪಂಥದ ಸಂಘಟನೆಗಳಲ್ಲಿ ಅನೇಕ ಕ್ರಾಂತಿಕಾರಿಗಳಿದ್ದಾರೆ. ಅಪ್ರತಿಮ ಹೋರಾಟಗಾರರಿದ್ದಾರೆ. ಭಾರತದ ಕಮ್ಯುನಿಸ್ಟ್ ಚಳುವಳಿಗೆ ಭವ್ಯ ಇತಿಹಾಸವಿದೆ. ಇಟಲಿಯ ಕಮ್ಯುನಿಸ್ಟ್ ಪಕ್ಷದ ಸ್ಥಾಪಕರಲ್ಲಿ ಒಬ್ಬನಾಗಿದ್ದ ಆಂಟೋನಿಯೊ ಗ್ರಾಮ್ಷಿ, ರೋಸ ಲಕ್ಸಂಬರ್ಗ್, ಟ್ರಾಟ್ಸ್ಕಿ, ಡಿಮಿತ್ರೊವ್ ಮುಂತಾದವರ ವಿಚಾರಗಳ ಕುರಿತು ಇಂದು ಎಡಪಕ್ಷಗಳಲ್ಲಿ ಮತ್ತವರ ಸಂಘಟನೆಗಳಲ್ಲಿ ಆಳವಾದ ಚರ್ಚೆಯಾಗಬೇಕಾಗಿರುವ ಸಂದರ್ಭ ಒದಗಿಬಂದಿದೆ. ಇಪ್ಪತ್ತನೇ ಶತಮಾನದ ಎರಡನೇ ದಶಕದ ಕೊನೆಯಲ್ಲಿ ಇಟಲಿಯಲ್ಲಿ ಕೈಗಾರಿಕಾ ಕಾರ್ಮಿಕರ 'ಫ್ಯಾಕ್ಟರಿ ಕೌನ್ಸಿಲ್' ಎಂಬ ಚಳುವಳಿ ಬೃಹದಾಕಾರವಾಗಿ ಬೆಳೆಯಿತು. ಅದು ಸಮಾಜವಾದಿ ಹೋರಾಟಕ್ಕೆ ಕಲಿಸಿದ ಕೆಲವು ಮಹತ್ವಪೂರ್ಣ ಪಾಠಗಳ ಬಗೆಗೆ ಗ್ರಾಮ್ಷಿ ಹೀಗೆ ವಿವರಿಸಿದ್ದಾನೆ.

೧) ಸಾಮಾನ್ಯ ಜನರು ತಮ್ಮ ದಿನನಿತ್ಯದ ಬದುಕಿನ ಅನುಭವದಿಂದಲೇ ತಮ್ಮ ಮೇಲೆ ಅಧಿಕಾರ ಚಲಾಯಿಸುತ್ತಿರುವ ವ್ಯವಸ್ಥೆಯ ಸ್ವರೂಪವನ್ನು ಗ್ರಹಿಸಿ, ಅಂತಹ ವ್ಯವಸ್ಥೆಯ ವಿರುದ್ಧ ಹೋರಾಟವನ್ನು ಸಂಘಟಿಸುವ ಪ್ರಜ್ಞೆಯನ್ನು ಬೆಳೆಸಿಕೊಳ್ಳಲು ಸಮರ್ಥರಾಗಿರುತ್ತಾರೆ – ಎನ್ನುವುದನ್ನು ಈ ಚಳುವಳಿಯಲ್ಲಿ ಪಾಲ್ಗೊಂಡ ಸಾಮಾನ್ಯ ಕಾರ್ಮಿಕರು ಸಾಬೀತು ಪಡಿಸಿದರು.

೨) ಸಮಾಜವಾದಿ ನಾಯಕರು ಜನರ ಲೋಕಜ್ಞಾನದ ಸೂಕ್ಷ್ಮಗಳನ್ನು ಅವಶ್ಯವಾಗಿ ಗ್ರಹಿಸಬೇಕು; ಜನರು, ರಾಜಕೀಯ ಪಕ್ಷಗಳ ಪ್ರಭಾವದ ಆಚೆಗೆ, ತಮ್ಮ ನಿತ್ಯದ ಬದುಕಿನಲ್ಲಿ ಸಂಘಟಿತವಾಗುವ ರೀತಿಗಳನ್ನು ಗಮನಿಸಬೇಕು; ಪಕ್ಷವು ತನ್ನ ಅನುಭವದ ಮಿತಿಯೊಳಗೆ ಕಟ್ಟಿಕೊಂಡಿರುವ ಹೋರಾಟದ ಸ್ವರೂಪಗಳನ್ನು ಮೀರಿ, ತಮ್ಮ ಲೋಕಾನುಭವದಿಂದ, ಜನರು ಕಟ್ಟುವ ಹೋರಾಟಗಳಿಂದ ಪಾಠ ಕಲಿತು, ಹೊಸ ರೀತಿಯ ಹೋರಾಟಗಳನ್ನು ಸಂಘಟಿಸಲು ಸದಾ ಸಿದ್ಧರಾಗಿರಬೇಕು; ಹಾಗಾದಾಗ ಮಾತ್ರ ಜನರು ತಮ್ಮ ದೈನಂದಿನ ಬದುಕಿನಲ್ಲಿ ರೂಢಿಸಿಕೊಂಡ ಸಾಮೂಹಿಕ ಇಚ್ಛಾಶಕ್ತಿಯನ್ನು ಪಕ್ಷವು ಪ್ರತಿನಿಧಿಸಲು ಸಾಧ್ಯವಾಗುತ್ತದೆ; ಅಂತಹ ಪಕ್ಷ ಮಾತ್ರ ನಿಜವಾದ ಜನರ ಪಕ್ಷವಾಗಿರುತ್ತದೆ ಎನ್ನುವುದನ್ನು 'ಲಾ ಆಡಿಟೊ ನೊವೊ' ಬಳಗ ಸ್ವಾನುಭವದಿಂದ ಕಂಡುಕೊಂಡಿತು.

ಇವುಗಳ ಜೊತೆ, ಇನ್ನು ಕೆಲವು ಪಾಠಗಳತ್ತ ಗ್ರಾಮ್ಷಿ ಗಮನ ಸೆಳೆಯುತ್ತಾನೆ. ಅನೇಕ ಒಳನೋಟಗಳನ್ನು ನೀಡುವ ಗ್ರಾಮ್ಷಿಯ ಇಂತಹ ವಿಚಾರಗಳು ಎಡರಂಗದ ಆತ್ಮಾವಲೋಕನಕ್ಕೆ ದಾರಿದೀಪವಾಗಬಹುದೇ ? ಕಾಲವೇ ಹೇಳಬೇಕು.

ಆಕರ : ಗ್ರಾಮ್ಷಿಯ ವಿಚಾರಗಳಿಗೆ ಸಂಬಂಧಿಸಿದಂತೆ ಪ್ರೊ|| ಕೆ. ಫಣಿರಾಜ ವಿರಚಿತ 'ಅಂಟೋನಿಯೆ ಗ್ರಾಮ್ಷಿ' ಸಮಾಜವಾದಿ ಚಿಂತಕ ಮತ್ತು ರಾಜಕಾರಣಿ - ಪುಸ್ತಕ (ಅಭಿನವಪ್ರಕಾಶನ. ಬೆಂಗಳೂರು)

ಮ. ಶ್ರೀ. ಮುರಳಿಕೃಷ್ಣ
ನಂ ೩೮. ೩ನೇ ಕ್ರಾಸ್, ೧೫೩ ಗಾರ್ಡನಿಯಾ ಲೇಔಟ್ ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಉತ್ತರಹಳ್ಳಿ, ಬೆಂಗಳೂರು - [illegible]

# ಪ್ರೀತಿಯ ಆದೇಶ



ನಲ್ಲನ ನಾಡಿಗೆ,

ಸಾಗಿ ಹೋಗು ಚಂದಿರ ಬೀರು ನಿನ್ನ ಬೆಳದಿಂಗಳ
ಸಾರಿ ಹೇಳನ್ನ ರಮಣಗೆ ಕನಸುಗಳಾದವು ತಂಗಳ

ಮುಟ್ಟು ಹೋಗವನ ಮಲಗಿ ಬಿಟ್ಟ ಭಾವನೆಗಳ
ತಟ್ಟು ಹೋಗವನ ಮರೆತು ಹೊದ ನೆನಪುಗಳ

ಎನ್ನಿನಿಯನ ಮನಸಿನೊಳಗೆ ಕವಿದ ಕತ್ತಲೆಯ ನೀಗು
ನಿನ್ನ ಬೆಳದಿಂಗಳ ಬೆಳಕನ್ನು ಅಲ್ಲ ಚೆಲ್ಲು ಹೋಗು

ಮನೋಹರ ನೀನಿಲ್ಲದಿಂದು ಅಂದ - ಚಂದವೇತಕೆ
ಬಂದು ನೋಡೊಮ್ಮೆ ಬೆಂದ ಹೃದಯದ ಚಡಪಡಿಕೆ

ಓ ! ಚಂದಿರನೆ ಹೋಗಿ ನೀ ಸಾರು ನಲ್ಲನಿಗೆ ಈ ಸಂದೇಶ
ನೀರಸವಾಗಿ ಕಾಣದಿರು ಇದು ಪ್ರೀತಿಯ ಆದೇಶ

'ಕುಸುಮ' ಬರೆ ನಿನ್ನ ಕನಸುಗಳ ಕುರಿತು
ಮರವಾಗಲಿ ನಿನ್ನ ಭಾವನೆಗಳು ಬಲಿತು

ಪ್ರೊ|| ಕುಸುಮ ನಕೋಸಾ ಕರಾಳೆ
''ನಕೋಸಾ ನಿಲಯ'', ಶ್ರೀನಗರ, ಧಾರವಾಡ

ಶ್ರಾವಣದ ಜಿಟಿ ಜಿಟಿ ಮಳೆ ಮುಗಿದು ದಿನಗಳೇ ಕಳೆದಿದ್ದವು. ಗೌರಿ, ಗಣೇಶ ಬಂದುಹೋಗಿದ್ದರು. ಆಶ್ವೀಜ ಮಾಸದ ಆಗೊಮ್ಮೆ ಈಗೊಮ್ಮೆ ರಪ ರಪ ಸುರಿಯುವ ಮಳೆ ಆಗ ತಾನೇ ನಿಂತಿತ್ತು. ಅಂದು ರವಿವಾರ. ನನ್ನಾಕೆ ಪ್ರತೀ ದಿನ ವೀಕ್ಷಿಸುವ ಟಿವಿ ಸೀರಿಯಲ್ ಸಹ ಮಳೆಯ ಜೊತೆಗೇನೆ ಮುಗಿದು ರಿಮೋಟ್ ಪಾವರ್ ಆಫ್ ಆಗಿತ್ತು. ಮನೆಯಲ್ಲಿ ಅಪರೂಪದ ಮೌನ ಆವರಿಸಿತ್ತು. ಇನ್ನೇನು ರಾತ್ರಿಯ ಊಟಕ್ಕೇಳ ಬೇಕೆನ್ನುವಷ್ಟರಲ್ಲಿ ನನ್ನ ಮೊಬಾಯಿಲ್ ರಿಂಗಣಿಸಿತ್ತು. ''ಹಲೋ, ನಮಸ್ಕಾರ'' ಎಂದೆ. ದೂರದ ಧ್ವನಿ ಆರ್.ಬಿ.ಯವರದಾಗಿತ್ತು. ''ನಾನು, ಆರ್.ಬಿ. ವನಹಳ್ಳಿ. ಧಾರವಾಡದಿಂದ ಮಾತಾಡ್ತೀನಿ'' ಎಂಬ ಧ್ವನಿ ಕೇಳಿ ಊಟ ಮುಗಿಸಿದಷ್ಟೇ ಸಂತೋಷ, ತೃಪ್ತಿ ನನ್ನದಾಗಿತ್ತು. ಯಾಕೆಂದರೆ, ಆರ್.ಬಿ.ಯವರ ಒಡನಾಟವೇ ಅಂಥಾದ್ದು. ಅವರು ವಿದ್ಯಾರ್ಥಿಗಳಿಗೆ ನೀಡಿದ ಮಾರ್ಗದರ್ಶನ, ಸಾಮಾಜಿಕ ಚಿಂತನೆ, ಕಾಳಜಿ ಮತ್ತು ಅವರು ಸಮಾಜಕ್ಕಾಗಿ ದುಡಿದ ಎಲ್ಲ ದೃಶ್ಯಾವಳಿಗಳು ನನ್ನ ಸ್ಮೃತಿಪಟಲದ ಮೇಲೆ ಕ್ಷಣಾರ್ಧದಲ್ಲಿ ಒಂದೊಂದಾಗಿ ಮೂಡಿ ಮಾಯವಾಗಿದ್ದವು. ಈ ಎಲ್ಲ ಮಾತುಗಳು ಖಂಡಿತ ಆರ್.ಬಿ.ಯವರನ್ನು ಹೊಗಳಬೇಕೆಂದು ಬರೆದವುಗಳಲ್ಲ. ಅವರ ಪ್ರತಿಯೊಬ್ಬ ಒಡನಾಡಿಯೂ ಒಪ್ಪುವಂಥವುಗಳು. ಅವರ ವ್ಯಕ್ತಿತ್ವವೇ ಅಂಥಾದ್ದು.

ಇಂಥ ಸಂದಿಗ್ಧ ಸಮಯದಲ್ಲಿ ಫಕ್ಕನೇ ನೆನಪಾದದ್ದು ರವಿ ಬೆಳಗೆರೆಯವರು ಬರೆದ 'ನಮ್ಮಲ್ಲಿ ಅನುಕ್ಷಣ ಹುಟ್ಟುವ ಶಕ್ತಿಯೊಂದಿರುತ್ತದೆ!' ಎಂಬ ಲೇಖನ. ನಮಗೆದುರಾಗುವ ಸಮಸ್ಯೆಗಳನ್ನು ಧನಾತ್ಮಕವಾಗಿ ನೋಡುವ ಪ್ರಕ್ರಿಯೆಯನ್ನು ರವಿಯವರು ಆ ಚಿಕ್ಕ ಲೇಖನದಲ್ಲಿ ಸುಂದರವಾಗಿ ವಿವರಿಸಿದ್ದಾರೆ. ಎದುರಾಗುವ ಸಮಸ್ಯೆಯನ್ನು ಸಮಸ್ಯೆ ಎಂದು ಪರಿಗಣಿಸಿದರೆ ಅದು ಬೃಹದಾಕಾರವಾಗಿ ಬೆಳೆದು ನಮ್ಮ ತಲೆ ತಿನ್ನುತ್ತದೆ. ಅದನ್ನು ಆಹ್ವಾನ ಎಂದು ಧೈರ್ಯದಿಂದ ಎದುರಿಸಿದರೆ ಒಂದು ಸಮಸ್ಯೆಗೆ ಅನೇಕ ಪರಿಹಾರಗಳು ನಮ್ಮೆದುರು ಸುಳಿಯುತ್ತವೆ. ಸೂಕ್ತವಾದದ್ದನ್ನು ಆಯ್ದರೆ ಕೆಲಸ ಮುಗಿಯಿತು.

ಹಾಗೆಯೇ ನಾನು ವಿಷಯದ ಆಯ್ಕೆಯನ್ನು ಆಹ್ವಾನ ಎಂದು ಪರಿಗಣಿಸಿದಾಗ ವಿಷಯ ಸಿಕ್ಕೇಬಿಟ್ಟಿತು. ''ಒಂದು ಲೇಖನವನ್ನು ಹೇಗೆ ಬರೆಯಬೇಕು ?'' ಎಂಬ ವಿಷಯದ ಮೇಲೆಯೇ ಬರೆಯಲು ನಿರ್ಧರಿಸಿದೆ.

ಒಂದು ಬರಹದ ಸುತ್ತ ಕನಿಷ್ಠ ಇಬ್ಬರು ವ್ಯಕ್ತಿಗಳಿರುತ್ತಾರೆ. ಒಬ್ಬರು ಲೇಖಕರು, ಇನ್ನೊಬ್ಬರು ಓದುಗರು. ಓದುಗರು ಬರಹದ ವಿಮರ್ಶಕರೂ ಹೌದು. ನಾವು ಬರೆದದ್ದನ್ನು ಯಾರು ಓದುವರು ಎಂಬುದನ್ನು ಲೇಖಕರಾದವರು ಬರೆಯುವುದಕ್ಕಿಂತ ಮೊದಲು ನಿರ್ಧರಿಸುವದು ಸೂಕ್ತ. ಬರೆಯುವ ಬರಹ ಯಾರಿಗಾಗಿ ಎಂಬುದನ್ನೇ



# ಬರೆಯುವಾಗ ಲೇಖಕರ ಮನದಲ್ಲಿ ಓದುಗರಿರಲಿ

**ಪ್ರೊ॥ ಆರ್. ಪಿ. ಪುನಗಿನ**

ಅರಿಯದ ಅಥವಾ ಓದುಗರು ಯಾರೆಂಬುದನ್ನೇ ಮರೆತ ಲೇಖಕ ಉತ್ತಮ ಬರಹ ಬರೆಯಲಾರ. ಗುರಿ ಇರದ ನಾವೆ ದಡ ಸೇರಲಾರದು, ಸೂತ್ರವಿಲ್ಲದ ಪಟ ಮೇಲೇರಲಾರದು.

ಲೋಕಾರೂಢಿಯಂತೆ ಪ್ರಾರಂಭಿಕ ಉಭಯಕುಶಲೋಪರಿ ಮುಗಿದ ನಂತರ, ಆರ್.ಬಿ.ಯವರು ನೇರವಾಗಿ ಫೋನಾಯಿಸಿದ ವಿಷಯವನ್ನು ಪ್ರಸ್ತಾಪಿಸಿದರು. ''ನಾವು ನಮ್ಮ ಸಂಘದ ಬೆಳ್ಳಿಹಬ್ಬವನ್ನು ಹಮ್ಮಿಕೊಂಡಿದ್ದೇವೆ. ತನ್ನಿಮಿತ್ತ ಒಂದು ಸ್ಮರಣ ಸಂಚಿಕೆಯನ್ನು ಹೊರತರುವ ಯೋಜನೆ ಇದೆ. ಅದಕ್ಕಾಗಿ ನಿಮ್ಮಿಂದ ಒಂದು ಚಿಕ್ಕ ಲೇಖನವನ್ನು ಬಯಸಿದ್ದೇವೆ'' ಎಂದರು. ಒಂದು ಕ್ಷಣ ನನ್ನ ಮೈಯಲ್ಲಿ ಮಿಂಚು ಹೊಡೆದಂತಾಯಿತು. ನಾನೂ ಕನ್ನಡದಲ್ಲಿ ಬರೆಯಬಲ್ಲೆ ಎಂಬ ಆರ್.ಬಿ.ಯವರ ನನ್ನ ಮೇಲಿನ ವಿಶ್ವಾಸ, ನನ್ನಲ್ಲಿಯ ಲೇಖಕನನ್ನು ಬಡಿದೆಬ್ಬಿಸಿತ್ತು. ತಕ್ಷಣ ''ಆಯಿತು, ಯಾವ ವಿಷಯದ ಮೇಲೆ ಬರೆಯಲಿ ?'' ಎಂದು ಕೇಳಿದ್ದೆ. ಅದಕ್ಕವರು ''ವಿಷಯದ ಆಯ್ಕೆಯನ್ನು ನಿಮಗೇ ಬಿಟ್ಟಿದ್ದೇವೆ. ನಿಮಗಿಷ್ಟವಾದ ವಿಷಯವನ್ನು ಆಯ್ದು ಬರೆಯಿರಿ'' ಎಂದರು.

ಸ್ಮರಣ ಸಂಚಿಕೆಗಾಗಿ ಲೇಖನದ ವಿಷಯವನ್ನು ಆಯ್ಕೆ ಮಾಡುವುದು ಅಷ್ಟು ಸುಲಭವಲ್ಲ. ರಾತ್ರಿಯ ಊಟದ ಜೊತೆಗೆ ವಿಷಯದ ಆಯ್ಕೆಯ ಚಿಂತನೆ ಪ್ರಾರಂಭವಾಯಿತು. ಸಮಾಜದ ಏಳ್ಗೆ, ಸ್ಥಿತಿ, ಗತಿ, ದೇವರದಾಸಿಮಯ್ಯ, ವ್ಯಕ್ತಿತ್ವ ವಿಕಸನ... ಹೀಗೆ ವಿಷಯಗಳ ವಿಸ್ತಾರ ಹೆಚ್ಚಾಗುತ್ತ ಹೋಯಿತು. ಪ್ರಶ್ನೆ ಬೃಹದಾಕಾರವಾಗಿ ಬೆಳೆಯಿತು. ಪರಿಹಾರ ಕಾಣದಂತಾಯಿತು. ಚಿಂತನೆ ಮುಗಿಯದೇ ತಲೆ ಭಾರವಾಯಿತು.

ಲೇಖಕರಾಗಬಯಸುವವರೆಲ್ಲ ಮೊದಲು ಓದುಗರಾಗಬೇಕು. ಪ್ರಸಿದ್ಧ ಸಾಹಿತಿಗಳ ಕೃತಿಗಳನ್ನು ಓದಬೇಕು. ಉತ್ತಮ ವಾಗ್ಮಿಗಳ ಮಾತುಗಳನ್ನು ಕೇಳಬೇಕು. ಬರೆಯುವಾಗ ಶಬ್ದಗಳು ನಮ್ಮನ್ನು ಸೋಲಿಸುತ್ತವೆ, ಎಂಬ ಅರಿವು ಲೇಖಕರಿಗಿರಬೇಕು. ಶಬ್ದಗಳು ಲೇಖಕರ ಸಂಪತ್ತು, ಲೇಖಕರಾಗಬಯಸುವವರು ಮೊದಲು ತಮ್ಮ ಖಜಾನೆಯನ್ನು ಶಬ್ದಗಳಿಂದ ತುಂಬಿಸಿಕೊಳ್ಳಬೇಕು. ನಾವು ಬರೆಯುವುದಕ್ಕಿಂತ ಎಷ್ಟೋ ಪಟ್ಟು ಹೆಚ್ಚು ಓದಬೇಕು. ಅಂದರೆ ಎಷ್ಟು ಓದಬೇಕು ? ಓದಿ ಓದಿಯಾದ ಮೇಲೆ ನಮ್ಮ ಅಂತರಂಗದಲ್ಲಿ ಅಡಗಿದ ಲೇಖಕನು ಎಚ್ಚೆತ್ತು ಬರೆಯಲು ಪ್ರೇರೇಪಿಸುವ ತನಕ ನಮ್ಮ ಓದು ಸಾಗಬೇಕು. ಆ ಮೇಲೆ ಮತ್ತೊಬ್ಬರು ಓದಲು ಇಷ್ಟ ಪಡಬಹುದಾದದ್ದನ್ನು ಬರೆಯಬೇಕು. ಬರೆದು ತಿದ್ದಿ, ಮತ್ತೆ ಮತ್ತೆ ತಿದ್ದಿದಾಗ ಒಂದು ಒಳ್ಳೆಯ ಬರಹದ ಉದಯವಾಗುವುದು.

ಬರೆಯುವಾಗ ಕೆಲವೊಂದು ಸಲ ತಡೆಯುಂಟಾಗಬಹುದು. ನಾಚಿಕೆ ಆಗುಳಿದಂತಾಗಬಹುದು, ಅದು ಸಹಜ. ಭಾಷಣಕಾರರು ತಡವರಿಸುವದು, ಅರ್ಥಕ್ಕೆ ಮಾತು ಸಿಕ್ಕದಿರುವದು ಎದುರಿಗಿನ ಕೇಳುಗರಿಗಂಜಿ ಅಲ್ಲವೇ ? ಆಗ ಭಾಷಣಕಾರ ತನ್ನನ್ನು ತಾನೇ ವಿಮರ್ಶೆಗೊಳ ಪಡಿಸಿಕೊಳ್ಳುವುದು ಉತ್ತಮ. ಹೀಗಾದಾಗ ವಿಷಯ ಸಂಗ್ರಹದ ಕೊರತೆ ಇರಬಹುದು

ಅಥವಾ ಕೇಳುಗರನ್ನು ಅರ್ಥೈಸಿಲ್ಲದಿರಬಹುದು. ಎದುರಿಗಿದ್ದ ಕೇಳುಗರ ಹೆದರಿಕೆಗಿಂತ, ಪರಿಚಯವಿಲ್ಲದ, ಹಾಗೂ ಬರಹ ಓದುವಾಗ ಎದುರಿಗಿಲ್ಲದ ಓದುಗರನ್ನು ಗಮನದಲ್ಲಿಡುವುದು ಮುಖ್ಯ. ಹಾಗೆ ಬರೆದ ಲೇಖನ ಓದುಗರ ಹೃದಯ ಮುಟ್ಟಬಲ್ಲದು. ಯಾವುದೇ ಬರಹಕ್ಕೆ ಅದರದೇ ಆದ ವಿಶಿಷ್ಟ ಓದುಗರಿರುತ್ತಾರೆ. ಟೆಲಿಫೋನ್ ಡೈರೆಕ್ಟರಿಯನ್ನೇ ತಕ್ಕೊಳ್ಳಿ. ಅದು ಬರೀ ಅಂಕಿಸಂಖ್ಯೆಗಳಿಂದ ತುಂಬಿರಬಹುದು. ಮೊಟಕುಗೊಳಿಸಿದ ವಿಳಾಸಗಳಿರಬಹುದು. ವಿಷಯ ಪ್ರಕಟಪಡಿಸುವ ರೀತಿ ಓದುಗರಿಗೆ ತಕ್ಕುದಾಗಿದೆ. ಅದರದೇ ಆದ ಓದುಗರ ಗುಂಪಿದೆ. ಅದರಲ್ಲಿ ವ್ಯಾಪಾರಿ ವಿಜ್ಞಾಪನೆಗಳಿವೆ. ವಿಜ್ಞಾಪನೆಗಳಿರುವುದಕ್ಕೂ ಒಂದು ಉದ್ದೇಶವಿದೆ. ಒಂದು ಗುರಿ ಇದೆ. ಉದ್ದೇಶವನ್ನರಿತು ಬರೆದ ಬರಹ ಓದುಗರನ್ನು ತಲುಪುತ್ತದೆ.

ಒಂದು ಬರಹ ತಯಾರಾಗಿ ಹೊರಬಿದ್ದರೆ ಅದು ಸಮುದ್ರದಷ್ಟು ವಿಶಾಲ ಜನಸಾಗರದಲ್ಲಿ ಹೊರಳಾಡಬೇಕಾಗುತ್ತದೆ. ಓದುಗರು ಹಳ್ಳಿಯ ಒಕ್ಕಲಿಗರಾಗಿರಬಹುದು, ಪಟ್ಟಣದ ಪ್ರಬುದ್ಧರಾಗಿರಬಹುದು, ಮುಗ್ಧ ಮಕ್ಕಳಾಗಿರಬಹುದು, ಗೃಹಿಣಿಯರಾಗಿರಬಹುದು, ವಿಶ್ವವಿದ್ಯಾಲಯಗಳಲ್ಲಿಯ ವಿದ್ಯಾರ್ಥಿಗಳಾಗಿರಬಹುದು, ಜ್ಞಾನಿಗಳಾಗಿರಬಹುದು, ವಿಜ್ಞಾನಿಗಳಾಗಿರಬಹುದು. ಲಕ್ಷಾಂತರ ವಿವಿಧ ತರಹದ ಸಮೂಹದಲ್ಲಿ ಒಂದು ಗುಂಪನ್ನು ದೃಷ್ಟಿಯಲ್ಲಿಟ್ಟುಕೊಂಡು ಬರೆಯಬೇಕು. ಆಗ ಓದುಗರಿಗೊಪ್ಪುವ ಭಾಷೆ, ಲಯ, ಬರೆಯುವ ರೀತಿ ನಿರ್ಧರಿಸಲು ಸಾಧ್ಯವಾಗುವುದು. ಉಪಯೋಗಿಸುವ ಶಬ್ದಗಳೂ ಕೂಡ ಓದುಗರ ಗುಂಪಿಗೆ ಒಪ್ಪುವಂಥವುಗಳಿರಬೇಕು.

ಬರೆಯುವ ವಾಕ್ಯಗಳು ಎಷ್ಟು ದೀರ್ಘವಾಗಿರಬೇಕು ಎಂಬುದನ್ನು ಕೂಡ ಓದುಗರನ್ನು ಗಮನದಲ್ಲಿರಿಸಿಕೊಂಡು ನಿರ್ಧರಿಸಬೇಕಾಗುತ್ತದೆ. ಉದ್ದುದ್ದ ವಾಕ್ಯಗಳನ್ನು ಕತ್ತರಿಸಿ ಅರ್ಥಪೂರ್ಣ ವಾಕ್ಯಗಳನ್ನು ರಚಿಸುವುದು ಒಂದು ಕಲೆ. ಒಂದು ಸುಂದರ ಚಿತ್ರ, ಒಂದು ಒಳ್ಳೆಯ ಕವನ, ನೂರು ಪುಟಗಳ ಮಾಹಿತಿ ಒದಗಿಸುವಷ್ಟು ಸಾಮರ್ಥ್ಯ ಹೊಂದಿರುತ್ತದೆ, ಹಾಗೆಯೇ ಒಂದು ಚಿಕ್ಕ ಚುಟುಕ ಕೂಡ. ಒಂದು ಲೇಖನ ಚಿಕ್ಕ , ಉದ್ದ , ಇನ್ನೂ ಸ್ವಲ್ಪ ಉದ್ದ ವಾಕ್ಯಗಳ ಮಿಶ್ರಣವಾಗಿದ್ದರೆ ಅದು ಹೆಚ್ಚು ಓದುಗರನ್ನು ಆಕರ್ಷಿಸಲು ಸಾಧ್ಯ. ಉತ್ತಮ ಲೇಖಕರು ಈ ಕಲೆಯನ್ನು ಕರಗತಗೊಳಿಸಿಕೊಳ್ಳಬೇಕು.

ಒಂದು ಮಕ್ಕಳ ಪುಸ್ತಕ ನೋಡಿದ ನೆನಪು. ಆ ಪುಸ್ತಕದ ಪ್ರತಿ ಎಡ ಪುಟದಲ್ಲಿ ರೇಖಾಚಿತ್ರಗಳು, ಬಲಪುಟದಲ್ಲಿ ಉದ್ದುದ್ದ ವಾಕ್ಯಗಳ ಬರಹ. ಬರಹ ಲಯಬದ್ಧವಾಗಿದೆ. ಆದರೆ ಅದನ್ನು ಓದಿದಾಗ ನನಗನಿಸಿದ್ದು, ಬಹುಶಃ ಬರಹಗಾರನ ದೃಷ್ಟಿಯಲ್ಲಿ ಆ ಪುಸ್ತಕ ಮಕ್ಕಳನ್ನು ಮಲಗಿಸಲು ಬರೆದದ್ದಾಗಿರಬೇಕು. ತಾಯಂದಿರು ಮಗುವನ್ನು ತೊಡೆಯ ಮೇಲೆ ಮಲಗಿಸಿಕೊಂಡು ಆ ಪುಸ್ತಕ ಜೋರಾಗಿ ಓದುತ್ತಿದ್ದರೆ, ಅದರಲ್ಲಿಯ ಉದ್ದುದ್ದ ವಾಕ್ಯಗಳು ಮಗುವಿಗೆ ಜೋಗುಳ ಹಾಡಿದಂತೆ ಅನಿಸುತ್ತಿರಬೇಕು. ಅದು ಮಕ್ಕಳ ಪುಸ್ತಕವಾದರೂ ಮಕ್ಕಳೇ ಓದುವದಕ್ಕಾಗಿ ಅಲ್ಲ ಅನ್ನಿಸಿತು. ಮಕ್ಕಳೇ ಓದುವ ಪುಸ್ತಕವಾಗಿದ್ದರೆ ವಾಕ್ಯಗಳ ಉದ್ದ ಮತ್ತು ಭಾಷೆ ಮಕ್ಕಳಿಗೆ ತಕ್ಕುದಾಗಿರಬೇಕು. ಬರೆಯುವಾಗ ಓದುಗರ ಗುಂಪು ಹಾಗೂ ಬರಹದ ಉದ್ದೇಶಗಳೆರಡೂ ಲೇಖಕರ ದೃಷ್ಟಿಯಲ್ಲಿರಬೇಕು. ಸಾಧ್ಯವಿದ್ದ ಮಟ್ಟಿಗೆ ಓದುಗರ ಅವಶ್ಯಕತೆಗಳನ್ನು , ಅವರ ಸ್ಥಾನದಲ್ಲಿ ನಿಂತು, ಲೇಖಕ ನಿರ್ಧರಿಸಬೇಕು. ಓದುಗರ ಗುಂಪಿಗೆ ಬೇಕಾದ ಭಾಷಾ ಗಾಂಭೀರ್ಯ, ಬೇಕು ಬೇಡಗಳು, ಓದುಗರ ವಯೋಮಿತಿ, ಓದಲು ಬೇಕಾದ ಸಮಯ, ಅಭಿರುಚಿ ಮುಂತಾದವುಗಳನ್ನು ಗಮನದಲ್ಲಿಟ್ಟುಕೊಂಡು ಬರೆಯಬೇಕು. ಅರಿತು ಗಾತ್ರ ನಿಗದಿಪಡಿಸಬೇಕು. ಬೇಕೆನಿಸಿದಷ್ಟು ಹಾಸ್ಯದ ಝುಳಕೂ ಇದ್ದರೆ ಒಳ್ಳೆಯದು. ನಮ್ಮ



ನಿತ್ಯಜೀವನದಲ್ಲಿ ಇವು ಚಾತುರ್ಯದ ಲಕ್ಷಣಗಳಾದರೆ ಬರಹದಲ್ಲಿ ಇವು ಓದುಗರನ್ನು ಅರಿಯುವ ಗುಣ ವಿಶೇಷಗಳು. ಗ್ರಾಹಕರು ವ್ಯಾಪಾರಿಗಳಿಗೆ, ವಿದ್ಯಾರ್ಥಿಗಳು ಶಿಕ್ಷಕರಿಗೆ ಹೇಗೋ ಹಾಗೆ ಲೇಖಕರಿಗೆ ಓದುಗರು. ಬರೆಯುವುದೇ ಅವರಿಗಾಗಿ ಎಂದ ಮೇಲೆ ಅವರನ್ನು ತೃಪ್ತಿಪಡಿಸುವುದು ಲೇಖಕರ ಧರ್ಮ.

ಲೇಖನ ಬರೆಯುವಾಗ ಅವರ ಮನದಲ್ಲಿ ಓದುಗರಿರಬೇಕು, ನಿಜ. ಆದರೆ ಎಲ್ಲ ಓದುಗರು ವಿಭಿನ್ನರಾಗಿರುವರಲ್ಲ! ಒಬ್ಬರು ಇನ್ನೊಬ್ಬರಂತಲ್ಲ. ಪ್ರತಿಯೊಬ್ಬರ ಪ್ರಬುದ್ಧತೆ, ಶಿಕ್ಷಣ ಮಟ್ಟ ಬೇರೆ ಬೇರೆ. ಅವರಿರುವ ಪರಿಸರ, ಕಾರ್ಯಕ್ಷೇತ್ರ, ಅವರಾಡುವ ಭಾಷೆ, ಭಾಷಾ ಪಾಂಡಿತ್ಯ, ಆಸಕ್ತಿ, ವಯಸ್ಸು, ಅಭಿರುಚಿ ಎಲ್ಲವೂ ವಿಭಿನ್ನ. ಹಾಗಾದರೆ ಎಲ್ಲರೂ ಓದಬಹುದಾದ ಲೇಖನವನ್ನು ಬರೆಯುವುದು ಹೇಗೆ? ಅಲ್ಲಿಯೇ ಉತ್ತಮ ಲೇಖಕನ ಪರಿಣತಿ ಅಡಗಿರುವದು. ಒಬ್ಬ ಸಿನಿಮಾ ನಿರ್ದೇಶಕ ಕೂಡ ತಾನು ನಿರ್ದೇಶಿಸುವ ಚಿತ್ರವು ಎಲ್ಲರೂ ನೋಡುವಂಥಾದ್ದಿರಲಿ ಎಂದು ಬಯಸುವನು. ತನ್ನ ಮನದಲ್ಲಿರುವ ಪ್ರೇಕ್ಷಕರ ಗುಂಪಿನಲ್ಲಿ ಇರಬಹುದಾದ, ಅವರಲ್ಲಿ ಹೆಚ್ಚು ಪ್ರತಿಶತ ಜನರು ಬಯಸುವ ಎಲ್ಲ ಅಂಶಗಳನ್ನು ಅಳವಡಿಸಿ ಚಿತ್ರ ನಿರ್ದೇಶಿಸುವನು. ಅಂಥ ಚಿತ್ರ ಪ್ರೇಕ್ಷಕರ ಮನ್ನಣೆ ಪಡೆಯುವುದು. ಹಾಗೆಯೇ ಲೇಖಕನು ಕೂಡ ನಿರ್ಧರಿಸಿದ ಓದುಗರ ಗುಂಪನ್ನು ಮನದಲ್ಲಿಟ್ಟುಕೊಂಡು, ಹೆಚ್ಚು ಪ್ರತಿಶತ ಓದುಗರು ಬಯಸುವ ಅಂಶಗಳನ್ನು ಲೇಖನದಲ್ಲಿ ಅಳವಡಿಸಬೇಕು. ಅಂಥ ಲೇಖನ ಹೆಚ್ಚು ಓದುಗರನ್ನು ತಲುಪುವುದು. ಖಂಡಿತ ಅಂಥ ಲೇಖನ ಸುಂದರವಾಗಿ ಮೂಡಿ ಬರುತ್ತದೆ. ಓದುಗರು ಲೇಖನ ಓದುವಾಗ, ಅರೆರೆ !! ಈ ಲೇಖನ ನನಗಾಗಿಯೇ ಬರೆದಿದ್ದಾರಲ್ಲ! ಎಂಬ ಭಾವನೆ ಓದುಗರಲ್ಲಿ ಬರಬೇಕು. ಲೇಖಕ ನನ್ನೊಡನೆ ಸಲ್ಲಾಪ ಮಾಡುತ್ತಿದ್ದಾನೆ ಎಂದವರಿಗನಿಸಬೇಕು. ಓದುವಾಗ ಆಗಾಗ ಓದುಗ ತಂತಾನೆ ಮುಗುಳ್ನಗುವಂತಿರಬೇಕು. ಸನ್ನಿವೇಶಗಳ ವರ್ಣನೆ ಓದುಗರ ಮನಃಪಟಲದಲ್ಲಿ ಸ್ಪಷ್ಟವಾಗಿ ಮೂಡುವಂತಿರಬೇಕು. ಅಂತರಂಗದಲ್ಲಿಯ ಭಾವನೆಗಳನ್ನು ಓದುಗ ತನಗರಿವಿಲ್ಲದೆಯೇ ಗ್ರಹಿಸುವಂತಿರಬೇಕು. ಬರೆಯುವಾಗ ಲೇಖಕರ ಮನದಲ್ಲಿ ಓದುಗರಿದ್ದರೆ ಮಾತ್ರ ಅದು ಸಾಧ್ಯ.

ಒಂದು ಒಳ್ಳೆಯ ಲೇಖನಕ್ಕೆ ಅದರವೇ ಆದ ಕೆಲ ಗುಣವಿಶೇಷಗಳಿರುತ್ತವೆ, ಒಪ್ಪು ಓರಣಗಳಿರುತ್ತವೆ, ಓದುಗರ ಗುಂಪಿರುತ್ತದೆ. ಹಾಗಾದರೆ ಈ ನನ್ನ ಲೇಖನ ಯಾರಿಗಾಗಿ ? ಲೇಖನ ಓದಿದ ತಾವು, ಸ್ವತಃ ಲೇಖಕರಿರ ಬಹುದು, ಅಥವಾ ಲೇಖಕರಾಗಬಯಸುವವರಿರಬಹುದು. ಮಹಿಳೆ ಇರಬಹುದು, ಪುರುಷರಿರಬಹುದು, ವಯೋವೃದ್ಧರಿರಬಹುದು, ವಿದ್ಯಾರ್ಥಿಗಳಿರಬಹುದು, ಪ್ರಾಧ್ಯಾಪಕರಿರಬಹುದು ಅಥವಾ ವಿಮರ್ಶಕರಿರಬಹುದು. ವೃತ್ತಿ, ವಯಸ್ಸು ಯಾವುದಾದರೇನು ? ನಿಮ್ಮಲ್ಲಿ ಓದುವ ಪ್ರವೃತ್ತಿ ಹಾಗೂ ಬರೆಯುವ ಹವ್ಯಾಸ ಇದ್ದರೆ ಸಾಕು.


**ಪ್ರೊ॥ ಆರ್. ಪಿ. ಪುನಗಿನ**
ಪ್ರಾಧ್ಯಾಪಕರು, 'ಸಂಸ್ಕೃತಿ', ನಂ. ೯೮೩, ಮಹಾವೀರ ನಗರ
ಹಿಂದವಾಡಿ, ಬೆಳಗಾವಿ - ೫೯೦ ೦೦೯



೧೦ನೇ ಶತಮಾನದ ಸಾವಿಯಬ್ಬೆಯ ಶಾಸನ

10ನೇ ಶತಮಾನದ ಕಾಲಘಟ್ಟದಲ್ಲಿ ನೂರಾರು ಶಾಸನಪದ್ಯಗಳು ಬಹುಮುಖಿ ನೆಲೆಗಳಲ್ಲಿ ರಚನೆಯಾಗಿರುವುದನ್ನು ನೋಡಬಹುದು. ಪಂಪಪೂರ್ವಯುಗದಲ್ಲಿ ಶಾಸನಪದ್ಯಗಳು ಹೆಚ್ಚಾಗಿ ಜೈನ ಶಾಸನಗಳಾಗಿದ್ದು ಅದರಲ್ಲಿಯೂ ವೈರಾಗ್ಯ ವರ್ಣನೆಯ ಶಾಸನಗಳು ಹೆಚ್ಚಾಗಿ ಕಂಡುಬರುತ್ತವೆ. ಪಂಪಯುಗದಲ್ಲಿ ಚಂಪೂಕಾವ್ಯಗಳು ಕನ್ನಡದಲ್ಲಿ ಸದೃಢವಾಗಿ ನೆಲೆಗೊಂಡು ತಮ್ಮ ಪ್ರಭಾವವನ್ನು ಶಾಸನ ಸಾಹಿತ್ಯದ ಮೇಲೆ ಬೀರಿರುವುದನ್ನು ಕಾಣಬಹುದು. ಈ ಕಾಲದ ಸಾಹಿತ್ಯಕೃತಿಗಳಲ್ಲಿ ಕಂಡುಬರುವಂತೆ ವೀರರಸ ಪ್ರಧಾನ ಅಂಶಗಳು ಶಾಸನ ಸಾಹಿತ್ಯದಲ್ಲಿಯೂ ಕಂಡುಬರುವುದು ಮಹತ್ವದ್ದಾಗಿದೆ.

# ೧೦ನೇ ಶತಮಾನದ ಕನ್ನಡ ಶಾಸನಗಳ ಸಾಹಿತ್ಯಿಕ ಅಧ್ಯಯನ

**ಕ**ನ್ನಡ ಸಾಹಿತ್ಯ ಚರಿತ್ರೆಯಲ್ಲಿ ೧೦ನೇ ಶತಮಾನವನ್ನು ಕನ್ನಡ ಸಾಹಿತ್ಯದ ಸುವರ್ಣಯುಗವೆಂದು ಕರೆಯಲಾಗುತ್ತದೆ. ಈ ಕಾಲವು ರತ್ನತ್ರಯರಾದ ಪಂಪ, ಪೊನ್ನ, ರನ್ನರ ಚಂಪೂ ಕೃತಿಗಳು ಉದಯಿಸಿದ ಸಂದರ್ಭವೂ ಆಗಿದೆ. ಇದೇ ಕಾಲಘಟ್ಟದಲ್ಲಿ ರಚಿಸಲಾದ ನೂರಾರು ಶಾಸನ ಪದ್ಯಗಳು ದೊರೆಯುತ್ತವೆ. ಈ ಶಾಸನ ಪದ್ಯಗಳನ್ನು ಗಮನಿಸಿದಾಗ ಅವುಗಳ ಮೇಲೆ ಪಂಪ, ಪೊನ್ನ, ರನ್ನರ ಕೃತಿಗಳ ಹಾಗೂ ಪಂಪಪೂರ್ವಯುಗದ ಸಾಹಿತ್ಯದ ಪ್ರಭಾವವಿರುವಂತೆ ಕಾಣುತ್ತದೆ. ಅದೇ ರೀತಿ ೧೦ನೇ ಶತಮಾನದ ಕೆಲವು ಶಾಸನಗಳಿಂದ ಪಂಪ, ಪೊನ್ನ, ರನ್ನರೂ ಪ್ರಭಾವಿತರಾದಂತೆ ಕಾಣುತ್ತದೆ. ಈ ಯುಗದ ಸಾಹಿತ್ಯ ಕೃತಿಗಳಲ್ಲಿ ಕಾಣುವ ರಾಜಕೀಯ, ಸಾಮಾಜಿಕ, ಪ್ರಕೃತಿವರ್ಣನೆ ಇತ್ಯಾದಿ ಅಂಶಗಳನ್ನು ನಾವು ಈ ಶಾಸನ ಪದ್ಯಗಳಲ್ಲಿಯೂ ಗುರ್ತಿಸಬಹುದು. ಇಂತಹ ಪುಟ್ಟ ಚಂಪೂ ಕಾವ್ಯರೂಪದ ಶಾಸನಗಳನ್ನು ಗಮನಿಸಿದಾಗ ಯಾವ ಸಾಹಿತ್ಯಕೃತಿಗಳಿಗೇನೂ ಇವು ಕಡಿಮೆ ಇಲ್ಲ ಎನಿಸುತ್ತದೆ. ಪ್ರಸ್ತುತ ಲೇಖನದಲ್ಲಿ ೧೦ನೇ ಶತಮಾನದ ಕೆಲವು ಶಾಸನ ಕಾವ್ಯಗಳೊಂದಿಗೆ ಸಾಹಿತ್ಯಕೃತಿಗಳ ಪದ್ಯಗಳನ್ನು ತೌಲನಿಕವಾಗಿ ವಿಶ್ಲೇಷಿಸಲಾಗಿದೆ. ಹಾಗೂ ಸಾಹಿತ್ಯ ಕವಿಗಳು ಶಾಸನ ಕವಿಗಳಾಗಿದ್ದುದನ್ನು ಕೂಡ ಗುರುತಿಸಲಾಗಿದೆ. ಒಟ್ಟಿನಲ್ಲಿ ಸಾಹಿತ್ಯಕೃತಿಗಳು ಯಾವ ವಿಷಯಗಳನ್ನು ಕಾವ್ಯಮಯವಾಗಿ ಹೇಳುತ್ತವೋ ಅದೇ ವಿಷಯಗಳನ್ನು ಶಾಸನ ಪದ್ಯಗಳೂ ಹೇಳುತ್ತವೆ ಎಂಬುದನ್ನು ಚರ್ಚಿಸಲಾಗಿದೆ.

ಮೊದಲಿಗೆ, ಕ್ರಿ.ಶ. ೯೧೫ರ ಕಡಪಾ ಜಿಲ್ಲೆಯ ದಾನವುಲಪಾಡ ಶಾಸನವನ್ನು ಗಮನಿಸಬಹುದು. ''ಅನುಪಮಕವಿಯ ಸೇನಬೋವಂ ಗುಣವರ್ಮ್ಮಂ ಬರೆದಂ'' ಎಂಬ ವಾಕ್ಯದಿಂದ ಶೂದ್ರಕದ ಕರ್ತೃ ೧ನೇ ಗುಣವರ್ಮನು ಈ ಶಾಸನವನ್ನು ಬರೆದನೆಂದು ಗುರ್ತಿಸಬಹುದು. ಈ ಶಾಸನದುದ್ದಕ್ಕೂ ಕವಿರಾಜಮಾರ್ಗದ ಕರ್ತೃ ಶ್ರೀವಿಜಯನನ್ನು ಹೊಗಳಲಾಗಿದೆ. ಆದ್ದರಿಂದ ಈ ಶಾಸನವನ್ನು ಶ್ರೀ ವಿಜಯನ ಪ್ರಶಸ್ತಿ ಶಾಸನವೆನ್ನಬಹುದು. ಈ ಶಾಸನದಲ್ಲಿ ಅರಿವಿಂಗೋಜ, ಅನುಪಮ ಕವಿ, ಎಂಬ ಶ್ರೀವಿಜಯನ ಬಿರುದುಗಳನ್ನು ಹೇಳಲಾಗಿದೆ. ಈ ಬಿರುದುಗಳಿಂದ ಶ್ರೀವಿಜಯನು ಜನ್ನನಂತೆ ಕುಳ್ಳಿರೆ ದಂಢಾದೀಶಂ, ತೊಡಂಗೆ ಕವಿ ಹಾಗೂ ಧಾರ್ಮಿಕ ಸಹಿಷ್ಣುವಾಗಿದ್ದನೆಂದು ತಿಳಿದುಬರುತ್ತದೆ. ೧೧ ಕಂದಪದ್ಯಗಳಲ್ಲಿ ಶ್ರೀವಿಜಯನ ಪರಿಪೂರ್ಣ ವ್ಯಕ್ತಿತ್ವವನ್ನು ಹೇಳಿರುವುದರ ಜೊತೆಗೆ ೧ನೇ ಗುಣವರ್ಮನ ಕಾವ್ಯಶಕ್ತಿ ಪ್ರಶಂಸನೀಯವಾಗಿದೆ. ಇಲ್ಲಿ ಬರುವ ಕಂದಪದ್ಯಗಳು ಪಂಪನ ಕೆಲವು ಕಂದಪದ್ಯಗಳನ್ನು ನೆನಪಿಗೆ ತರುತ್ತವೆ. ಉದಾಹರಣೆಗೆ, ಒಂದು ಪದ್ಯವನ್ನು ನೋಡಬಹುದು :

*ದಣ್ಡನ ಸಾಮಗ್ರಿಗೆ ಪರ*
*ಮಣ್ಡನ ಮಳ್ಕಾಡೆ ಸರ್ವ್ವ ವಿಕ್ರಮತುಂಗಂ*
*ದಂಡಿನ ವೀರಶ್ರೀ ಗೊ*
*ಳ್ಗಣ್ಡಂ ಶ್ರೀ ದಣ್ಡನಾಯಕಂ ಶ್ರೀವಿಜಯಂ*

ಕ್ರಿ.ಶ. ೯೧೮ರ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಬಂದಳಿಕೆ ಗ್ರಾಮದ ಶಾಸನ ರಾಷ್ಟ್ರಕೂಟರ ೨ನೇ ಕೃಷ್ಣನ ಸಾಮಂತ ಕಲಿವಿಟ್ಟರಸ. ಈತನ ಕೈಕೆಳಗೆ ನಾಗರಖಂಡ ಎಂಬ ಪ್ರದೇಶವನ್ನು ಆಳುವ ನಾಗಾರ್ಜುನನು ಯುದ್ಧದಲ್ಲಿ ಮಡಿಯಲು ಆತನ ಪತ್ನಿ ಜಕ್ಕಿಯಬ್ಬೆಯು ನಾಗರಖಂಡವನ್ನು 'ವಧುವಾಗಿಯುಂ ನಿಜವೀರವಿಕ್ರಮಗರ್ಬ್ಬದಿಂ' ಎಂದು ನಾಡಿನ ಪ್ರಜೆಗಳನ್ನು ಸಲುಹಿದ ಮತ್ತು ಜಿನಭಕ್ತೆಯಾಗಿದ್ದ ವರ್ಣನೆಯನ್ನು ಮಾಡಲಾಗಿದೆ.

ಈ ಶಾಸನವನ್ನು ಸೂಕ್ಷ್ಮವಾಗಿ ಗಮನಿಸಿದರೆ ಜಕ್ಕಿಯಬ್ಬೆ ದೇಕಬ್ಬೆಯಂತೆ ಗಂಡ ಸತ್ತನಂತರ ಚಿತೆಗೆ ಹಾರಲಿಲ್ಲ. ಅತ್ತಿಮಬ್ಬೆಯಂತೆ ಬದುಕಿ ಪವಿತ್ರ ಜಿನಭಕ್ತೆಯೆನಿಸಿ ನಾಗರಖಂಡದ ಪ್ರಜೆಗಳನ್ನು ಸಲುಹಿದಳು. ಆ ಕಾಲದಲ್ಲಿ ಸತಿಸಹಗಮನವು ಕಡ್ಡಾಯವಾಗಿರಲಿಲ್ಲ ಹಾಗೂ 'ವಧುವಾಗಿಯುಂ' (ಹೆಣ್ಣಾಗಿಯೂ) ಎಂಬ ಪದದಿಂದ ಆ ಕಾಲದಲ್ಲಿಯೂ ಹೆಣ್ಣಿಗೆ ರಾಜಕೀಯ ಮಡಿವಂತಿಕೆ ಇದ್ದು, ರಾಜಕೀಯವೂ ಐಚ್ಛಿಕವಾಗಿತ್ತೆಂದು ಈ ಶಾಸನದಿಂದ ತಿಳಿಯುತ್ತದೆ.

**ಎ. ಜಯರಾಮ್**

ಒಂದು ಶಾಸನ ಪದ್ಯ ಹೀಗಿದೆ :

*ಉತ್ತಮ ಪ್ರಭುಶಕ್ತಿಯುಕ್ತೆ ಜಿನೇಂದ್ರಶಾಸನ ಭಕ್ತೆ ಕಾ*
*ನ್ತಾತ್ತ ವಿಭ್ರಮೆ ಜಕ್ಕಿಯಬ್ಬೆ ಸಮಸ್ತ ನಾಗರಖಣ್ಡಮ*
*ಳ್ಪತ್ತುಮಂ ವಧುವಾಗಿಯುಂ ನಿಜ ವೀರವಿಕ್ರಮ*
*ಗಬ್ಬರ್ದಿಂ*
*ಪೆತ್ತಪಂ ಪ್ರತಿಪಾಲಿಪುತ್ತೋಪವಿಳ್ದಪಪಾನದೊಳ್*

– ಇದೇ ರೀತಿ ಇನ್ನೆರಡು ಪದ್ಯಗಳಿವೆ.

ಕ್ರಿ.ಶ. ೯೫೦ರ ಜೂರಪ್ರಶಸ್ತಿ ಶಾಸನವು ರಾಷ್ಟ್ರಕೂಟ ದೊರೆ ೩ನೇ ಕೃಷ್ಣನು ಉತ್ತರ ಭಾರತದ ಮೇಲೆ ದಂಡಯಾತ್ರೆ ಕೈಗೊಂಡು ಬಂದಮೇಲೆ ಹಾಕಿಸಿದ ಒಂದು ವಿಶಿಷ್ಟ ದಾಖಲೆಯಾಗಿದೆ. ೪ ಕಂದಪದ್ಯಗಳಲ್ಲಿ ೩ನೇ ಕೃಷ್ಣನ ಚಾರಿತ್ರ್ಯವನ್ನು ವರ್ಣಿಸಲಾಗಿದೆ. ಉದಾ : ಒಂದು ಪದ್ಯವನ್ನು ನೋಡಬಹುದು :

*ನೋಡಿರೆ ಪರವಧುಗೆ ಮನಂ*
*ಕೂಡದು ಸೂಳ್ ಸೂಳೊಳೆತ್ತಿ ಸಡಪಿದ ತೋಳು*
*ಣ್ಣಾಡಿದ ಮೊಲೆ ಬಸಿರೊಳಗೆ*
*ಳ್ದಾಡಿದ ಚಿತ್ತಂ ಪರಾಂಗನಾ ಪುತ್ರಕನ*

ಮಹಾಭಾರತ ಯುದ್ಧದಲ್ಲಿ ಪಾಲ್ಗೊಂಡವನೂ, ಇಂದ್ರನೊಂದಿಗೆ ಏಕಾಸನವನ್ನು ಪಡೆದವನೂ ಆದ ಪಾಂಡ್ಯರಾಜನ ವಂಶವನ್ನು ಬೇರುಸಹಿತ ಕಿತ್ತೆಸೆದ ಚೋಳರಾಜನ ಬೇರನ್ನು ೩ನೇ ಕೃಷ್ಣನು ನಿರ್ಮೂಲನ ಮಾಡಿದನೆಂದು ಶಾಸನದಲ್ಲಿ ವರ್ಣಿಸಲಾಗಿದೆ. ಇವನ ಚಾರಿತ್ರ್ಯದ ಬಗ್ಗೆ ಹೇಳುತ್ತಾ ಪರಸ್ತ್ರೀಯರ ಕಡೆಗೆ ಮನಸ್ಸು ಸೋಲುವುದಿಲ್ಲ, ನೋಟಬೀರುವುದಿಲ್ಲ. ಪರಸ್ತ್ರೀಯರನ್ನು ಕಂಡರೆ ತನಗೆ ಮೊಲೆಹಾಲನ್ನು ನೀಡಿದ ತಾಯಿಗಿಂತಲೂ ಮೇಲೆಂದು ಕಾಣುತ್ತಾನೆ ಎಂದು ಕಾಣಿಸಲಾಗಿದೆ. ಹಾಗೂ [illegible] ಪರಾಂಗನಾ ಪುತ್ರಕನ

ಹೆಸರು (ಕೃಷ್ಣ) ಹೆತ್ತ ತಾಯಿಯ ಕನಸಾಗುತ್ತಿದ್ದಳಂತೆ ಎಂದು ಕೃಷ್ಣನ ಚಾರಿತ್ರ್ಯವನ್ನು ವರ್ಣಿಸಲಾಗಿದೆ. ಈ ಶಾಸನವು ೧೦ನೇ ಶತಮಾನದಲ್ಲಿ ಅಸ್ತಿತ್ವದಲ್ಲಿದ್ದ ಕನ್ನಡಿಗರ ಶೌರ್ಯ ಮತ್ತು ಚಾರಿತ್ರ್ಯವನ್ನು ಬಿಂಬಿಸುವ ಶಾಸನವಾಗಿದೆ ಎನ್ನಬಹುದು.

ಕ್ರಿ.ಶ. ೯೫೦ರ ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನ ಆತಕೂರು ಶಾಸನದಲ್ಲಿ ೨ ಚಂಪಕಮಾಲಾ ವೃತ್ತಗಳಿವೆ. ಈ ಪದ್ಯಗಳು ಪೊನ್ನನ ಅನುಪಲಬ್ಧ ಭುವನೈಕ್ಯ ರಾಮಾಭ್ಯುದಯ ಕೃತಿಯದೆಂದು ವಿದ್ವಾಂಸರು ಹೇಳುತ್ತಾರೆ. ಈ ಶಾಸನವನ್ನೂ ಪೊನ್ನನೇ ಬರೆದಿರಬಹುದೆಂದು ಊಹಿಸಿದ್ದಾರೆ.

ರಾಷ್ಟ್ರಕೂಟ ದೊರೆ ೩ನೇ ಕೃಷ್ಣನು ಚೋಳರ ದೊರೆ ೩ನೇ ಚೋಳ ರಾಜಾದಿತ್ಯದ ಮೇಲೆ ದಂಡೆತ್ತಿಹೋದಾಗ ಗಂಗರ ದೊರೆ ಇಮ್ಮಡಿ ಬೂತುಗ ಮತ್ತು ಅವನ ನೆಚ್ಚಿನ ಬಂಟ ಸಗರವಂಶದ ಮಣಲೆರನು ಇಬ್ಬರೂ ೩ನೇ ಕೃಷ್ಣನ ಪರವಾಗಿ ನಿಂತು ೩ನೇ ರಾಜಾದಿತ್ಯನನ್ನು ಸಂಹರಿಸಲು ನೆರವು ನೀಡಿದ್ದರು. ಈ ಯುದ್ಧದಲ್ಲಿ ನೆರವು ನೀಡಿದ್ದ ಮಣಲೆರನ ಪರಾಕ್ರಮಕ್ಕೆ ಮೆಚ್ಚಿ ಏನು ಬೇಕು ಕೇಳಿಕೋ ಎಂದಾಗ ಮಣಲೆರನು ೩ನೇ ಕೃಷ್ಣನಲ್ಲಿದ್ದ ಕಾಳಿ ಎಂಬ ನಾಯಿಯನ್ನು ಕೇಳಿ ಪಡೆಯುತ್ತಾನೆ.

ಒಂದು ದಿನ ಬೆಳತೂರಿನ ಪಶ್ಚಿಮ ದಿಕ್ಕಿನ ಒಂದು ಗುಡ್ಡದ ಪ್ರದೇಶದಲ್ಲಿ ಮಣಲೆರನು ಕಾಡುಹಂದಿಗಳ ಬೇಟೆಗೆ ಹೋಗಿದ್ದಾಗ ದೊಡ್ಡ ಕಾಡುಹಂದಿಯೊಂದರ ಮೇಲೆ ಕಾಳಿ ಎಂಬ ನಾಯಿಯನ್ನು ಹೋರಾಟಕ್ಕೆ ಬಿಡುತ್ತಾನೆ. ಈ ಹೋರಾಟದಲ್ಲಿ ಹಂದಿ ಮತ್ತು ನಾಯಿ ಎರಡೂ ಒಟ್ಟಿಗೆ ಸಾಯುತ್ತವೆ. ಈ ನಾಯಿಯ ಪರಾಕ್ರಮಕ್ಕೆ ಮೆಚ್ಚಿದ ಮಣಲೆರನು ನಾಯಿಗೋಸ್ಕರ ಅದರ ಸಮಾಧಿ ಮೇಲೆ ಸ್ಮಾರಕವನ್ನು ನಿರ್ಮಿಸಿ ಶೈವ ಸನ್ಯಾಸಿಗೆ ಸಮಾಧಿ ಪೂಜಿಸಲು ಭೂಮಿಯನ್ನು ದಾನಕೊಡುವ ವಿವರವಿದೆ. ಈ ಶಾಸನದಲ್ಲಿ ಸಗರವಂಶದ ಮಣಲೆರನು ಯುದ್ಧದಲ್ಲಿ ಹೋರಾಡಿದ ಬಗೆಯನ್ನು ವರ್ಣಿಸಲು ೨ ಚಂಪಕಮಾಲೆಯನ್ನು ಬಳಸಲಾಗಿದೆ. ಉಳಿದ ಪಠ್ಯವು ಗದ್ಯದಿಂದ ಕೂಡಿದೆ.

ಆತಕೂರು ಶಾಸನ ಕ್ರಿ. ಶ. ೯೫೦

ಇಲ್ಲಿ ಒಂದು ಪದ್ಯವನ್ನು ನೋಡಬಹುದು :

ನರಪತಿ ಬೆನ್ನೊಳಿರ್ದನಿದಿರಾಸ್ತುದು
ವೈರಿಸಮೂಹಮಿಲ್ಲಿ ಮ
ಚ್ಚರಿಸುವರೆಲ್ಲರುಂ ಸೆರಗುವಾರ್ದ ಪೊರಿನ್ನಿರೆಸಿದ್ದು ಸಿಜ್ಗದ
ನ್ನಿರೆ ಹರಿ ಬೀರಲಕ್ಷ್ಮಿ ನೆರವಾಗಿರೆ ಚೋಳನ
ಕೋಟೆಯೆಮ್ಬಸಿ
ನ್ದುರದ ಶಿರಾಗ್ರಮಂ ಬಿರಿಯೆ ಪೊಯ್ದನೆಲೇ ಕದ ನೈಕ
ಶೂದ್ರಕಂ.

– ಆ ಎರಡೂ ಪದ್ಯಗಳ ಸಾರಾಂಶವನ್ನು ಗಮನಿಸಬಹುದು.

ಸ್ವಲ್ಪವೂ ಲಕ್ಷ್ಯಮಾಡದೆ ಎದುರಾಗಿ ನಿಂತು ಪ್ರತಿಭಟಿಸಿದ ಚೋಳರಾಜಾದಿತ್ಯನ ಚತುರಂಗ ಬಲಗಳನ್ನು ಬೆನ್ನಟ್ಟಿಕೊಂಡು ಸಮೀಪಿಸಿ ಹೋಗಿ, ತಾಗಿ ಇರಿಯಬೇಕಾಗಿ ಬಂದ ಸಂದರ್ಭದಲ್ಲಿ ಒಬ್ಬರಾದರೂ ಎದುರಿಸುವ ಶೂರನನ್ನು, ಮೇಲೆ ಬೀಳುತ್ತೇವೆ ಎಂದು ಬಿಂಕದಿಂದ ಬೀಗುವ ವೀರನನ್ನು ನಾವು ಕಂಡದ್ದೇ ಇಲ್ಲ; ಆದರೆ ಆ ಚೋಳರಾಜನಾದ ರಾಜಾದಿತ್ಯನೇ ಸಾಕ್ಷಿಯಾಗಿರಲು ತಾನೇ ಹೋಗಿ ತಾಗಿ ಇರಿದುದನ್ನು ತಾವೇ ಕಣ್ಣಾರೆ ಕಂಡೆವು ಎನ್ನಬೇಕಾದರೆ ಯಾರು ತಾನೇ ಆ ಸಗರ ತ್ರಿಣೇತ್ರನೆನ್ನಿಸಿದ ಮಣಲೆರನನ್ನು ಮೆಚ್ಚದೆ ಇರುತ್ತಾರೆ ಎಂದು ಕವಿ ಹೇಳುತ್ತಾನೆ.

ದೊರೆ ಬೂತುಗನು ತನ್ನ ಹಿಂದೆ ನಿಂತಿದ್ದಾನೆ. ಶತ್ರುಗಳ ಸಮೂಹ ಮುಂದೆ ಎದುರಿಸಿ ನಿಂತಿದೆ. ''ಇಲ್ಲಿ ನಮ್ಮ ಕಡೆಯವರು ಅಸಹಾಯ ಶೌರ್ಯದಿಂದ ನುಗ್ಗಿಹೋಗಿ ಶತ್ರುಗಳನ್ನು ಹೊಡೆದೋಡಿಸಲು ಹೆದರುತ್ತಾರೆ'' ಎಂದು ಮಣಲೆರನು ''ಇನ್ನು ನಾನು ಸುಮ್ಮನಿರುವುದಿಲ್ಲ'' – ಎಂದು ಹೇಳಿ ತನ್ನ ಕುದುರೆ 'ವೀರಲಕ್ಷ್ಮಿ' ತನಗೆ ಸಹಾಯಕ್ಕಿರಬೇಕಾದರೆ, ಕದನೈಕ ಶೂದ್ರಕನೆನ್ನಿಸಿದ ಮಣಲೆರನು ಚೋಳರ ಕೋಟೆ ಎಂಬ ಆನೆಯ ಕುಂಭಸ್ಥಳವನ್ನು, ಸಿಂಹದ ಹಾಗೆ ಹಾರಿಬಂದು ಹೋಗುವಂತೆ ಹೊಡೆದಿಕ್ಕಿದನು ಎಂದು ಮಣಲೆರನ ಶೌರ್ಯ, ಸಾಹಸಗಳನ್ನು ವರ್ಣಿಸಲಾಗಿದೆ.

ಕ್ರಿ.ಶ. ೯೫೦ರ ಶ್ರವಣಬೆಳಗೊಳದ ಸಾವಿಯಬ್ಬೆಯ ಶಾಸನವು ''ಅರಿವಿನ ತವರೆನ ಧರ್ಮದ ದಗುಂತಿಯೆನೆ ನೆಗಳ್ದಳ್ ಭೂಭುವನಕ್ಕೆ ಸಾವಿಯಬ್ಬೆಗಂ ಮನನಿಜೆಗಂ ದೊರೆಯೆ ನಲ್ಕೆ ಪೆಣ್ದಿರು ಮೊಳರೇ''ಎಂದು ಸಾವಿಯಬ್ಬೆಯ ಘನವ್ಯಕ್ತಿತ್ವವನ್ನು ಒಂದು ಸಣ್ಣ ಕಂದಪದ್ಯದಲ್ಲಿ ಕವಿ ಹಿಡಿದಿಟ್ಟಿದ್ದಾನೆ.

ಕ್ರಿ.ಶ. ೯೫೧ರ ಜಿನವಲ್ಲಭನ ಗಂಗಾಧರಂ ಶಾಸನವು ಸಂಸ್ಕೃತ, ಕನ್ನಡ, ತೆಲುಗು, ಪದ್ಯಗಳಿಂದ ಕೂಡಿದ್ದು, ಮಹತ್ವದ್ದಾಗಿದೆ. ಮತ್ತು ತೆಲುಗಿನಲ್ಲಿ ಪ್ರಾಚೀನ ಕಂದಪದ್ಯವೆಂಬ ಹೆಗ್ಗಳಿಕೆಗೆ ಶಾಸನ ಪಾತ್ರವಾಗಿದೆ. ವಿವಿಧ ಛಂದಸ್ಸುಗಳಿಂದ ನಿರ್ಮಾಣವಾಗಿರುವ ಈ ಶಾಸನವನ್ನು ಪಂಪನ ತಮ್ಮ ಜಿನವಲ್ಲಭನು ತನ್ನ ಅಣ್ಣನ ನೆನಪಿಗಾಗಿ ನಿರ್ಮಿಸಿದ ನಿಸಿದಿಶಾಸನವಾಗಿದೆ. ಆ ಶಾಸನದ ಸಾರಾಂಶವನ್ನು ಗಮನಿಸಬಹುದು.

ಜೂರ ಪ್ರಶಸ್ತಿ ಶಾಸನ ಕ್ರಿ. ಶ. ೯೫೦

ಶಾಸನದ ಮೊದಲ ಭಾಗದಲ್ಲಿ ಜಿನವಲ್ಲಭನ ತಂದೆ-ತಾಯಿ, ಅವರ ಇತಿ ವೃತ್ತ ಹಾಗೂ ಧರ್ಮಪುರದ ಉತ್ತರ ದಿಕ್ಕಿಗಿರುವ ವೃಷಭಗಿರಿಯೆಂಬ ಪುರಾತನವಾದ ಬೆಟ್ಟದ ಮೇಲೆ ತಮ್ಮ ಕುಲದೈವಗಳಾದ ತೀರ್ಥಂಕರ, ಚಕ್ರೇಶ್ವರಿಯರ ಶಿಲ್ಪಗಳನ್ನು ನಿರ್ಮಾಣ ಮಾಡಿದುದನ್ನು ಹೇಳುತ್ತಾನೆ. ತನ್ನ ಅಣ್ಣನಿಗಿದ್ದ ಬಿರುದಿನ ಹೆಸರಿನಲ್ಲಿ ತ್ರಿಭುವನ ತಿಲಕವೆಂಬ ಬಸದಿ, ಕವಿತಾಗುಣಾರ್ಣವ ಎಂಬ ಕೆರೆ, ಮದನವಿಲಾಸವೆಂಬ ವನವನ್ನು ನಿರ್ಮಾಣ ಮಾಡಿದುದನ್ನು ಹೇಳುತ್ತಾನೆ.

ನಂತರ ಜಿನವಲ್ಲಭ ತನ್ನ ವಿದ್ವತ್ತನ್ನು ವರ್ಣನೆ ಮಾಡಿಕೊಳ್ಳುತ್ತಾನೆ. ಅನೇಕ ಭೇದಗಳಿಂದ ಮನೋಹರವಾಗಿರುವ ಗೀತವನ್ನು ಹಾಡಲು, ಕಾವ್ಯಗಳನ್ನು ಎತ್ತರದ ದನಿಯಲ್ಲಿ ಪಠಿಸಲು, ಮಾತನ್ನು ತಕ್ಕಂತೆ ಆಡಲು, ಪ್ರಿಯವನ್ನು ನುಡಿಯಲು, ಸಜ್ಜನರಿಗೆ ಉತ್ತಮ ರೀತಿಯಲ್ಲಿ ಉಪಕಾರಮಾಡಲು, ಭೋಗಗಳನ್ನು ಅನುಭವಿಸಲು, ಅಂಗನೆಯರನ್ನು ಸಂತೋಷಪಡಿಸಲು, ಜಿನಪೂಜೆಯನ್ನು ಮಾಡಲು, ಜಿನವಲ್ಲಭನು ಚೆನ್ನಾಗಿ ಬಲ್ಲವನಾಗಿದ್ದಾನೆ.

ಸೂರ್ಯನಿಗೆ ಸಮಾನವಾಗಿ ಬೆಳಗುವವನೆಂದು, ಜಿನವಲ್ಲಭನಿಗೆ ಸಮಾನರಾದ ಶ್ರೇಷ್ಠ ಕವಿಗಳೆಂಬ ಮನುಷ್ಯರುಂಟೇ? ಎಂದು ಲೋಕ ಹೊಗಳುತ್ತದೆ ಎನ್ನುತ್ತದೆ ಶಾಸನ. ವಿದ್ವತ್ ಕವೀಂದ್ರರೊಬ್ಬೊಬ್ಬರಲ್ಲಿ ಒಂದೊಂದು ಗುಣವಿರುವುದೇ ಹೊರತು ಒಬ್ಬನಲ್ಲಿಯೇ ಒಂದು ಲಕ್ಷ ಗುಣಗಳಿರುವುದಿಲ್ಲ; ಗುಣಪಕ್ಷಪಾತಿ ಎನಿಸಿದ ಜಿನವಲ್ಲಭ ಗುಣರತ್ನ ಸಮೂಹವು ಒಂದು ಲಕ್ಷಕ್ಕೂ ಅಧಿಕವಾದ್ದು ಎಂದು ಜಿನವಲ್ಲಭನು ಸಕಲ ಕಲಾವಲ್ಲಭನಾಗಿದ್ದನೆಂದು ಈ ಶಾಸನದಲ್ಲಿ ವರ್ಣಿಸಲಾಗಿದೆ. ಪ್ರಸ್ತುತ ಶಾಸನದ ಕರ್ತೃವಾದ ಹಾಗೂ

ಮಹತ್ವದ ಕವಿಯೆನಿಸಿದ ಜಿನವಲ್ಲಭನ ಕೃತಿಗಳು ಸಿಕ್ಕಿಲ್ಲದಿರುವುದು, ಕನ್ನಡ ಸಾಹಿತ್ಯ ಜಗತ್ತಿಗೆ ದೊಡ್ಡ ನಷ್ಟವಾಗಿದೆ.

ಕ್ರಿ.ಶ. ೯೭೧ರ ಧಾರವಾಡ ಜಿಲ್ಲೆಯ ರೋಣ ತಾಲ್ಲೂಕಿನ ಸವಡಿಗ್ರಾಮದ ಶಾಸನದ ಈ ಪಾಠ ಈ ರೀತಿಯಿದೆ :

ವೇದ ವೇದಾಂಗಮನೋದದೆ ಶಾಸ್ತ್ರಮ
ನಾದಿ ಮಧ್ಯಾಂತ ಮರಿಯದೆ ನಾರಣಂ
ಗಾದುದು ಕವಿತೆ ಸಹಜವೇ.

– ಈ ಶಾಸನವನ್ನು ರಚಿಸಿದ ನಾರಣನೆಂಬ ಕವಿಯು ತನಗೆ ವೇದಶಾಸ್ತ್ರಗಳು ಗೊತ್ತಿಲ್ಲದೆ ಹೋದರೂ ಕವಿತೆ ಬರೆಯುವುದು ಸಹಜವಾಗಿ ಬಂದಿರುವುದಾಗಿ ಹೇಳಿಕೊಂಡಿದ್ದಾನೆ. ಈ ಶಾಸನವು ೧೦ನೇ ಶತಮಾನದಲ್ಲಿದ್ದ ಜನಪದ ಸಾಹಿತ್ಯದ ಅಸ್ತಿತ್ವವನ್ನು ಹೇಳುತ್ತದೆ. ಇದಕ್ಕೆ ಪೂರಕವಾಗಿ ಕವಿರಾಜಮಾರ್ಗದಲ್ಲಿ ಬರುವ 'ಕುರಿತೋದದೆಯಂ ಕಾವ್ಯಪ್ರಯೋಗ ಪರಿಣತಮತಿಗಳ್'' ಎಂಬ ಮಾತು ಮೇಲಿನ ಶಾಸನವನ್ನು ಸಮರ್ಥಿಸುತ್ತದೆ. ನಾರಣನಿಗೆ ಕವಿರಾಜಮಾರ್ಗ ಕೃತಿಯ ಪರಿಚಯವಿತ್ತೆಂದು ಈ ಶಾಸನದ ಆಧಾರದ ಮೇಲೆ ಹೇಳಬಹುದು.

ಕ್ರಿ.ಶ. ೯೮೦ರ ಸವದತ್ತಿ ತಾಲ್ಲೂಕಿನ ಸೋಗಲದ ಶಾಸನ ಕಂದಪದ್ಯವು ಈ ರೀತಿಯಿದೆ :

ಪಾಪಿಪುಗಲು ಪುಗಲುಗ್ರದ
ಕೋಟಿಪುಗಲು ಪುಗಲುಶೇಷ ಧರ್ಮದ್ರೋಹ
ವ್ಯಾಪಾರಿ ಪುಗಲ್ಪುಗಲೆ
ನ್ದಾ ಪೋರ್ತ್ತುಂ ಕೋಕಿಳಂಗಳುಲಿಗುಂ ಬನದೊಳ್

– ಸೋಗಲದ ತಪೋವನದಲ್ಲಿ ಹುಲಿಗಳು ಧರ್ಮಶ್ರವಣ ಮಾಡುತ್ತಿದ್ದವು. ಅಲ್ಲಿಯ ಗಿಳಿಗಳು ಮುನಿಗಳು ಓದಿದ್ದನ್ನು ಹಗಲಿರುಳು ನುಡಿಯುತ್ತಿದ್ದವು ಎಂದು ವರ್ಣಿಸುತ್ತ ಪಾಪಿಗಳು, ಕೋಪಿಷ್ಠರು, ಅಧರ್ಮಿಗಳು ಈ ತಪೋವನದಲ್ಲಿ ಪ್ರವೇಶ ಮಾಡಕೂಡದೆಂದು ಕೋಗಿಲೆಗಳು ಹೇಳುತ್ತಿದ್ದವೆಂದು ಕವಿಯು ವರ್ಣಿಸಿದ್ದಾನೆ.

ಈ ಪದ್ಯವು ವಿಕ್ರಮಾರ್ಜುನ ವಿಜಯದಲ್ಲಿ ದುರ್ಯೋಧನನು ವೈಶಂಪಾಯನ ಸರೋವರದಲ್ಲಿ ಅಡಗಿಕೊಳ್ಳಲು ಹೋದಾಗ ಸರೋವರದಲ್ಲಿದ್ದ ಜಲಚರಗಳು ದುರ್ಯೋಧನನನ್ನು ನಿಂದಿಸಿದ ಬಗೆಯನ್ನು ನೆನಪಿಗೆ ತರುತ್ತದೆ. ಅದೇ ರೀತಿ ಕುವೆಂಪು ಅವರ ಪಕ್ಷಿಕಾಶಿ ಪದ್ಯದಲ್ಲಿ ಬೇಡನು ಪಕ್ಷಿಕಾಶಿಗೆ ಯಾವರೀತಿ ಬರಬೇಕೆಂದು ಹೇಳುವ ಮಾತು ಹೀಗಿದೆ :

''ಕೊಲ್ವ ಬತ್ತಳಿಕೆ ಬಿಲ್ಲು ಬಾಣವನ್ನು
ಅಲ್ಲೆ ಬಿಟ್ಟು ಬಾ
ಬಿಂಕದುಕುತಿಯನು; ಕೊಂಕುಯುತಿಯನು.
ಎಲ್ಲಾ ಬಿಟ್ಟು ಬಾ
ಮೈಯ್ಯ ತೊಳೆದು ಬಾ ಕೈಯ್ಯ ಮುಗಿದು ಬಾ
ಹೆಮ್ಮನುಳಿದು ಬಾ''

– ಎಂದು ಶಾಸನಪದ್ಯದಲ್ಲಿ ಕೋಗಿಲೆಗಳು ಹೇಳುವಂತೆ ಇಲ್ಲಿಯೂ ಪಕ್ಷಿಗಳು ಹೇಳುತ್ತವೆ.

ಕ್ರಿ.ಶ. ೯೯೦ರ ಶ್ರವಣಬೆಳಗೊಳ ಶಾಸನ ಪದ್ಯದಲ್ಲಿ ಬರುವ ಭೋಗಯ್ಯನನ್ನು ,

'ಶ್ರೀಗೆ ಆಶ್ರಿಯವೆನೆ ತೇಜ
ಕ್ಕಾಗರವೆನೆ ನೆಗಳ್ದ ಗಂಗವಜ್ರನ ಲೆಂಕ
ಬೋಗಾಯ್ಯನೆಂಬರ ವರೋ
ಲ್ಬೋಗೆಯ ಮಾರ್ಪಡೆ ಗೊರಂಟನಣ್ಣನ ಬಂಟ'

– ಎಂದು ಹೊಗಳಲಾಗಿದೆ. ಭೋಗಯ್ಯನು ಶ್ರೀಗೆ ಆಶ್ರಯನಾಗಿದ್ದನೆಂದು, ತೇಜಕ್ಕೆ ಆಗರನಾಗಿದ್ದನೆಂದು ಅವನ ವ್ಯಕ್ತಿತ್ವವನ್ನು ಸ್ಪಷ್ಟವಾಗಿ ವಿವರಿಸಲಾಗಿದೆ.

೧೦ನೇ ಶತಮಾನಕ್ಕೆ ಸೇರಿದ ಬೆಳಗಾವಿ ಜಿಲ್ಲೆಯ ಪರಸಗಡ ತಾಲ್ಲೂಕಿನ ಕೊಟೂರ ಶಾಸನವು ಚಾಳುಕ್ಯ ರಾಜನಿಗಾಗಿ ವೇಳೆವಡಿಚ ಶಂಭಾ ಎಂಬುವವನು ಅಗ್ನಿ ಪ್ರವೇಶ ಮಾಡಿದ್ದನ್ನು ೮ ಕಂದಪದ್ಯಗಳಲ್ಲಿ ವರ್ಣಿಸಲಾಗಿದೆ. ಇದು ಶಂಭುವಿನ ರಾಜಭಕ್ತಿಯ ಪರಮಾವಧಿ ಮತ್ತು ಕವಿಯ ಉತ್ಕಟ ಕಾವ್ಯಶಕ್ತಿಗಳನ್ನು ಪ್ರಕಟಿಸುವ ಶಾಸನವಾಗಿದೆ. ಇದೇ ಕಾಲಘಟ್ಟಕ್ಕೆ ಸೇರುವ, ಸಾಹಿತ್ಯ ದೃಷ್ಟಿಯಿಂದ ಗಮನಿಸಬೇಕಾದ ಮತ್ತೊಂದು ಮುಖ್ಯವಾದ ಶಾಸನವೆಂದರೆ ರಾಷ್ಟ್ರಕೂಟರ ಇಂದ್ರರಾಜನ ಪ್ರಶಸ್ತಿ ಶಾಸನ. ಇಂದ್ರನ ದಾನ, ಶೌರ್ಯ, ಕ್ರೀಡೆ, ವಿದ್ವತ್ತು ಹೀಗೆ ಅವನ ಬಹುಮುಖಿ ಪ್ರತಿಭೆಯನ್ನು ಹಲವು ಛಂದಸ್ಸುಗಳಲ್ಲಿ ರಚಿಸಲಾಗಿದೆ.

ಹೀಗೆ ೧೦ನೇ ಶತಮಾನದ ಕಾಲಘಟ್ಟದಲ್ಲಿ ನೂರಾರು ಶಾಸನಪದ್ಯಗಳು ಬಹುಮುಖಿ ನೆಲೆಗಳಲ್ಲಿ ರಚನೆಯಾಗಿರುವುದನ್ನು ನೋಡಬಹುದು. ಪಂಪಪೂರ್ವ ಯುಗದಲ್ಲಿ ಶಾಸನಪದ್ಯಗಳು ಹೆಚ್ಚಾಗಿ ಜೈನ ಶಾಸನಗಳಾಗಿದ್ದು ಅದರಲ್ಲಿಯೂ ವೈರಾಗ್ಯವರ್ಣನೆಯ ಶಾಸನಗಳು ಹೆಚ್ಚಾಗಿ ಕಂಡುಬರುತ್ತವೆ. ಪಂಪಯುಗದಲ್ಲಿ ಚಂಪೂಕಾವ್ಯಗಳು ಕನ್ನಡದಲ್ಲಿ ಸದೃಢವಾಗಿ ನೆಲೆಗೊಂಡು ತಮ್ಮ ಪ್ರಭಾವವನ್ನು ಶಾಸನ ಸಾಹಿತ್ಯದ ಮೇಲೆ ಬೀರಿರುವುದನ್ನು ಕಾಣಬಹುದು. ಈ ಕಾಲದ ಸಾಹಿತ್ಯಕೃತಿಗಳಲ್ಲಿ ಕಂಡುಬರುವಂತೆ ವೀರರಸಪ್ರಧಾನ ಅಂಶಗಳು ಶಾಸನ ಸಾಹಿತ್ಯದಲ್ಲಿಯೂ ಕಂಡುಬರುವುದು ಮಹತ್ವದ್ದಾಗಿದೆ.

ಕನ್ನಡ ಸಾಹಿತ್ಯವು ಹಂತಹಂತವಾಗಿ ಬೆಳವಣಿಗೆಯಾದಂತೆ ಶಾಸನ ಸಾಹಿತ್ಯದಲ್ಲಿಯೂ ಬೆಳವಣಿಗೆಯಾಗುತ್ತಿರುವುದನ್ನು ಕಾಣಬಹುದು. ಕೊನೆಯದಾಗಿ, ಮೇಲಿನ ಶಾಸನಪದ್ಯಗಳನ್ನು ಗಮನಿಸಿದಾಗ ಕನ್ನಡ ಸಾಹಿತ್ಯ – ಶಾಸನಸಾಹಿತ್ಯ ಪರಸ್ಪರ ಅವಲಂಬಿಗಳಾಗಿರುವುದನ್ನು ಕಾಣಬಹುದು.

ವಿ. ಜಯರಾಮ್
ಕನ್ನಡ ಉಪನ್ಯಾಸಕ, ದಿ ಆಕ್ಸ್‌ಫರ್ಡ್ ಕಾಲೇಜ್ ಆಫ್ ಇಂಜಿನಿಯರಿಂಗ್
ಹೊಸೂರು ರಸ್ತೆ, ಬೊಮ್ಮನಹಳ್ಳಿ, ಬೆಂಗಳೂರು - ೫೬೦ ೦೬೮



## ಬದುಕಿಗೆ...

ಬದುಕೇ,
ಹಿಡಿಸುಖ ಕೇಳಿದ್ದಕ್ಕೆ
ಬೊಗಸೆ ತುಂಬಾ
ವಿಷಾದ ತುಂಬಿಬಿಟ್ಟೆ.
ಒಂದು ಮುಗುಳ್ನಗೆ
ಕೇಳಿದ್ದಕ್ಕೆ
ಕಣ್ಣಕೊಳ ಮಾಡಿಬಿಟ್ಟೆ.
ನಡೆವ ಹಾದಿ
ಸಮವಿರಲೆಂದು
ಆಶಿಸಿದ್ದಕ್ಕೆ
ಮುಳ್ಳುಕಂಟಿಗಳ
ಎಸೆದುಬಿಟ್ಟೆ.
ಸವಿನೆನಪ ಬೆಳಕ
ಹಂಬಲಿಕೆಗೆ
ಗಾಯಗಳಿಗೂ
ಕಹಿಗಳ ಕೊಳ್ಳಿ ಇಟ್ಟೆ.
ಆದರೆ
ಕವಿತೆಯೊಂದು ಹೀಗೆ
ಚಿತ್ತಾರಗೊಳ್ಳುವಾಗ
ನೀ ಹಾಗೆ
ಕೈ ಕಟ್ಟಿನಿಂತು ನೋಡಬೇಕಷ್ಟೆ!

ರಂಗಮ್ಮ ಹೊದೇಕಲ್

# ಸ್ತ್ರೀಪ್ರಜ್ಞೆಯ ನೆಲೆಯಲ್ಲಿ ಗುರುತಿಸಿಕೊಳ್ಳುವ ವೈಶಿಷ್ಟ್ಯಪೂರ್ಣ ಕಥಾಗುಚ್ಛ 'ಅಚಲಾ'







ಅಚಲಾ

ಲೇಖಕಿ: ಪಾರ್ವತಿ ಜಿ. ಐತಾಳ್

ಪುಟ : ೧೪೮

ಬೆಲೆ : ರೂ. ೭೦

ಪ್ರಕಾಶಕರು : **ಧೃತಿ ಪ್ರಕಾಶನ**

ಜಿ-೨., ಹಯಗ್ರೀವ ಅಪಾರ್ಟ್‌ಮೆಂಟ್, ನಂ. ೧, ೨, ದತ್ತಾತ್ರೇಯ ದೇವಸ್ಥಾನದ ರಸ್ತೆ
೧ನೇ ಕ್ರಾಸ್, ೫ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು - ೫೬೦ ೦೧೯

**ಪುರುಷ ಸ್ವಭಾವತಃ ಕ್ರೂರಿ ಅಥವಾ ದುಷ್ಟನಾಗಿರಬೇಕೆಂದಿಲ್ಲ. ಮಹಿಳೆಯನ್ನು ಕೆಲವು ಸಾಮಾಜಿಕ ಕಟ್ಟುಪಾಡುಗಳು ಬಂಧಿಸಿಡುವಂತೆ ಪುರುಷನ ಸಾಂಪ್ರದಾಯಿಕ ಮನೋರಚನೆಯು ಸ್ತ್ರೀಯನ್ನು ವಿನಾಕಾರಣ ಕ್ಷೋಭೆಗೊಳಪಡಿಸುವ, ನಿರ್ದಯನಾಗಿ ಏಕಮುಖ ನಿರ್ಧಾರ ತಳೆಯುವ ಮನೋಭಾವನೆಯ ವಿರುದ್ಧ ವ್ಯಕ್ತಪಡಿಸುವ ಲಘುವಾದ ಪ್ರತಿಭಟನೆಯ ಧ್ವನಿ ಈ ಕಥೆಗಳಲ್ಲಿದೆ.**

ಅನುವಾದಕರೆಂದೇ ಪ್ರಸಿದ್ಧರಾದ ಪಾರ್ವತಿ ಜಿ. ಐತಾಳ್ ಅವರ ಪ್ರಥಮ ಸ್ವರಚಿತ ಕಥಾಸಂಕಲನ 'ಅಚಲಾ' ಹದಿನೇಳು ಕಥೆಗಳುಳ್ಳ ಒಂದು ಕ್ರಿಯಾಶೀಲ ಪ್ರಯೋಗ. ಸ್ತ್ರೀವಾದ, ಸ್ತ್ರೀಪ್ರಜ್ಞೆಯ ಹಿನ್ನೆಲೆಯಲ್ಲಿಯೂ ಗುರುತಿಸಿಕೊಂಡ ಲೇಖಕಿಯ ಈ ಕಥೆಗಳಲ್ಲಿ ಹೊರ ಹೊಮ್ಮಿರುವುದು ಸಮಾಜದ ಮುಖ್ಯವಾಹಿನಿಯಿಂದ ನಿಷ್ಕಾರಣವಾಗಿ ವಂಚಿತಳಾದ ಸ್ತ್ರೀಯ ಬದುಕು. ಸ್ತ್ರೀವಾದಿ ಧೋರಣೆಗೆ ಒತ್ತುನೀಡಲು ಎಲ್ಲಿಯೂ ಪುರುಷಪಾತ್ರಗಳನ್ನೇನೂ ದುಷ್ಟರನ್ನಾಗಿಸಿದ ನಿದರ್ಶನಗಳೇ ಕಂಡುಬರುವುದಿಲ್ಲ. ಬದುಕಿನ ನಿತ್ಯಗತಿಯಲ್ಲಿ ಸಹಜವಾದ ಸ್ತ್ರೀ-ಪುರುಷ ಬಂಧ-ಸಂಬಂಧಗಳ ಸನ್ನಿವೇಶಗಳಲ್ಲಿ ಅಡಕವಾಗಿರುವ ಅಲ್ಪತನ-ಅನರ್ಥಗಳೇ ಹೆಚ್ಚಿನ ಎಲ್ಲ ಕಥೆಗಳ ಮುಖ್ಯ ಆಶಯವಾಗಿದೆ.

ಪುರುಷ ಸ್ವಭಾವತಃ ಕ್ರೂರಿ ಅಥವಾ ದುಷ್ಟನಾಗಿರಬೇಕೆಂದಿಲ್ಲ. ಮಹಿಳೆಯನ್ನು ಕೆಲವು ಸಾಮಾಜಿಕ ಕಟ್ಟುಪಾಡುಗಳು ಬಂಧಿಸಿಡುವಂತೆ ಪುರುಷನ ಸಾಂಪ್ರದಾಯಿಕ ಮನೋರಚನೆಯು ಸ್ತ್ರೀಯನ್ನು ವಿನಾಕಾರಣ ಕ್ಷೋಭೆಗೊಳಪಡಿಸುವ, ನಿರ್ದಯನಾಗಿ ಏಕಮುಖ ನಿರ್ಧಾರ ತಳೆಯುವ ಮನೋಭಾವನೆಯ ವಿರುದ್ಧ ವ್ಯಕ್ತಪಡಿಸುವ ಲಘುವಾದ ಪ್ರತಿಭಟನೆಯ ಧ್ವನಿ ಈ ಕಥೆಗಳಲ್ಲಿದೆ. ಈ ದೃಷ್ಟಿಯಿಂದ 'ದ್ರೋಹ' ಕಥೆಯ ನಾಸಿರ್, 'ತಲ್ಲಣಿಸದಿರು ಕಂಡ್ಯ'ದ ದಿನಕರ್, 'ಹೊಸಬದುಕು' ಕಥೆಯ ಶಶಿಧರ್ ಹಾಗೂ 'ಸುಮಂಗಲಿ'ಯ ದಿವಾಕರ್ ಪಾತ್ರಗಳು ಮೇಲೆ ಹೇಳಿದ ಅಂಶದ ವಿವಿಧ ಮುಖಗಳನ್ನು ಪ್ರತಿನಿಧಿಸುತ್ತವೆ. ಇಲ್ಲಿ ಹೆಚ್ಚಿನ ಎಲ್ಲ ಕಥೆಗಳೂ ವಾಸ್ತವ ಘಟನೆಗಳ ಮೂಲಕ ತ್ವರಿತಗತಿಯಲ್ಲಿ ತೆರೆದುಕೊಳ್ಳುತ್ತ, ನೇರ ನಿರೂಪಣೆಯ ವಿನ್ಯಾಸದಲ್ಲಿವೆ.

ಮಹಿಳೆಯ ಸಾಹಿತ್ಯಾಭಿವ್ಯಕ್ತಿ ಮತ್ತು ಪ್ರೀತಿಯ ಅಭಿವ್ಯಕ್ತಿಗಳನ್ನು ಸಂದೇಹ, ಅನಿಕತನಗಳಿಂದ ನೋಡುವ ಸಮಾಜದ ಬಗ್ಗೆ 'ಮೂಕಹಕ್ಕಿ ಹಾಡಿತು' ಎಂಬ ಕಥೆಯಲ್ಲಿ ವಿಷಾದವಿದೆ. ಸಾಹಿತ್ಯಕ ಅಭಿವ್ಯಕ್ತಿಗಾಗಿ ತಹತಹಿಸುವ, ನೇಪಥ್ಯದಲ್ಲಿದ್ದುಕೊಂಡೇ ಬರವಣಿಗೆಯಲ್ಲಿ ತೊಡಗಿರುವ ಮುಕ್ತ ಮನಸ್ಸಿನ ಶಾಲಿನಿಗೆ ಪ್ರೇರಕರಾಗಿ ನವಮಾರ್ಗ ತೋರುವ ಉದಾತ್ತ ಪುರುಷ ಸಾಹಿತಿಯ ಪಾತ್ರವು ಸಂಕುಚಿತ ಸ್ತ್ರೀವಾದಿ ನೋಟಗಳನ್ನೆಲ್ಲ ಮೀರಿ ನಿಂತ ಲೇಖಕಿಯ ಪೂರ್ವಗ್ರಹರಹಿತ ಯೋಚನೆಗೆ ಈ ಕಥೆ ಸಾಕ್ಷಿಯಾಗಿ ನಿಲ್ಲುತ್ತದೆ.

ಇಡೀ ಸಂಕಲನದಲ್ಲಿ ಸಮಕಾಲೀನ ಪ್ರಸ್ತುತತೆಯಿಂದ ವಿಶೇಷವಾಗಿ ಗಮನ ಸೆಳೆಯುವ ಕಥೆಗಳೆಂದರೆ 'ಕೊನೆಯ ಗಳಿಗೆ' ಮತ್ತು 'ಚಂದ್ರೋದಯ'. 'ಕೊನೆಯ ಗಳಿಗೆ'ಯ ಸ್ಥಳೀಯ ಸ್ವಾತಂತ್ರ್ಯ ಹೋರಾಟಗಾರ್ತಿಯ ಸತ್ವಯುತ ಪಾತ್ರ, ವಿಶಿಷ್ಟ ಕಥನ ಕ್ರಮ ಮತ್ತು ಕಥಾವಸ್ತುಗಳು ಇತರ ಎಲ್ಲ ಕಥೆಗಳಿಗಿಂತ ಬೇರೆಯೇ ಆದ ಗಾಢ ಅನುಭವವನ್ನು ಕೊಡುತ್ತವೆ. ಜೀವನದ ಕೊನೆಯ ಕ್ಷಣಗಳಲ್ಲಿರುವ ವೀರ ಮಹಿಳೆ, ತಾನು ಜೀವನಪೂರ್ತಿ ಆತುಕೊಂಡು ಸಾಧಿಸಬಯಸುವ ಧಾರ್ಮಿಕ ಸಮನ್ವಯತೆಯ ಸಾಂಕೇತಿಕ ಕರೆ ನೀಡಿರುವುದು ಇಂದಿನ ಭೀಕರ ವಿದ್ಯಮಾನಗಳ ಹಿನ್ನೆಲೆಯಲ್ಲಿ ಅತೀ ಮಹತ್ವದ್ದಾಗಿದೆ.

'ಚಂದ್ರೋದಯ' ಕಥೆಯಲ್ಲಿ ಏಡ್ಸ್ ರೋಗಕ್ಕೆ ಬಲಿಯಾಗಿ ಬಾಳುತ್ತಿರುವ ಮಂದಿಯ ಬವಣೆ-ಯಾತನೆಗಳ ಚಿತ್ರಣವಿದೆ. ಏಡ್ಸ್ ಮಹಾಮಾರಿಗೆ ಕಾರಣವಾಗುವ ಲೈಂಗಿಕ ಪ್ರಕ್ರಿಯೆಯ ಸೂಕ್ಷ್ಮ ವಿವರಣೆಗಳಿವೆ. ಏಡ್ಸ್‌ನ ಗಂಭೀರತೆಯನ್ನು 'ಹೈಸ್ಕೂಲು ಓದುತ್ತಿದ್ದಾಗ ಹಿರೋಷಿಮಾದ ಮೇಲೆ ಅಮೆರಿಕಾದವರು ಬಾಂಬು ಹಾಕಿದಾಗ ಸಂಭವಿಸಿದ ರಾಕ್ಷಸ ವಿನಾಶವೇ' ಥಟ್ಟನೆ ನೆನಪಾಗುವುದರ ಮೂಲಕ ಸೂಚಿಸಲಾಗಿದೆ. ಆ ಮೂಲಕ ತಿನ್ನು-ಕುಣಿ-ರಮಿಸು ಎಂಬುವಂತಹ ದಿಕ್ಕಿನಲ್ಲಿ ಸಾಗುತ್ತಿರುವ ಇಂದಿನ ಸಂಸ್ಕೃತಿಯು ಏಡ್ಸ್‌ನಿಂದ ಬರಮಾಡಿಕೊಳ್ಳುವ ಸ್ವವಿನಾಶದ ತೀವ್ರತೆಯನ್ನು ಕಥೆ ಬಿಂಬಿಸುತ್ತದೆ. ಕಡುಬಡತನದಲ್ಲಿ ಸಂಸಾರ ಮಾಡುತ್ತಿರುವ ಅಂಗನವಾಡಿ ಕಾರ್ಯಕರ್ತೆ ಗೌರಿ ನಮ್ಮ ಸುತ್ತಮುತ್ತಲು ಬದುಕುತ್ತಿರುವ ನಿರ್ದೋಷಿ ಮಹಿಳೆಯರ ಸಾಕಾರರೂಪದಂತೆ ನಮ್ಮನ್ನು ಕಾಡುತ್ತಾಳೆ.

ಕಥಾಸಂಕಲನದ ಶಿರೋನಾಮೆಯನ್ನು ಹೊತ್ತ 'ಅಚಲಾ' ಕಥೆಯಲ್ಲಿ ವಿನೂತನ ಪಾತ್ರಗಳ ಸಂಯೋಜನೆಯಿದೆ. ಆ ಮೂಲಕ ಮನುಷ್ಯ ಸಂಬಂಧಗಳು ಹೊಂದುವ ವಿಲಕ್ಷಣ ಪರಿವರ್ತನೆಗಳು ಅಡಕವಾಗಿರುವುದರಿಂದಲೇ 'ಅಚಲಾ' ಎಂಬ ಹೆಸರನ್ನು ಸಂಕಲನಕ್ಕೆ ನೀಡುವಲ್ಲಿ ಪ್ರೇರೇಪಿಸಿತೇನೋ ಅನ್ನಿಸುವಂತಿದೆ. ಅಲ್ಲದೆ, ಅಚಲಾ ಒಂದು ಅನುಕರಣೀಯ, ಮಾದರಿ ಪಾತ್ರವೂ ಆಗಿದೆ. ಸಾಂಪ್ರದಾಯಿಕ ಪಾತ್ರ ಚಿತ್ರಣಗಳಿಗಿಂತ ಭಿನ್ನವಾದ, ಅತಿ ಶೋಕಿತನವಿರುವ ಹುಡುಗಿ ಮತ್ತು ಅತಿ ಭಾವುಕತನವಿರುವ ಪುರುಷಪಾತ್ರಗಳ ನಡುವಣ ಹೊಂದಾಣಿಕೆ ಮತ್ತು ಸಮತೋಲನಗಳನ್ನು ಸಾಧಿಸುವ ಅಚಲಾ ಪಾತ್ರವು ಪ್ರತಿ ವ್ಯಕ್ತಿಯೂ ತನ್ನ ಬೆಳವಣಿಗೆಯಲ್ಲಿ ತಲುಪಬೇಕಾದ ಉನ್ನತ ಸ್ಥಿತಿಯನ್ನು ಸೂಚಿಸುತ್ತದೆ. ಅತಿ ಚಿಕ್ಕ ಕಥೆಗಳಾದ, 'ಹೃದಯಹೀನರು', 'ಕಮ್ಲಿ', 'ವಿಧಿವೈಚಿತ್ರ್ಯ' ಮತ್ತು 'ಯಾರಿಗೆ ಯಾರುಂಟು' ಜೀವನದ ಸಾರ್ವಕಾಲಿಕ ಕಾಳಜಿಗಳಾದ ಸಾಹುಕಾರ-ನೌಕರ ಸಂಬಂಧಗಳ ಬಿಕ್ಕಟು, ತಂದೆ-ಮಕ್ಕಳಲ್ಲಿ ಬಿಕ್ಕಟ್ಟು ಮತ್ತು ಮಾರಕರೋಗಗಳು ಕಾಡಿದಾಗ ಹೊಂದುವ ಆತ್ಮಸ್ಥೈರ್ಯಗಳನ್ನು ಚಿತ್ರಿಸುತ್ತವೆ. ಒಟ್ಟಿನಲ್ಲಿ ಓದುಗರ ಗಮನ ಸೆಳೆಯುವ, ಓದಿದ ನಂತರ ಕಾಡುವ, ವೈಶಿಷ್ಟ್ಯಪೂರ್ಣ ಕಥೆಗಳ ಸಂಕಲನ 'ಅಚಲಾ'.

**ಸುಮತಿ ಶೆಣೈ**
ಇಂಗ್ಲಿಷ್ ಉಪನ್ಯಾಸಕಿ, ಶಾರದಾ ಕಾಲೇಜು, ಬಸ್ರೂರು, ಉಡುಪಿ ಜಿಲ್ಲೆ

# ಪಂದ್ಯ

**ಇಂಗ್ಲಿಷ್ ಮೂಲ : ಆಂತೋನ್ ಚೆಕಾವ್**

ಅದು ಶರದೃತುವಿನ ಮಧ್ಯರಾತ್ರಿಯ ಸಮಯ. ಸುಮಾರು ೫೦ ವರ್ಷದ ಬ್ಯಾಂಕರ್ ತನ್ನ ವ್ಯಾಸಂಗದ ಕೊಠಡಿಯಲ್ಲಿ ಅತ್ತಿಂದಿತ್ತ ಇತ್ತಿಂದತ್ತ ಶತಪಥ ತಿರುಗುತ್ತಿದ್ದ. ತಾನು ೧೫ ವರ್ಷಗಳ ಹಿಂದೆ ಇಂತಹುದೇ ಒಂದು ರಾತ್ರಿಯಲ್ಲಿ ಭೋಜನ ಕೂಟವೊಂದನ್ನು ಏರ್ಪಡಿಸಿದ್ದನ್ನು ಜ್ಞಾಪಿಸಿಕೊಳ್ಳುತ್ತಿದ್ದ. ಸಾಕಷ್ಟು ಬುದ್ಧಿವಂತರಿಂದ ಕೂಡಿದ್ದ ಆ ಸಮಾರಂಭದಲ್ಲಿ ತುಂಬಾ ಸ್ವಾರಸ್ಯಕರವಾದ ಚರ್ಚೆ ನಡೆಯುತ್ತಿತ್ತು. ಜೀವಾವಧಿ ಶಿಕ್ಷೆ ಮತ್ತು ಮರಣದಂಡನೆ ಶಿಕ್ಷೆ, ಇವೆರಡರಲ್ಲಿ ಯಾವುದು ಉತ್ತಮ ಎಂಬುದು ಮುಖ್ಯ ವಿಷಯವಾಗಿತ್ತು.

ಕಾರ್ಯಕ್ರಮಕ್ಕೆ ಆಗಮಿಸಿದ್ದ ಹೆಚ್ಚು ಮಂದಿ ಕಲಾವಿದರು, ಬುದ್ಧಿಜೀವಿಗಳು, ಪತ್ರಿಕೋದ್ಯಮಿಗಳು, ನ್ಯಾಯವಾದಿಗಳು ಮರಣದಂಡನೆ ಇಂದಿನ ಕಾಲಕ್ಕೆ ಪ್ರಸ್ತುತವಲ್ಲ ಎಂದು ವಾದಿಸಿದರು. ಅದು ಅತ್ಯಂತ ಅನೀತಿಯಿಂದ ಕೂಡಿದೆ ಮತ್ತು ಅಮಾನವೀಯ ಎಂದು ಅಭಿಪ್ರಾಯಪಟ್ಟರು. ಬಹಳಷ್ಟು ಮಂದಿ ಮರಣದಂಡನೆಯ ಶಿಕ್ಷೆಯನ್ನು ಶಾಶ್ವತವಾಗಿ ಬಹಿಷ್ಕರಿಸಬೇಕೆಂದು ವಾದಿಸಿದರು.

''ನಿಮ್ಮ ಮಾತನ್ನು ನಾನು ಖಂಡಿತ ಒಪ್ಪುವುದಿಲ್ಲ'' ಎನ್ನುತ್ತ ಬ್ಯಾಂಕರ್ ಮಧ್ಯೆ ಬಾಯಿಹಾಕಿದ. ''ನನಗೆ ಜೀವಾವಧಿ ಶಿಕ್ಷೆ ಅಥವಾ ಮರಣದಂಡನೆ ಯಾವುದರ ಅನುಭವವೂ ಇಲ್ಲ, ಆದರೆ ಇವುಗಳಲ್ಲಿ ಯಾವುದನ್ನು ಆರಿಸಿಕೊಳ್ಳಬೇಕೆಂದರೆ, ಜೀವಾವಧಿ ಶಿಕ್ಷೆಯು ಮರಣದಂಡನೆ ಶಿಕ್ಷೆಗಿಂತ ಉತ್ತಮವೇನಲ್ಲ, ಏಕೆಂದರೆ ಮರಣದಂಡನೆಯು ವ್ಯಕ್ತಿಯನ್ನು ಒಂದೇ ಬಾರಿಗೆ ಸಾಯಿಸಿದರೆ ಜೀವಾವಧಿ ಶಿಕ್ಷೆಯು ವ್ಯಕ್ತಿಯನ್ನು ಸತತವಾಗಿ ಸಾಯಿಸುತ್ತಲೇ ಇರುತ್ತದೆ.'' ಎಂದು ವಾದಿಸಿದರು.

''ಹಾಗೆ ನೋಡಿದರೆ ಎರಡೂ ಶಿಕ್ಷೆಗಳು ಅಮಾನವೀಯ ಶಿಕ್ಷೆಗಳೇ'' ಎಂದು ಅತಿಥಿಗಳಲ್ಲಿ ಒಬ್ಬರು ಮಧ್ಯೆ ಬಾಯಿಹಾಕುತ್ತಾ ನುಡಿದರು. ''ಏಕೆಂದರೆ ಎರಡರ ಉದ್ದೇಶವೂ ಒಂದೇ. ಜೀವವನ್ನು ತೆಗೆಯುವುದರಿಂದ ಯಾರಿಗೂ ಲಾಭವಿಲ್ಲ. ನಮಗೆ ಜೀವವನ್ನು ಕೊಡುವ ಶಕ್ತಿ ಇಲ್ಲದಿರುವಾಗ ಜೀವವನ್ನು ತೆಗೆಯುವ ಅಧಿಕಾರ ಎಲ್ಲಿಂದ ಬರುತ್ತದೆ ?'' ಎಂಬುದು ಅವರ ಪ್ರಶ್ನೆಯಾಗಿತ್ತು.

''ನನಗೇನಾದರೂ ಮರಣದಂಡನೆ ಶಿಕ್ಷೆ ಮತ್ತು ಜೀವಾವಧಿ ಶಿಕ್ಷೆ ಇವುಗಳಲ್ಲಿ ಯಾವುದಾದರೂ ಒಂದನ್ನು ಮಧ್ಯೆ ಆರಿಸಿಕೊಳ್ಳಲು ಹೇಳಿದರೆ ನಾನು ಖಂಡಿತವಾಗಿಯೂ ಎರಡನೆಯದನ್ನು ಆರಿಸಿಕೊಳ್ಳುತ್ತೇನೆ'' ಎಂದು ಹೊಸದಾಗಿ ವಕೀಲ ವೃತ್ತಿಯನ್ನು ಆರಂಭಿಸಿದ್ದ ಯುವಕನೊಬ್ಬ ಹೇಳಿದ. ಮುಂದುವರೆದು, ''ಏಕೆಂದರೆ ಮರಣದಂಡನೆಗೊಳಗಾಗಿ ಜೀವ ಕಳೆದುಕೊಳ್ಳುವುದಕ್ಕಿಂತ ಜೀವಾವಧಿ ಶಿಕ್ಷೆಗೊಳಗಾಗಿ ಬದುಕಿ ಉಳಿಯುವುದೇ ಲೇಸು'' ಎಂದು ತನ್ನ ಅಭಿಪ್ರಾಯವನ್ನು ಮುಂದಿಟ್ಟ.

ಯುವಕನ ಮಾತನ್ನು ಒಪ್ಪದ ಬ್ಯಾಂಕರ್ ಮೇಜು ಕುಟ್ಟುತ್ತಾ ಹುರುಪಿನಿಂದ ''ನಿನ್ನ ಮಾತನ್ನು ನಾನು ಖಂಡಿತಾ ಒಪ್ಪುವುದಿಲ್ಲ. ಬೇಕಾದರೆ ನಾನು ಎರಡು ಲಕ್ಷ ರೂ.ಗಳ ಪಣ ಒಡ್ಡುವೆ. ಹದಿನೈದು ವರ್ಷಗಳಿರಲಿ, ನಿನಗೆ ಕೇವಲ ಐದು ವರ್ಷಗಳ ಕಾಲವೂ ಒಬ್ಬಂಟಿಗನಾಗಿ ಜೈಲಿನಲ್ಲಿ ಕಾಲ ಕಳೆಯಲು ಸಾಧ್ಯವಿಲ್ಲ'' ಎಂದು ಘರ್ಜಿಸಿದ.





''ಮನಸ್ಸಿದ್ದರೆ ಮಾರ್ಗ, ಮನುಷ್ಯನಿಗೆ ಅಸಾಧ್ಯವೆಂಬುದು ಯಾವುದೂ ಇಲ್ಲ. ನೀನೊಬ್ಬನೇ ಏನು, ಪಣ ಕಟ್ಟಲು ನಾನೂ ತಯಾರು. ಕೇವಲ ಐದು ವರ್ಷಗಳೇಕೆ ? ೧೫ ವರ್ಷಗಳ ಕಾಲ ನಾನು ಒಂಟಿಯಾಗಿ ಗೃಹ ಬಂಧನದಲ್ಲಿ ಬದುಕಬಲ್ಲೆ. ನೀನು ಹೇಳುವ ಎಲ್ಲಾ ನಿಯಮಗಳಿಗೂ ನಾನು ಬದ್ಧನಾಗಿರುತ್ತೇನೆ'' ಎಂದು ಮರುನುಡಿದ ವಕೀಲ.

''ನಾನು ಈ ದಿನವೇ ನಿನಗಾಗಿ ಎರಡು ಲಕ್ಷ ರೂ.ಗಳನ್ನು ತೆಗೆದಿಡುತ್ತೇನೆ. ನೀನು ಪಣದಲ್ಲಿ ಗೆದ್ದ ಮಾರನೇ ದಿನ ಹಣ ನಿನ್ನದಾಗುತ್ತದೆ'' ಎಂದು ಸವಾಲೆಸದ ಬ್ಯಾಂಕರ್.

ಅಂತೂ ಈ ಹುಚ್ಚು ವಾದ ಅಂತಿಮವಾಗಿ ಈ ರೀತಿಯಲ್ಲಿ ಕೊನೆಗೊಂಡಿತು: ಬ್ಯಾಂಕರ್‌ಗೆ ಲಕ್ಷವೆಂದರೆ ಲೆಕ್ಕವೇ ಇಲ್ಲ. ಹಾಗಾಗಿ ಅವನು ಈ ಪಣಕ್ಕೆ ತಕ್ಷಣವೇ ಒಪ್ಪಿಕೊಂಡ. ಆದರೂ ಭೋಜನ ಮಾಡುವಾಗ ಯುವಕನನ್ನು ಮತ್ತೊಮ್ಮೆ ಎಚ್ಚರಿಸಿದ, ''ಈ ಪಣದ ಬಗ್ಗೆ ಇನ್ನೊಮ್ಮೆ ಯೋಚಿಸು. ನನಗೆ ಈ ಎರಡು ಲಕ್ಷ ಕೊಡುವುದು ಸಮಸ್ಯೆಯೇ ಅಲ್ಲ. ಆದರೆ ನೀನು ನಿನ್ನ ಬದುಕಿನ ಅತ್ಯಮೂಲ್ಯವಾದ ಮೂರು ಅಥವಾ ನಾಲ್ಕು ವರ್ಷಗಳನ್ನು ಕಳೆದುಕೊಳ್ಳಲಿದ್ದೀಯ. ಮೂರು ಅಥವಾ ನಾಲ್ಕು ವರ್ಷ ಎಂದು ನಾನು ಒತ್ತಿ ಹೇಳುತ್ತಿದ್ದೇನೆ. ಏಕೆಂದರೆ, ನಿನಗೆ ಅದಕ್ಕಿಂತಲೂ ಹೆಚ್ಚು ಕಾಲ ಅಲ್ಲಿ ಕಳೆಯಲು ಸಾಧ್ಯವೇ ಇಲ್ಲ. ಖಂಡಿತವಾಗಿಯೂ ತಪ್ಪಿಸಿಕೊಂಡು ಹೊರಕ್ಕೆ ಬರುತ್ತೀಯ. ಒಂದು ವಿಷಯವನ್ನು ನೆನಪಿನಲ್ಲಿಟ್ಟುಕೊ, ಸ್ವಇಚ್ಛೆಯಿಂದ ಗೃಹಬಂಧನದಲ್ಲಿರುವುದು ಕಾನೂನಿನ ಆದೇಶಕ್ಕೊಳಗಾಗಿ ಬಂಧನದಲ್ಲಿರುವುದಕ್ಕಿಂತ ಬಹಳ ಕಷ್ಟಕರವಾದ ಕೆಲಸ. ಏಕೆಂದರೆ, ಗೃಹಬಂಧನದಿಂದ ಯಾವಾಗ ಬೇಕಾದರೂ ವಾಪಸ್ಸು ಬರಬಹುದೆಂಬ ಸ್ವಾತಂತ್ರ್ಯ ಅಲ್ಲಿನ ಬದುಕಿನ ನೆಮ್ಮದಿಯನ್ನು ಕೆಡಿಸುತ್ತದೆ. ಹಾಗಾಗಿ ನೀನು ಹೊರಕ್ಕೆ ಬರುವ ಸಾಧ್ಯತೆಯೇ ಹೆಚ್ಚು.'' ಆದರೆ ಬ್ಯಾಂಕರನ ಯಾವ ಬೆದರಿಕೆಗೂ ಯುವಕ ಬಗ್ಗಲೇ ಇಲ್ಲ.

ಈ ಎಲ್ಲ ಘಟನೆಗಳನ್ನೂ ಜ್ಞಾಪಿಸಿಕೊಳ್ಳುತ್ತ ಬ್ಯಾಂಕರ್ ತನ್ನ ಕೊಠಡಿಯಲ್ಲಿ ಅತ್ತಿಂದಿತ್ತ ಇತಿಂದತ್ತ ತಿರುಗಾಡತೊಡಗಿದ್ದ. ''ಈ ಪಂದ್ಯವನ್ನು ನಾನು ಯಾಕಾಗಿ ಕಟ್ಟಿದೆ ? ಒಬ್ಬ ವ್ಯಕ್ತಿ ತನ್ನ ಬದುಕಿನ ಅತ್ಯಮೂಲ್ಯವಾದ ಕಾಲವನ್ನು ಕೇವಲ ಎರಡು ಲಕ್ಷಗಳಿಗಾಗಿ ಕಳೆಯುವದರಲ್ಲಿ ಏನಾದರೂ ಅರ್ಥವಿದೆಯೇ ? ಈ ಪಂದ್ಯವೇನಾದರೂ ಮರಣದಂಡನೆ ಅಥವಾ ಜೀವಾವಧಿ ಶಿಕ್ಷೆ, ಇವುಗಳಲ್ಲಿ ಯಾವುದು ದೊಡ್ಡದು ಎಂದು ಸಾಧಿಸುತ್ತದೆಯೇ ? ಇಲ್ಲ, ಇಲ್ಲ... ಖಂಡಿತಾ ಇಲ್ಲ. ಇದು ಕೇವಲ ಅರ್ಥವಿಲ್ಲದ, ಚಂಚಲತೆಯ, ಹುಚ್ಚುತನದ ಪರಾಕಾಷ್ಠೆಯಷ್ಟೆ. ಯುವಕನ ದೃಷ್ಟಿಯಲ್ಲಿ ಹೇಳುವುದಾದರೆ ಇದು ಅವನ ದುರಹಂಕಾರ ಮತ್ತು ದುರಾಸೆಗಳ ಪರಮಾವಧಿ.''

ಬ್ಯಾಂಕರ್ ನಡೆದ ಘಟನೆಗಳನ್ನು ಒಂದೊಂದಾಗಿ ಜ್ಞಾಪಿಸಿಕೊಳ್ಳುತ್ತಾ ಹೋದ. ಅವನ ತೋಟದ ಮನೆಯ ಒಂದು ಕೋಣೆಯಲ್ಲಿ ಆ ಯುವಕನು ಹದಿನೈದು ವರ್ಷಗಳ ಕಾಲ ಇರಬೇಕೆಂದು ತೀರ್ಮಾನಿಸಲಾಯಿತು. ಆ ತೀರ್ಮಾನದಂತೆ ಆ ಹದಿನೈದು ವರ್ಷಗಳ ಕಾಲ ಅವನು ಕೊಠಡಿಯಿಂದ ಹೊರಕ್ಕೆ ಬರುವಂತಿಲ್ಲ, ಯಾರನ್ನೂ ನೋಡುವಂತಿಲ್ಲ, ಯಾರೊಂದಿಗೂ

ಮಾತನಾಡುವಂತಿಲ್ಲ. ಅಷ್ಟೇ ಏಕೆ ಯಾರ ಮಾತನ್ನೂ ಕೇಳುವಂತಿಲ್ಲ. ಯಾವ ವಿಧವಾದ ಪತ್ರಿಕೆಗಳನ್ನಾಗಲೀ, ಪತ್ರವನ್ನಾಗಲೀ ಪಡೆಯುವಂತಿಲ್ಲ ಮತ್ತು ಓದುವಂತಿಲ್ಲ. ಆದರೆ ಅವನು ಪತ್ರಗಳನ್ನು ಬರೆಯಬಹುದು, ಸಂಗೀತ ವಾದ್ಯಗಳನ್ನು ನುಡಿಸಬಹುದು, ಪುಸ್ತಕಗಳನ್ನು ಓದಬಹುದು, ಧೂಮಪಾನ ಮಾಡಬಹುದು, ಮದ್ಯಪಾನ ಮಾಡಬಹುದು. ಅವನು ಕೇಳಿವ ಎಲ್ಲ ಪುಸ್ತಕಗಳನ್ನು, ಸಂಗೀತೋಪಕರಣಗಳನ್ನು, ಇತರ ಯಾವುದೇ ವಸ್ತುಗಳನ್ನು ಎಷ್ಟು ಸಂಖ್ಯೆಯಲ್ಲಿ ಬೇಕಾದರೂ ಒದಗಿಸಲಾಗುವುದು. ಬಾಹ್ಯ ಜಗತ್ತಿನೊಂದಿಗೆ ಸಂಪರ್ಕ ಹೊಂದಲು ಕೇವಲ ಒಂದು ಕಿಟಕಿಯ ವ್ಯವಸ್ಥೆಯನ್ನು ಮಾತ್ರ ವಿಶೇಷವಾಗಿ ಮಾಡಲಾಗುವುದು. ಅವನಿಗೆ ಬೇಕಾದ ವಸ್ತುಗಳನ್ನು, ಅವು ಪುಸ್ತಕಗಳಿರಬಹುದು, ಸಂಗೀತೋಪಕರಣಗಳಿರಬಹುದು, ಯಾವುದೇ ವಸ್ತುವಿರಬಹುದು, ಅವುಗಳ ವಿವರಗಳನ್ನು ಒಂದು ಚೀಟಿಯಲ್ಲಿ ಬರೆದು ಕಿಟಕಿಯ ಬಳಿ ಇರಿಸಬೇಕು. ಆ ವಸ್ತುವನ್ನು ಕಿಟಕಿಯ ಮೂಲಕವೇ ಅವನಿಗೆ ಒದಗಿಸಲಾಗುವುದು. ಚೀಟಿ ಇಡುವಾಗ ಅಥವಾ ವಸ್ತುಗಳನ್ನು ಪಡೆಯುವಾಗ ಅವನು ಯಾರ ಮುಖವನ್ನೂ ನೋಡುವಂತಿಲ್ಲ.

ಸರಿ, ಆ ಎಲ್ಲ ವಿವರಗಳ ಕುರಿತು ಒಂದು ಕರಾರು ಪತ್ರವನ್ನೂ ಬರೆಯಲಾಯಿತು. ಆ ಕರಾರು ಪತ್ರದ ಪ್ರಕಾರ ಯುವಕನು ಹದಿನೈದು ವರ್ಷಗಳ ಕಾಲ, ಅಂದರೆ ೧೮೭೦ರ ರಾತ್ರಿ ೧೨ ಗಂಟೆಯಿಂದ ೧೮೮೫ರ ರಾತ್ರಿ ೧೨ ಗಂಟೆಯವರೆಗೆ ಏಕಾಂಗಿಯಾಗಿ ಕಾರಾಗೃಹದಲ್ಲಿರತಕ್ಕದ್ದು. ಅಲ್ಲಿಂದ ತಪ್ಪಿಸಿಕೊಂಡರೆ ಇಲ್ಲವೇ ತಪ್ಪಿಸಿಕೊಳ್ಳಲು ಪ್ರಯತ್ನಪಟ್ಟರೆ, ಅಂದರೆ ಅವಧಿ ಮುಗಿಯುವುದಕ್ಕಿಂತ ಕೇವಲ ಎರಡು ನಿಮಿಷಗಳ ಮೊದಲು ಹೊರಕ್ಕೆ ಬಂದದ್ದೇ ಆದರೆ ಬ್ಯಾಂಕರ್ ಅವನಿಗೆ ಎರಡು ಲಕ್ಷ ಕೊಡಬೇಕೆಂಬ ಕರಾರಿನಿಂದ ವಿಮುಕ್ತನಾಗುತ್ತಾನೆ.

ಕಾರಾಗೃಹದ ಬದುಕಿನ ಅವನ ಬರಹಗಳನ್ನು ಪರೀಕ್ಷಿಸಿದಾಗ ಒಂಟಿತನದಲ್ಲಿ ಕಾಲ ಕಳೆಯಲು ಕೈದಿಯು ಮೊದಮೊದಲು ಬಹಳ ಕಷ್ಟಪಡುತ್ತಿದ್ದ. ಅವನು ಅನುಭವಿಸುತ್ತಿರುವ ವೇದನೆಯ ಸಪ್ಪಳ ಹಗಲಿರುಳೂ ಮನೆಯ ಹೊರ ಭಾಗಕ್ಕೆ ಕೇಳುತ್ತಿತ್ತು. ಅವನು ಮದ್ಯಪಾನ ಮತ್ತು ಧೂಮಪಾನವನ್ನು ತಿರಸ್ಕರಿಸುತ್ತಿದ್ದ. ಮದ್ಯ ಸೇವಿಸುವುದರಿಂದ ಮನಸ್ಸು ಸ್ಥಿಮಿತ ಕಳೆದುಕೊಳ್ಳುತ್ತದೆ. ಅಷ್ಟೇ ಅಲ್ಲದೆ ''ಮದ್ಯಪಾನ ಮಾಡಬೇಕಾದರೆ ಜೊತೆಗಾರರಿರಬೇಕು. ಜೊತೆಗಾರರಿಲ್ಲದೆ ಮದ್ಯಪಾನ ಮಾಡುವುದನ್ನು ಊಹಿಸಲೂ ಸಾಧ್ಯವಿಲ್ಲ. ಧೂಮಪಾನ ಮಾಡುವುದರಿಂದ ಕೊಠಡಿಯೆಲ್ಲಾ ಹೊಗೆಯಿಂದ ತುಂಬಿಕೊಳ್ಳುತ್ತದೆ'' ಎಂದು ಮನಸ್ಸಿನಲ್ಲೇ ಅಂದುಕೊಂಡ.



ಮೊದಮೊದಲು, ಅಂದರೆ ಮೊದಲನೇ ವರ್ಷದಲ್ಲಿ ಇವನು ಪ್ರೀತಿ, ಪ್ರೇಮಗಳಿಗೆ ಸಂಬಂಧಪಟ್ಟ ಕಥೆ, ಕವನಗಳನ್ನು ಓದುತ್ತಿದ್ದ. ಬರಬರುತ್ತಾ ಇವುಗಳಲ್ಲಿ ಆಸಕ್ತಿ ಕಡಿಮೆಯಾಯಿತು. ಎರಡನೇ ವರ್ಷದಲ್ಲಿ ನೋವಿನಿಂದ ನರಳುವ ಸಪ್ಪಳವೇ ಕೇಳಿಸುತ್ತಿರಲಿಲ್ಲ. ನಂತರ ಶ್ರೇಷ್ಠ ಬರಹಗಾರರ ಕೃತಿಗಳನ್ನು ಓದತೊಡಗಿದ. ಐದನೇ ವರ್ಷದಲ್ಲಿ ಇವನ ಕೊಠಡಿಯಿಂದ ಸಂಗೀತದ ನಾದ ಕೇಳಿಬರತೊಡಗಿತು. ಕ್ರಮೇಣ ಮದ್ಯಪಾನ ಮಾಡುವುದನ್ನೂ ಪ್ರಾರಂಭಿಸಿದ. ಬಂಧೀಖಾನೆಯ ಹೊರಗಿನಿಂದ ಕಿಟಕಿಯ ಮೂಲಕ ಪರೀಕ್ಷಿಸಿದಾಗ ಅವನೇನೂ ಮಾಡುತ್ತಿರಲಿಲ್ಲ. ಕೇವಲ ತಿನ್ನುವುದು, ಕುಡಿಯುವುದು ಮತ್ತು ಮಲಗುವುದರಲ್ಲಿ ನಿರತನಾಗಿರುತ್ತಿದ್ದ. ಆಗಾಗ್ಗೆ ಆಕಳಿಸುತ್ತಾ ಕೋಪದಿಂದ ತನ್ನಷ್ಟಕ್ಕೆ ತಾನೇ ಮಾತನಾಡಿಕೊಳ್ಳುತ್ತಿದ್ದ. ಆಗ ಯಾವ ಪುಸ್ತಕಗಳನ್ನೂ ಓದುತ್ತಿರಲಿಲ್ಲ. ಕೆಲವೊಮ್ಮೆ ಎದ್ದು ಕುಳಿತು ಬರೆಯುತ್ತಿದ್ದ. ಗಂಟೆಗಟ್ಟಲೆ ಬರೆಯುತ್ತಿದ್ದ. ಸ್ವಲ್ಪ ಹೊತ್ತಿನ ನಂತರ ಬರೆದುದೆಲ್ಲವನ್ನೂ ಹರಿದು ಚೂರು ಚೂರು ಮಾಡಿ ಎಸೆಯುತ್ತಿದ್ದ. ಒಂದೆರಡು ಬಾರಿ ಹೀಗೆ ಹರಿದು ಎಸೆದ ನಂತರ ಅವನು ಅಳುವ ಶಬ್ದ ಕೇಳುತ್ತಿತ್ತು.

ಆರನೇ ವರ್ಷದ ಉತ್ತರಾರ್ಧದಲ್ಲಿ ಈ ಕೈದಿಯು ಓದುವ ಹವ್ಯಾಸವನ್ನು ಬೆಳೆಸಿಕೊಂಡು ಭಾಷಾಶಾಸ್ತ್ರ, ತತ್ವಶಾಸ್ತ್ರ, ಚರಿತ್ರೆ ಮುಂತಾದ ವಿಷಯಗಳನ್ನು ಓದುವುದರಲ್ಲಿ ಮುಳುಗಿಹೋದ. ಅವನು ಕೇಳುತ್ತಿದ್ದ ಪುಸ್ತಕಗಳನ್ನು ಹೊಂದಿಸುವುದರಲ್ಲಿ ಬ್ಯಾಂಕರ್ ಹಣ್ಣುಗಾಯಿ ನೀರುಗಾಯಿಯಾಗಿ ಹೋದ. ಕೇವಲ ನಾಲ್ಕು ವರ್ಷಗಳಲ್ಲಿ ಅವನಿಗೆ ಆರು ನೂರಕ್ಕೂ ಹೆಚ್ಚು ಪುಸ್ತಕಗಳನ್ನು ಒದಗಿಸಬೇಕಾಯಿತು. ಈ ಸಂದರ್ಭದಲ್ಲಿ ಬ್ಯಾಂಕರ್‌ಗೆ ಕೈದಿಯಿಂದ ಒಂದು ಸುದೀರ್ಘವಾದ ಪತ್ರ ಬಂತು.

**ಆ ಪತ್ರದ ಒಕ್ಕಣೆ :**

''ನನ್ನ ಪ್ರೀತಿಯ ಜೈಲರ್ ಅವರೇ, ನಾನು ಈ ಪತ್ರವನ್ನು ತಮಗೆ ಆರು ಭಾಷೆಗಳಲ್ಲಿ ಬರೆಯುತ್ತಿದ್ದೇನೆ. ಈ ಪತ್ರವನ್ನು ಆಯಾಯ ಭಾಷಾ ಪಂಡಿತರುಗಳಿಗೆ ತೋರಿಸಿ ಈ ಪತ್ರಗಳಲ್ಲಿ ಅವರು ಒಂದು ತಪ್ಪನ್ನೂ ಕಾಣದಿದ್ದಲ್ಲಿ ನನ್ನ ಕೊಠಡಿಯ ಹೊರ ಭಾಗದಲ್ಲಿರುವ ತೋಟದಲ್ಲಿ ಒಂದು ಗುಂಡನ್ನು ಹಾರಿಸಿ. ಆ ಗುಂಡಿನ ಸಪ್ಪಳದಿಂದ ನನ್ನ ಪ್ರಯತ್ನ ಫಲಪ್ರದವಾಗಿದೆ ಎಂಬ ತೃಪ್ತಿ ನನಗೆ ಸಿಗುತ್ತದೆ. ಜಗತ್ತಿನಾದ್ಯಂತ ಬೇರೆ ಬೇರೆ ದೇಶದ ಜನರು ಬೇರೆ ಬೇರೆ ಭಾಷೆಗಳಲ್ಲಿ ಮಾತನಾಡುತ್ತಿರಬಹುದು. ಆದರೆ ಅವರಲ್ಲಿ ಉರಿಯುತ್ತಿರುವ ಜ್ಞಾನಜ್ಯೋತಿಯು ಒಂದೇ ಆಗಿರುತ್ತದೆ. ಆ ಪರಮ ಸತ್ಯವನ್ನು ಅರಿಯುತ್ತಿರುವುದರಿಂದ ನನ್ನ ಮನಸ್ಸಿಗಾಗುತ್ತಿರುವ ಆನಂದ ವರ್ಣಿಸಲಸದಳ.'' ಕೈದಿಯ ಅಪೇಕ್ಷೆಯಂತೆ ಸ್ವಲ್ಪ ದಿನಗಳ ನಂತರ ಬ್ಯಾಂಕರ್ ಎರಡು ತುಪಾಕಿಗಳಿಂದ ಗುಂಡು ಹಾರಿಸಲು ಆದೇಶವಿತ್ತ.

ಹತ್ತು ವರ್ಷಗಳ ನಂತರ ಕೈದಿಯು ಸದಾ ಮೇಜಿನ ಬಳಿ ಕುಳಿತುಕೊಂಡು ಕ್ರೈಸ್ತ ದೇವನ ವೇದ ವಾಕ್ಯ ಪುಸ್ತಕವನ್ನು ಓದಲು ಪ್ರಾರಂಭಿಸಿದ. ನಾಲ್ಕು ವರ್ಷಗಳ ಕಾಲ ಆರುನೂರಕ್ಕೂ ಹೆಚ್ಚು ಪುಸ್ತಕಗಳನ್ನು ಅಭ್ಯಾಸ ಮಾಡಿದ ಕೈದಿ ಈ ಒಂದು ವರ್ಷದಲ್ಲಿ ಕೇವಲ ಒಂದೇ ಒಂದು ಪುಸ್ತಕ ಓದುತ್ತಿರುವುದನ್ನು ನೋಡಿ ಬ್ಯಾಂಕರ್‌ಗೆ ತುಂಬಾ ಆಶ್ಚರ್ಯವಾಯಿತು. ಕ್ರೈಸ್ತಧರ್ಮದ ಪೂರ್ಣ ತಿರುಳು ಈ ಪುಸ್ತಕದಲ್ಲಿ ಅಡಕವಾಗಿತ್ತು.

ಕೈದಿಯು ತನ್ನ ಕೊನೆಯ ಎರಡು ಮೂರು ವರ್ಷಗಳ ಅವಧಿಯಲ್ಲಂತೂ ಪುಸ್ತಕಗಳ ಮೇಲೆ ಪುಸ್ತಕಗಳನ್ನು ಓದಲು ಪ್ರಾರಂಭಿಸಿದ. ಒಮ್ಮೆ ವಿಜ್ಞಾನ ಪುಸ್ತಕಗಳನ್ನು ಓದಿದರೆ ಮತ್ತೊಮ್ಮೆ ಬೈರನ್, ಶೇಕ್ಸ್‌ಪಿಯರ್ ಮೊದಲಾದ ಕವಿಗಳ ಪುಸ್ತಕಗಳನ್ನು ಕೇಳುತ್ತಿದ್ದ. ಕೆಮಿಸ್ಟ್ರಿ ವ್ಯಾಸಂಗ ಮಾಡುತ್ತಿದ್ದವನು ಇದ್ದಕ್ಕಿಂದ್ದಂತೆ ಔಷಧಿ ಪುಸ್ತಕಗಳನ್ನೂ ಓದಲು ಪ್ರಾರಂಭಿಸಿದ. ಮಧ್ಯೆ ಮಧ್ಯೆ ತತ್ವಶಾಸ್ತ್ರ ಪುಸ್ತಕಗಳನ್ನೂ ಚರಿತ್ರೆ ಪುಸ್ತಕಗಳನ್ನೂ ಅಭ್ಯಾಸಮಾಡುತ್ತಿದ್ದ. ಹೀಗೆ ಅವನ ಅಭಿರುಚಿ ಬೇರೆ ಬೇರೆಯಾಗಿರುತ್ತಿತ್ತು. ಅವನು ಓದುತ್ತಿದ್ದ ವೇಗವನ್ನು ಗಮನಿಸಿದಾಗ ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿ ಸಮುದ್ರದಲ್ಲಿ ಮುಳುಗುತ್ತಿರುವ ನಾವಿಕನೊಬ್ಬ ತನ್ನ ಜೀವವನ್ನು ರಕ್ಷಿಸಿಕೊಳ್ಳಲು ತೇಲುತ್ತಿರುವ ಮರದ ದಿಮ್ಮಿಗಳನ್ನು ಹಿಡಿದುಕೊಳ್ಳಲು ಒಮ್ಮೆ ಅತ್ತ ಕಡೆಗೂ ಇನ್ನೊಮ್ಮೆ ಇತ್ತ ಕಡೆಗೂ ಕೈಚಾಚುವಂತೆ ಕಾಣುತ್ತಿತ್ತು.

ಈ ಎಲ್ಲ ಘಟನೆಗಳನ್ನೂ ಜ್ಞಾಪಿಸಿಕೊಳ್ಳುತ್ತ ಬ್ಯಾಂಕರ್ ಚಿಂತಾಕ್ರಾಂತನಾಗಿ ಹೀಗೆ ಯೋಚಿಸತೊಡಗಿದ: ನಾಳೆ ೧೨ ಗಂಟೆಗೆ ಬಿಡುಗಡೆಯಾಗಿ ಅವನು ಸ್ವಾತಂತ್ರ್ಯ ಪಡೆಯುತ್ತಾನೆ. ನಮ್ಮ ಕರಾರಿನ ಪ್ರಕಾರ ನಾನು ಅವನಿಗೆ ಎರಡು ಲಕ್ಷ

ರೂಗಳನ್ನು ಕೊಡಬೇಕು. ನಾನು ಹಣ ಕೊಟ್ಟದ್ದೇ ಆದರೆ ಅವನು ಶ್ರೀಮಂತನಾಗಿ ಮೆರೆಯುತ್ತಾನೆ. ನಾನು ಮಾತ್ರ ಬೀದಿ ಬಿಕಾರಿಯಾಗುತ್ತೇನೆ.

ಹದಿನೈದು ವರ್ಷಗಳ ಹಿಂದೆ ಅವನ ಶ್ರೀಮಂತಿಕೆಯೆದುರು ಈ ಲಕ್ಷವೆಂಬುದು ಲೆಕ್ಕಕ್ಕೇ ಇರಲಿಲ್ಲ. ಆದರೆ ಈಗ ಕಾಲ ಬದಲಾಗಿದೆ. ಷೇರು ಮಾರುಕಟ್ಟೆಯ ಕುಸಿತದಿಂದಾಗಿ ಅವನ ಲೆಕ್ಕಾಚಾರವೆಲ್ಲ ತಲೆಕೆಳಗಾಗಿತ್ತು. ಷೇರಿನಲ್ಲಿ ತೊಡಗಿಸಿದ ಹಣವೆಲ್ಲಾ ಪಾತಾಳಕ್ಕೆ ಇಳಿದುಹೋಗಿತ್ತು. ಹಾಗಾಗಿ ಆರ್ಥಿಕವಾಗಿ, ಮಾನಸಿಕವಾಗಿ ಬ್ಯಾಂಕರ್ ಬರಬರುತ್ತಾ ತೀರ ಕುಬ್ಜನಾಗಿಹೋಗಿದ್ದ. ಒಂದು ಕಾಲದಲ್ಲಿ ಭಾರೀ ಶ್ರೀಮಂತನಾಗಿದ್ದ ಬ್ಯಾಂಕರ್ ಈಗ ಚೇತರಿಸಿಕೊಳ್ಳಲಾಗದ ಸ್ಥಿತಿಗೆ ಬಂದು ತಲುಪಿದ್ದ. ಈಗ ತನ್ನಷ್ಟಕ್ಕೆ ತಾನೇ ಗೊಣಗುಟ್ಟುತ್ತ ತಲೆಯಮೇಲೆ ಕೈಹೊತ್ತುಕೊಂಡು ''ಅಯ್ಯೋ, ಈ ವ್ಯಕ್ತಿ ಜೈಲಿನಲ್ಲಿ ಯಾಕೆ ಸಾಯಲಿಲ್ಲ? ಅವನಿನ್ನೂ ೪೦ ವರ್ಷಗಳ ಕಾಲ ಬದುಕುತ್ತಾನೆ. ನನ್ನಲ್ಲಿರುವ ಪೂರ್ತಿ ಹಣವನ್ನು ದೋಚಿಕೊಂಡು ಮದುವೆಯಾಗಿ ಸುಖವಾಗಿರುತ್ತಾನೆ. ನಾನು ಮಾತ್ರ ಪ್ರತಿದಿನ ಒಬ್ಬ ಬಡ ಭಿಕ್ಷುಕನಂತೆ ಅವನನ್ನು ದ್ವೇಷದಿಂದ ನೋಡುತ್ತಿರ ಬೇಕಾಗುತ್ತದಲ್ಲಾ!'' ಎಂದು ಗೊಣಗಿಕೊಂಡ.

''ನಾನು ಇಂದು ಈ ಸ್ಥಿತಿಯಲ್ಲಿ ಬದುಕಲು ನೀನೇ ಕಾರಣ, ಅದಕ್ಕಾಗಿ ನಿನಗೆ ತುಂಬಾ ಧನ್ಯವಾದಗಳು. ನಿನಗೇನಾದರೂ ಸಹಾಯ ಬೇಕಿದ್ದರೆ ಕೇಳು. ಖಂಡಿತಾ ಮಾಡುತ್ತೇನೆ'' ಎಂದು ಆ ಯುವಕನೇನಾದರೂ ಅಣಕಿಸುವಂತಾದರೆ ತಾನು ಇದ್ದೂ ಸತ್ತಂತಲ್ಲವೇ? ಇಂತಹ ಯೋಚನೆಯಲ್ಲೇ ಬ್ಯಾಂಕರ್ ಮುಳುಗಿರುವಾಗ ಗಡಿಯಾರ ಮೂರು ಗಂಟೆ ಬಾರಿಸುವುದರೊಂದಿಗೆ ಸಮಯವನ್ನು ಸೂಚಿಸಿತು. ಎಲ್ಲರೂ ಗಾಢ ನಿದ್ರೆಯಲ್ಲಿ ಮುಳುಗಿದ್ದಾರೆ. ಹೊರಭಾಗದಲ್ಲಿ ಗಾಳಿ ಬೀಸುವ ರಭಸಕ್ಕೆ ತೋಟದಲ್ಲಿ ಎಲೆಗಳ ಸಪ್ಪಳ ಬಿಟ್ಟರೆ ಮತ್ತೇನೂ ಕೇಳಿಸುತ್ತಿರಲಿಲ್ಲ. ಬ್ಯಾಂಕರ್ ಮನಸ್ಸಿನಲ್ಲೇ ಒಂದು ತೀರ್ಮಾನ ತೆಗೆದುಕೊಂಡ. ಆ ನಿಶ್ಶಬ್ದ ವಾತಾವರಣದಲ್ಲಿ ಸ್ವಲ್ಪವೂ ಸದ್ದುಮಾಡದೆ ಹದಿನೈದು ವರ್ಷಗಳಿಂದ ಸುರಕ್ಷಿತ ಸ್ಥಳದಲ್ಲಿರಿಸಿದ್ದ ಜೈಲಿನ ಬೀಗದ ಕೈಯನ್ನು ಹೊರತೆಗೆದ. ಮೂಲೆಯಲ್ಲಿ ಇರಿಸಿದ್ದ ತನ್ನ ಕೋಟು ಧರಿಸಿಕೊಂಡು ಮನೆಯಿಂದ ಹೊರಟ.

ತೋಟದ ತುಂಬ ಪೂರ್ಣ ಕತ್ತಲೆ ಮತ್ತು ಚಳಿ ಆವರಿಸಿಕೊಂಡಿದ್ದವು. ಮಳೆಹನಿಗಳು ತೊಟ್ಟಿಕ್ಕುತ್ತಿದ್ದವು. ಜೋರಾಗಿ ಬೀಸುತ್ತಿದ್ದ ಕೊರೆಯುವ ಗಾಳಿ ಮರಗಿಡಗಳಿಗೆ ಸ್ವಲ್ಪವೂ ವಿಶ್ರಾಂತಿ ಕೊಟ್ಟಿರಲಿಲ್ಲ. ಆ ಕತ್ತಲಿನಲ್ಲಿ ಅಲ್ಲಿಗೆ ಆಗಮಿಸಿದ ಬ್ಯಾಂಕರ್‌ಗೆ ಹಾದಿಯೇ ಕಾಣಿಸಲಿಲ್ಲ. ಹಾಗೂ ಹೀಗೂ ಕಷ್ಟಪಟ್ಟು ತೆವಳಿಕೊಂಡು ಹೋಗಿ ಕೈದಿ ಇರುವ ತಾಣವನ್ನು ತಲುಪಿದ. ಎಷ್ಟು ಬಾರಿ ಕರೆದರೂ ಕಾವಲುಗಾರನಿಂದ ಯಾವುದೇ ಉತ್ತರವೂ ಬರಲಿಲ್ಲ. ಅವನು ಅಡಿಗೆ ಕೋಣೆಯಲ್ಲೋ ಅಥವಾ ಇನ್ನಾವುದೋ ಕೊಠಡಿಯಲ್ಲಿ ಮಲಗಿ ನಿದ್ರಿಸುತ್ತಿರಬೇಕು ಎಂದುಕೊಂಡ. ಅವನು ಅಂದುಕೊಂಡಂತೆ ಕಾರ್ಯ ನಿರ್ವಹಿಸಿದ್ದರೆ ಖಂಡಿತವಾಗಿಯೂ ಆರೋಪ ಕಾವಲುಗಾರನ ಮೇಲೆ ಬರುತ್ತಿತ್ತು.

ಬ್ಯಾಂಕರ್ ತೋಟದ ಮಧ್ಯೆ ಇರುವ ಕೈದಿಯ ಮನೆ ಕಡೆಗೆ ಆ ಕತ್ತಲಿನಲ್ಲಿಯೇ ತಡವರಿಸುತ್ತ ಹೊರಟ. ಅವನಲ್ಲಿರುವ ಬೆಂಕಿಕಡ್ಡಿಯ ಬೆಳಕೇ ಅವನಿಗೆ ಆಸರೆಯಾಗಿತ್ತು. ಬಾಗಿಲ ಬಳಿ ಬಂದಾಗ ಒಂದೇ ಒಂದು ಪ್ರಾಣಿಯ ಸುಳಿವು ಕೂಡಾ ಇರಲಿಲ್ಲ. ಕೈದಿಯ ಕೊಠಡಿಗೆ ಹಾಕಿದ ಬೀಗದ ಮೇಲಿನ ಸೀಲು ಭದ್ರವಾಗಿತ್ತು. ಕಿಟಕಿಯ ಮೂಲಕ ಒಳಗೆ ಇಣುಕಿ ನೋಡಿದಾಗ ಟೇಬಲ್ಲಿನ ಮೇಲೆ ಮೇಣದ ಬತ್ತಿ ಉರಿಯುತ್ತಿತ್ತು. ಕೈದಿ ಟೇಬಲ್ಲಿನ ಎದುರು ಕುಳಿತುಕೊಂಡಿದ್ದ. ಕೂದಲುಗಳ ರಾಶಿಯಲ್ಲಿ ಹುದುಗಿದ್ದ ಅವನ ಬೆನ್ನಿನ ಭಾಗ ಮಾತ್ರ ಕಾಣಿಸುತ್ತಿತ್ತು. ತೆರೆದಿರುವ ಪುಸ್ತಕಗಳು

# ನೆರಳು

(1)

ಬಿಡಲಿಲ್ಲ ಎಷ್ಟು ದೂರ ನಡೆದರೂ
ಭೂತದ ಕೊಂಬೆಗೆ ನೇತುಕೊಂಡಿದೆ
ನೆನಪಿನ ಗೀಜುಗದ ಗೂಡು

ಅವನ ನೆರಳು ತಾಕದಂತೆ
ಬೆಳೆಸುತ್ತೇನೆ ಇವನನ್ನ
ಎಂದು ಸೆಟೆದು ಬಂದವಳ
ಹಿಂದೆ ಸರಿಯುತ್ತ ಬಂದ ಹಾಗೆ ನೆರಳು...
ನೆರಳು ಬೀಳದಿದ್ದರೂ
ಮಗ ಬೆಳೆದು ನಿಂತ
ಥೇಟ್ ಅಪ್ಪನೆಂತೆನಿಸಿಕೊಂಡುಬಿಟ್ಟ.

(2)

ಸೂರ್ಯ, ಚಂದ್ರ ಭೂಮಿಯ
ನೆರಳುಗಳ ತಾಕಲಾಟ
ನಿಲ್ಲುವುದೇ ಕಾಲ?
ಬೆಳಕಿಗೆಲ್ಲ ಆಗಾಗ್ಗೆ
ಅಮಾವಾಸ್ಯೆ, ಗ್ರಹಣ...
ಯೋಗಿಗೆ ಯೋಗಿನಿಯಾಗಿತ್ತು
ಮಾಯೆ ಎಂಬಂತೆ...!

(3)

ಬೆಳಗ್ಗೆ ಎದುರಿಗೆ ಬೀಳುತ್ತಿದ್ದ ನೆರಳು
ಹಗಲು ಕಾಲುಬುಡಕ್ಕೆ ಸಿಕ್ಕು
ಸಂಜೆ ಹೊರಳು ದಾರಿಯಲ್ಲಿ
ನೋಡಿದರೆ ಹಿಂಬಾಲಿಸುತಿದೆ
ಅದೇ ಜೀವವಿಲ್ಲದ ನೆರಳು...

ಬಿಟ್ಟೆನೆಂದರೂ ಬಿಡದೆ ಇರುವುದು
ಮಾಯೆಯೊಂದೇ ಅಲ್ಲ
ನೆರಳೂ ಕೂಡ...!!

ಮಮತಾ ಶಂಕರ್
ನಂ.೨೦೭, 'ಕರಣ', 'ಬುಡ' ಕಾಂಪ್ಲೆಕ್ಸ್ ಹತ್ತಿರ, ಟಿ. ವಿ. ಸೆಂಟರ್, ಬೆಳಗಾವಿ-೫೯೦೦೦೧





ಕೈದಿಯ ಪಕ್ಕದಲ್ಲಿರುವ ಕುರ್ಚಿಯ ಮೇಲೂ ಮಂಚದ ಮೇಲೂ ಹರಡಿದ್ದವು.

ಕೈದಿಯು ಕೊಂಚವೂ ಮಿಸುಕಾಡುತ್ತಿರಲಿಲ್ಲ. ಹದಿನೈದು ವರ್ಷಗಳ ಜೈಲುವಾಸ ಅವನಿಗೆ ಹಾಗೇ ಕುಳಿತುಕೊಳ್ಳಲು ಕಲಿಸಿರಬೇಕು. ಬ್ಯಾಂಕರ್ ಕಿಟಕಿಯ ಬಾಗಿಲನ್ನು ನಿಧಾನವಾಗಿ ತಟ್ಟಿದ. ಆದರೆ ಕೊಠಡಿಯೊಳಗಿಂದ ಯಾವ ವಿಧವಾದ ಪ್ರತಿಕ್ರಿಯೆಯೂ ಬರಲಿಲ್ಲ. ಆಗ ಬ್ಯಾಂಕರ್ ಬೀಗದ ಮೇಲಿರಿಸಿದ ಸೀಲನ್ನು ಒಡೆದು ತನ್ನಲ್ಲಿರುವ ಕೀಲಿಯ ಸಹಾಯದಿಂದ ಬೀಗ ತೆಗೆದ. ಬೀಗ ತೆಗೆದ ಸಪ್ಪಳಕ್ಕೆ ಒಮ್ಮೆಲೇ ಕಿರುಚಿಕೊಂಡು ಕೈದಿ ಹೊರಕ್ಕೆ ಬರುವನೆಂದು ಬ್ಯಾಂಕರ್ ಭಾವಿಸಿದ್ದ. ಆಶ್ಚರ್ಯವೆಂದರೆ ಆ ಸಪ್ಪಳಕ್ಕೆ ಪ್ರತಿಕ್ರಿಯಿಸಲೂ ಇಲ್ಲ, ಎದ್ದು ಬರಲೂ ಇಲ್ಲ. ಸುಮಾರು ಹತ್ತು ನಿಮಿಷಗಳ ಕಾಲ ಕಾದರೂ ಏನೂ ಪ್ರಯೋಜನವಾಗಲಿಲ್ಲ. ಏನಾದರೂ ಆಗಲಿ ಎಂದು ಬ್ಯಾಂಕರ್ ಒಳಕ್ಕೆ ಹೋಗಲು ತೀರ್ಮಾನಿಸಿದ.

ಮೇಜಿನ ಮುಂಭಾಗದಲ್ಲಿ ಕೈದಿಯು ನಿಶ್ಶಬ್ದನಾಗಿ ಕುಳಿತುಕೊಂಡಿದ್ದ. ಅವನ ದೇಹವು ಅಸ್ಥಿಪಂಜರದ ಮೇಲೆ ಚರ್ಮದ ಹೊದಿಕೆ ಹೊದಿಸಿದಂತೆ ಕಾಣುತ್ತಿತ್ತು. ಹರಕಲು ಗಡ್ಡ ಮತ್ತು ಜಡೆ ಬಿದ್ದ ಗುಂಗುರು ಕೂದಲುಗಳ ಮಧ್ಯೆ ಅವನ ಮುಖ ಅದುಮಿಟ್ಟುಕೊಂಡಂತೆ ಕಾಣಿಸುತ್ತಿತ್ತು. ಕಂದು ಬಣ್ಣಕ್ಕೆ ತಿರುಗಿದ್ದ ಆ ಮುಖ, ಗುಳಿಬಿದ್ದ ಕೆನ್ನೆಗಳು, ಹರಕುಹರಕಾಗಿ ಬೆಳೆದ ಗಡ್ಡವನ್ನು ನೋಡಿದಾಗ ನಡುಕ ಹುಟ್ಟಿಸುವಂತಿತ್ತು. ಅವನು ಕೇವಲ ೪೦ ವರ್ಷದವನು, ಅಷ್ಟೆ ಎಂದರೆ ಯಾರೂ ನಂಬುವಂತಿರಲಿಲ್ಲ. ಮೇಜಿನ ಮೇಲೆ ಅವನು ಮುದ್ದಾದ ಅಕ್ಷರಗಳಲ್ಲಿ ಬರೆದ ಪತ್ರವೊಂದು ರಾರಾಜಿಸುತ್ತಿತ್ತು.

''ಅಯ್ಯೋ ಪ್ರಾಣಿಯೇ!...'' ಬ್ಯಾಂಕರ್ ತನ್ನಷ್ಟಕ್ಕೆ ತಾನೇ ವಟಗುಟ್ಟಲು ಆರಂಭಿಸಿದ. ''ಪಾಪ! ಲಕ್ಷದ ಕನಸನ್ನು ಕಾಣುತ್ತಾ ನಿದ್ರಿಸುತ್ತಿರಬೇಕು. ಆಗಲೇ ಅರ್ಧ ಸತ್ತಿರುವ ಈ ವ್ಯಕ್ತಿಯನ್ನು ಮುಗಿಸುವುದು ನನಗೆ ಎಷ್ಟು ಹೊತ್ತಿನ ಕೆಲಸ? ಹಾಸಿಗೆಯ ಮೇಲೆ ತಳ್ಳಿ ದಿಂಬಿನಿಂದ ಕುತ್ತಿಗೆಯನ್ನು ಅಮುಕಿದರೆ ಸಾಕು, ಎಂತಹ ಪರಿಣತನಿಗಾದರೂ ಕೊಲೆ ನಡೆದಿದೆಯೆಂದು ಊಹಿಸಲು ಸಾಧ್ಯವಿಲ್ಲ. ಏನೇ ಆಗಲಿ, ಮೊದಲು ಈ ಪತ್ರವನ್ನು ಓದೋಣ'' ಎಂದುಕೊಂಡು ಪತ್ರವನ್ನು ಕೈಗೆತ್ತಿಕೊಂಡ.

ಪತ್ರದಲ್ಲಿ...

''ನಾಳೆ ಹನ್ನೆರಡು ಗಂಟೆಗೆ ಸರಿಯಾಗಿ ಬಿಡುಗಡೆಯಾಗುತ್ತೇನೆ. ಸಮಾಜದ ಬಂಧು ಬಾಂಧವರೊಡನೆ ಕೂಡಿ ಬದುಕಿ ಬಾಳುವ ಅವಕಾಶವನ್ನು ಪಡೆಯುತ್ತೇನೆ. ಅಷ್ಟರೊಳಗೆ ನಾನು ಹೊರಕ್ಕೆ ಹೋದರೆ ನಮ್ಮ ಕರಾರನ್ನು ಮುರಿದಂತಾಗುತ್ತದೆ. ಅದಕ್ಕೋಸ್ಕರವಾಗಿಯೇ ನಾನು ಈ ಕೊಠಡಿಯನ್ನು ಸೂರ್ಯೋದಯವಾಗುವುದಕ್ಕಿಂತಲೂ ಕೆಲವು ತಾಸುಗಳ ಮುಂಚೆ ಬಿಡುತ್ತೇನೆ. ಹಾಗಾಗಿ ನಿನಗೆ ಈ ಸಂದರ್ಭದಲ್ಲಿ ಕೆಲವು ವಿಷಯಗಳನ್ನು ದೇವರ ಸಾಕ್ಷಿಯಾಗಿ ಹೇಳಬಯಸುತ್ತೇನೆ.

''ಸದ್ಭಾವನೆ, ಸತ್ಕಾರ್ಯ, ಸನ್ಮಾರ್ಗಗಳಲ್ಲಿ ನಮಗೆ ಬೇಕಾದ ಸ್ವಾತಂತ್ರ್ಯ ಬದುಕು, ಎಲ್ಲವೂ ಅಡಗಿವೆ ಎಂಬುದನ್ನು ನಿನ್ನ ಪುಸ್ತಕಗಳಿಂದ ತಿಳಿದುಕೊಂಡೆ. ಈ ಜಗತ್ತಿನಲ್ಲಿರುವ ಜೀವಗಳ ಬಗ್ಗೆ ಕಳೆದ ಹದಿನೈದು ವರ್ಷಗಳಿಂದ ಓದುತ್ತಲೇ ಇದ್ದೇನೆ. ಬಾಹ್ಯವಾಗಿ ನಾನು ಈ ಅವಧಿಯಲ್ಲಿ ಜಗತ್ತಿನ ಜನರನ್ನು ನೋಡದೇ ಇರಬಹುದು. ಆದರೆ ನೀನು ಒದಗಿಸಿದ ಪುಸ್ತಕಗಳಲ್ಲಿ ಅವರುಗಳ ಸೌಜನ್ಯತೆಯ ದ್ರಾಕ್ಷಾರಸದ ಸವಿಯನ್ನು ಸವಿಯುತ್ತಲೇ ಬಂದಿದ್ದೇನೆ. ಹಕ್ಕಿಗಳೊಂದಿಗೆ ಹಾರಿದ್ದೇನೆ, ಮೀನುಗಳೊಂದಿಗೆ ಈಜಿದ್ದೇನೆ, ಜಿಂಕೆಗಳೊಂದಿಗೆ ಆಡಿದ್ದೇನೆ, ಕ್ರೂರ ಮೃಗಗಳನ್ನು ಬೇಟೆಯಾಡಿದ್ದೇನೆ ಹಾಗೂ ಪ್ರೇಯಸಿಯರೊಂದಿಗೆ ನಲಿದಾಡಿದ್ದೇನೆ. ನಿನ್ನ ಕವಿಗಳು, ಕಾದಂಬರಿಕಾರರು, ಮತ್ತು ವಿವಿಧ ರಂಗಗಳ ಪ್ರತಿಭಾನ್ವಿತರು ನನ್ನಲ್ಲಿರುವ ಅಂಧಕಾರವನ್ನು ತೊಲಗಿಸಿ ಅಲ್ಲಿ ಜ್ಞಾನದ ಜ್ಯೋತಿಯನ್ನು ತುಂಬಿದ್ದಾರೆ. ನನ್ನ ಮನಸ್ಸನ್ನು, ಹೃದಯವನ್ನು ಸುಂದರವಾದ ಕತೆಗಳಿಂದ ಕವನಗಳಿಂದ ತುಂಬಿಸಿ ತೇಲಾಡಿಸಿದ್ದಾರೆ. ನಿನ್ನ ಪುಸ್ತಕಗಳ ಮೂಲಕ ಜಗತ್ತಿನಾದ್ಯಂತ ದೊಡ್ಡ ದೊಡ್ಡ ಪರ್ವತಗಳನ್ನೇರಿ ಸೂರ್ಯಾಸ್ತಮ ಮತ್ತು ಸೂರ್ಯೋದಯಗಳ ಸವಿಯನ್ನು ಸವಿದಿದ್ದೇನೆ. ಪರ್ವತಗಳ ತುದಿಯಿಂದ ಮೋಡಗಳ ಮಧ್ಯೆ ತೂರಾಡಿದ್ದೇನೆ. ಹಚ್ಚ ಹಸುರಾದ ಕಾನನವನ್ನು, ವಿಶಾಲವಾದ ಮೈದಾನವನ್ನು, ತುಂಬಿ ಹರಿಯುವ ನದಿಗಳನ್ನು, ಸರೋವರಗಳನ್ನು ಸುಂದರವಾದ ಪಟ್ಟಣಗಳನ್ನು ನೋಡಿ ಆನಂದಿಸಿದ್ದೇನೆ. ಅನೇಕ ಪವಾಡಗಳನ್ನು ಕಂಡಿದ್ದೇನೆ, ತಳವಿಲ್ಲದ ಕಂದಕಗಳಿಗೆ ಧುಮುಕಿದ್ದೇನೆ, ಹೊಸ ಹೊಸ ಧರ್ಮಗಳನ್ನು ಸ್ಥಾಪಿಸಿದ್ದೇನೆ. ರಾಜ್ಯಗಳನ್ನು ಗಳಿಸಿದ್ದೇನೆ. ಒಂದೇ, ಎರಡೇ...

''ನಿನ್ನ ಪುಸ್ತಕಗಳು ನನಗೆ ಜ್ಞಾನದ ಭಂಡಾರವನ್ನೇ ದಯಪಾಲಿಸಿವೆ. ಅನಾದಿ ಕಾಲದಿಂದಲೂ ಅವಿಶ್ರಾಂತವಾಗಿ ಮಾನವನು ಸಂಪಾದಿಸಿದ ಜ್ಞಾನವನ್ನೆಲ್ಲಾ ಸಂಗ್ರಹಿಸಿ ನನ್ನ ಈ ಚಿಕ್ಕ ಮೆದುಳಿನಲ್ಲಿ ತುಂಬಿಕೊಂಡಿದ್ದೇನೆ. ಈಗ ನಾನು ನಿಮ್ಮೆಲ್ಲರಿಗಿಂತ ಬಹಳ ತಿಳಿದುಕೊಂಡಿದ್ದೇನೆ. ನಿನ್ನ ಬಗ್ಗೆ ಒಂದೆರಡು ಮಾತು ಹೇಳುತ್ತೇನೆ, ಕೇಳು, ನಾನೇ ಬುದ್ಧಿವಂತ, ನಾನೇ ಶ್ರೀಮಂತ, ನಾನೇ ಶಕ್ತಿವಂತ ಎಂದು ದುರಹಂಕಾರಪಡಬೇಡ. ಸಾವು ಇವೆಲ್ಲವುಗಳನ್ನು ನಿನ್ನಿಂದ ಅಳಿಸಿಹಾಕುತ್ತದೆ. ನೀನು ತಪ್ಪು ಹಾದಿಯಲ್ಲಿ ನಡೆಯುತ್ತಿದ್ದೀಯ. ಅಸತ್ಯವನ್ನು ಸತ್ಯವೆಂದು, ಕೊಳಕನ್ನು ಸೌಂದರ್ಯವೆಂದು ತಪ್ಪಾಗಿ ಭಾವಿಸುತ್ತಿದ್ದೀಯ. ಜಗತ್ತನ್ನೇ ಸ್ವರ್ಗವೆಂದು ಭಾವಿಸಿದ್ದೀಯ. ನಿನ್ನ ಮೂರ್ಖತನಕ್ಕೆ ಏನು ಹೇಳಬೇಕೆಂದು ತಿಳಿಯುತ್ತಿಲ್ಲ. ನಿನ್ನನ್ನು ಅರ್ಥಮಾಡಿಕೊಳ್ಳುವ ಅವಶ್ಯಕತೆಯೂ ನನಗಿಲ್ಲ.

''ಈ ಜಗತ್ತಿನಲ್ಲಿರುವ ಎಲ್ಲ ವಸ್ತುಗಳನ್ನು ನಾನು ಸಾರಾಸಗಟಾಗಿ ತಿರಸ್ಕರಿಸುತ್ತೇನೆ. ಒಂದು ಕಾಲದಲ್ಲಿ ನಾನು ಎರಡು ಲಕ್ಷ ಎಂದರೆ ದೊಡ್ಡ ಆಸ್ತಿಯೆಂದು ಭಾವಿಸಿದ್ದೆ. ಈಗ ಎಲ್ಲ ವಸ್ತುಗಳಂತೆ ಅದೂ ಕೂಡಾ ಕ್ಷುಲ್ಲಕ ಎಂಬುದನ್ನು ತೋರಿಸುವುದಕ್ಕಾಗಿ ನನ್ನ ಬಿಡುಗಡೆಯ ಅವಧಿಗಿಂತ ಐದು ಗಂಟೆ ಮುಂಚಿತವಾಗಿ ಈ ಜೈಲಿನಿಂದ ತಪ್ಪಿಸಿಕೊಂಡು ಹೋಗುತ್ತಿದ್ದೇನೆ.''

– ಪತ್ರವನ್ನು ಓದಿ ಮುಗಿಸಿದ ಬ್ಯಾಂಕರ್ ಅದನ್ನು ಮೇಜಿನ ಮೇಲೆ ಇಡುತ್ತಾ ನಿದ್ರಿಸುತ್ತಿದ್ದ ಕೈದಿಯ ತಲೆಗೆ ಮುತ್ತಿಟ್ಟು ಅಳುತ್ತಾ ಹಾಗೇ ತನ್ನ ಮನೆಯ ಕಡೆಗೆ ಹೆಜ್ಜೆಹಾಕಿದ. ಷೇರು ಪೇಟೆಯ ಧಾರಣೆ ಪಾತಾಳಕ್ಕಿಳಿದಾಗಲಾಗಲೀ, ಆಸ್ತಿ ಕಳೆದುಕೊಂಡ ಭಿಕಾರಿಯಾಗಿದ್ದಾಗ ಆಗಲಿ ಅಥವಾ ಇನ್ನಾವುದೇ ಸಂದರ್ಭದಲ್ಲಾಗಲಿ ಎದೆಗುಂದದ ಬ್ಯಾಂಕರ್ ಇಂದು ಸಂಪೂರ್ಣವಾಗಿ ಕುಸಿದುಹೋಗಿದ್ದ. ಅಲ್ಲಿಂದ ಹೊರಟು ಮನೆಗೆ ಹೋಗಿ ಮಲಗುವಾಗ ಗಳಗಳ ಅಳಲು ಪ್ರಾರಂಭಿಸಿದ. ಸುಮಾರು ಮೂರು ನಾಲ್ಕು ಗಂಟೆಗಳ ಕಾಲ ನಿದ್ರೆ ಅವನ ಬಳಿಯೂ ಸುಳಿಯಲಿಲ್ಲ.

ಮಾರನೇ ದಿನ ಬೆಳಗ್ಗೆ ಕಾವಲುಗಾರ ಏದುಸಿರುಬಿಡುತ್ತಾ ಬಂದು ಕಾರಾಗೃಹದಲ್ಲಿರುವ ಕೈದಿ ಬೆಳಗ್ಗೆ ಕಿಟಕಿ ಮುರಿದುಕೊಂಡು ಹೊರಕ್ಕೆ ಓಡುತ್ತಿರುವುದನ್ನು ತಾನು ಮತ್ತು ಇತರ ಕೆಲಸಗಾರರು ನೋಡಿರುವುದಾಗಿ ತಿಳಿಸಿದ. ಬ್ಯಾಂಕರ್ ತಕ್ಷಣವೇ ಕಾವಲುಗಾರನ ಜೊತೆಯಲ್ಲಿ ಕಾರಾಗೃಹಕ್ಕೆ ಹೋಗಿ ಕಾವಲುಗಾರನು ಹೇಳಿದ ಮಾತನ್ನು ಖಚಿತಪಡಿಸಿ ಕೊಂಡ. ಈ ವಿಷಯವನ್ನು ಅನವಶ್ಯಕವಾಗಿ ಮುಂದುವರೆಸಲು ಇಚ್ಛಿಸದ ಬ್ಯಾಂಕರ್ ಮೇಜಿನ ಮೇಲಿದ್ದ ಪತ್ರವನ್ನು ತೆಗೆದುಕೊಂಡು ನಿಧಾನವಾಗಿ ತನ್ನ ಮನೆಯ ಕಡೆಗೆ ಹೆಜ್ಜೆ ಹಾಕಿದ.



ಇಂಗ್ಲಿಷ್ ಮೂಲ : **ಆಂತೋನ್ ಚೆಕಾವ್**
ಕನ್ನಡಕ್ಕೆ : **ವಿ. ಗಣೇಶ**
ವಿಶ್ರಾಂತ ಪ್ರಾಂಶುಪಾಲರು (ಸರ್ಕಾರಿ ಪದವಿಪೂರ್ವಕಾಲೇಜು)
ಚಾಮರಾಜಪೇಟೆ
ಸಾಗರ - ೫೭೭೪೦೧. ಶಿವಮೊಗ್ಗ ಜಿಲ್ಲೆ

## ರಾಜಕೀಯದ ಬಡತನ

*ಡಾ॥ ಎಂ. ಚಂದ್ರ ಪೂಜಾರಿ*

**ಪುಟ : viii + ೧೯೪**

**ಬೆಲೆ : ರೂ. ೧೬೦**

**ಸಿದ್ಧಾರ್ಥ ಪ್ರಕಾಶನ,**
'ಗಿರಿ ಕೃಪಾ', ಶಂಕರ್ ಕಾಲೋನಿ, ಎಂ. ಪಿ. ಪ್ರಕಾಶ್ ನಗರ,
ಹೊಸಪೇಟೆ - ೫೮೩ ೨೦೧ ಬಳ್ಳಾರಿ ಜಿಲ್ಲೆ

ಸಮಾಜಶಾಸ್ತ್ರೀಯ ಚಿಂತನೆಗಳಿಂದ ಸಂಪನ್ನವಾದ ಇಲ್ಲಿನ ಲೇಖನಗಳು ಪ್ರಭುತ್ವ, ಪ್ರಜೆ, ಅಧಿಕಾರ, ಅಭಿವೃದ್ಧಿಯಂತಹ ಹಲವು ನೆಲೆಗಳಲ್ಲಿ ಸಂಚರಿಸುತ್ತ ಅವುಗಳಿಗಿರುವ ಪರಸ್ಪರ ಸಂಬಂಧಗಳನ್ನು ಹುಡುಕುತ್ತಿವೆ. ದೇಶದ ಪ್ರಜೆ ನೆಮ್ಮದಿಯಿಂದಿದ್ದಾನೆಯೆ ? ನೆಮ್ಮದಿಯಿಂದಿರಲು ಎಂತಹ ಪರಿಸರ ಬೇಕು ? ನಮ್ಮನ್ನಾಳಲು ಎಂತೆಂತಹ ಜನರು ಪ್ರಭುಗಳಾಗಿ ಬರುತ್ತಿದ್ದಾರೆ ? ಇಲ್ಲಿ ಯಾರ ಬಡತನ ಯಾರು ನಿವಾರಣೆ ಮಾಡುತ್ತಿದ್ದಾರೆ ? ಇವೆಲ್ಲ ಮಿಲಿಯನ್ ಡಾಲರ್ ಪ್ರಶ್ನೆಗಳು ! ಅಧಿಕಾರ ಮತ್ತು ಕಾನೂನುಗಳನ್ನು ನಿಷ್ಕ್ರಿಯಗೊಳಿಸಬಲ್ಲ ಅಥವಾ ದುರ್ಬಲಗೊಳಿಸಬಲ್ಲ ಸಮಾಜಘಾತಕ ಶಕ್ತಿಗಳ ಕೈ ದಿನೇ ದಿನೇ ಮೇಲಾಗುತ್ತಿದೆ. ಶ್ರೀ ಎಂ. ಚಂದ್ರ ಪೂಜಾರಿಯವರು 'ಪ್ರಕಾಶಿಸುತ್ತಿದೆ' ಎನ್ನಲಾದ ನಮ್ಮ ಭಾರತದ ಪ್ರಭುತ್ವ ಮತ್ತು ನಿರ್ಗತಿಕರ ಬಗ್ಗೆ ಒಂದು ನೈಜ ಚಿತ್ರಣ ಕೊಟ್ಟಿದ್ದಾರೆ.

## ಪರಿಭಾಷೆ

**(ಸಂಪ್ರಬಂಧಗಳ ಸಂಕಲನ)**

*ಡಾ॥ ಮಾಧವ ಪೆರಾಜೆ*

**ಪುಟ : x + ೫೩೭**

**ಬೆಲೆ : ರೂ. ೩೫೦**

**ಸಿದ್ಧಾರ್ಥ ಪ್ರಕಾಶನ,**
'ಗಿರಿ ಕೃಪಾ', ಶಂಕರ್ ಕಾಲೋನಿ, ಎಂ. ಪಿ. ಪ್ರಕಾಶ್ ನಗರ,
ಹೊಸಪೇಟೆ - ೫೮೩ ೨೦೧ ಬಳ್ಳಾರಿ ಜಿಲ್ಲೆ

ಇವು ಸಾಹಿತ್ಯ-ಸಂಸ್ಕೃತಿ-ಚರಿತ್ರೆಗಳಿಗೆ ಸಂಬಂಧಿಸಿದ ಪ್ರಬಂಧಗಳು. ಡಾ॥ ಮಾಧವ ಪೆರಾಜೆ ಅವರು ತಮ್ಮ ಬಹು ವಿಸ್ತಾರವಾದ ಓದಿನ ಫಲವಾಗಿ ದಕ್ಷಿಣ ಭಾರತದ ಅನೇಕ ಸಂಸ್ಕೃತಿಗಳ ಪರಿಚಯ ಮಾಡಿಸಿಕೊಟ್ಟಿದ್ದಾರೆ. ಪ್ರಸ್ತುತ ಪುಸ್ತಕದಲ್ಲಿ ಕ್ರಿಸ್ತಪೂರ್ವ ಕಾಲದಿಂದಲೂ ಪ್ರಾರಂಭಿಸಿ ಇತ್ತೀಚಿನವರೆಗಿನ ಕೃತಿ ವಿಮರ್ಶೆಗಳೂ ಇವೆ. ಸಾಹಿತ್ಯಿಕ ರೂಪದಲ್ಲಿರಲಿ, ಚಾರಿತ್ರಿಕ ನಡೆಯಿರಲಿ – ಇವುಗಳ ಮೂಲಕ ಹಾದು ಬಂದ ಒಂದು ಸಂಸ್ಕೃತಿ ಪರಿಸರವನ್ನಿಲ್ಲಿ ಕಾಣಬಹುದು. ಆ ಕಾಲದ ನಮ್ಮ ಜಾನಪದ ಸಂಪತ್ತು, ಸಾಮಾನ್ಯ ಜನರ ಜೀವನ, ರಾಜ ಮಹಾರಾಜರ ಉಚ್ಛ್ರಾಯ – ಅವನತಿ, ಅಂದಿನ ಧಾರ್ಮಿಕ ನೆಲೆಗಳು ಇವನ್ನೆಲ್ಲ ಓದಿನ ಮೂಲಕ ಶೋಧಿಸಿ ಗ್ರಹಿಸಿದ್ದು ಪುಸ್ತಕ ರೂಪದಲ್ಲಿ ಲೇಖಕರು ದಾಖಲಿಸಿದ್ದಾರೆ. ಸಂಶೋಧನಾ ವಿದ್ಯಾರ್ಥಿಗಳಿಗೆ ಬಹಳಷ್ಟು ಮಾಹಿತಿ ಇದೆ. ಪ್ರಾಚೀನ ಕಾಲದ ಕಾವ್ಯಸಂಪತ್ತನ್ನು ವಿಶ್ಲೇಷಣೆಗೆ ಇಲ್ಲಿ ಚೆನ್ನಾಗಿ ಬಳಸಿಕೊಳ್ಳಲಾಗಿದೆ.

## ಸ್ವಾಮಿ ಶ್ರೀ ತ್ಯಾಗರಾಜರ **ಶ್ರೀರಾಮಭಕ್ತಿ ಸಾಮ್ರಾಜ್ಯ**

*ಸಂ. : ವಿದ್ವಾನ್ ಆನಂದರಾಮ ಉಡುಪ*

**ಪುಟ : xx + ೫೯೮** ಬೆಲೆ : ರೂ. ೪೫೦

ಶ್ರೀರಂಗನಾಯಕೀ ಪ್ರಕಾಶನ, 'ಬೆಳಕು', ೨೪೭, ವನಸಿರಿ ಬಡಾವಣೆ, ವಿದ್ಯಾನಗರ,
ಬೆಂಗಳೂರು - ೫೬೨ ೧೭೫

ಶ್ರೀ ತ್ಯಾಗರಾಜರು ತಮ್ಮ ಇಷ್ಟದೈವವಾದ ಶ್ರೀರಾಮನ ಮೇಲೆ ಸಾವಿರಾರು ಕೀರ್ತನೆಗಳನ್ನು ರಚಿಸಿ, ಸಂಗೀತಕ್ಕೆ ಅಳವಡಿಸಿ ಹಾಡಿದವರು. ಅವರ ಕೀರ್ತನೆಗಳಿಲ್ಲದ ಸಂಗೀತವನ್ನು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. ಅವರ ಭಕ್ತಿರಸ ಪ್ರಧಾನವಾದ, ಸಂಗೀತದ ರಾಗ-ಶ್ರುತಿ-ಲಯಗಳಿಗೆ ನೂರಕ್ಕೆ ನೂರು ಹೊಂದಿಕೊಳ್ಳುವ ಸಾಹಿತ್ಯ ರಚನೆಗಳು ಇಂದಿಗೂ ಹಾಡಲ್ಪಡುತ್ತಿವೆ. ಪುಸ್ತಕದಲ್ಲಿ ಅವರ ನೂರ ಎಂಟು ಕೀರ್ತನೆಗಳನ್ನು ಸಂಗ್ರಹಿಸಿದ್ದು ಸಪ್ತಸ್ವರ ಗಳೊಂದಿಗೆ ಹಾಡುವ ರೀತಿಯನ್ನೂ ವಿವರಿಸಲಾಗಿದೆ. ಸಂಗೀತ ಕಲಿಯುವವರಿಗೆ, ಗಾಯಕರಿಗೆ ಅತ್ಯುಪಯುಕ್ತ ಕೈಪಿಡಿಯಿದು. ಶ್ರೀ ಆನಂದರಾಮ ಉಡುಪರು ಈ ಕೀರ್ತನೆಗಳ ಭಾವಾರ್ಥವನ್ನು ಸೊಗಸಾಗಿ ಹೇಳಿದ್ದಾರೆ.



## ಸ್ವಾತಂತ್ರ್ಯ ಹೋರಾಟದ ಹೊರಳು ನೋಟ

*ಶಾಂತಾರಾಮ ನಾಯಕ, ಹಿಚಕಡ*

**ಪುಟ : ೩೨೩ + ೧೪** ಬೆಲೆ : ರೂ. ೧೪೦

**ಶಾಂತಾರಾಮ ನಾಯಕ, ಹಿಚಕಡ,** ಅಂಚೆ : ಹಿಚಕಡ, ಅಂಕೋಲಾ, ಉತ್ತರ ಕನ್ನಡ ಜಿಲ್ಲೆ

ನಮ್ಮ ದೇಶದ ಇತಿಹಾಸದಲ್ಲಿ ಸ್ವಾತಂತ್ರ್ಯ ಹೋರಾಟವು ಒಂದು ಅಚ್ಚಳಿಯದ ನೆನಪಿನ ಭಂಡಾರ. ಮೊಗೆದಷ್ಟೂ ಸಿಗುವ ಪ್ರಾತಃಸ್ಮರಣೀಯ ವ್ಯಕ್ತಿಗಳ, ತ್ಯಾಗ ಬಲಿದಾನಗಳ ಅಪೂರ್ವ ಕಥಾನಕ. ಸ್ವದೇಶಕ್ಕಾಗಿ ಸರ್ವಸ್ವವನ್ನು ಕಳೆದುಕೊಂಡರೂ ಎದೆಗುಂದದೆ ಹೋರಾಡಿದ ಸ್ವಾತಂತ್ರ್ಯಾಭಿಮಾನಿಗಳ ವ್ಯಕ್ತಿಚಿತ್ರಣಗಳು ಇಲ್ಲಿವೆ. ತೆರೆಯಮರೆಯಲ್ಲಿದ್ದು ಸತ್ಯಾಗ್ರಹಿಗಳಿಗೆ ಸಹಾಯಮಾಡಿದ ಮಹನೀಯರು ಅದೆಷ್ಟೋ ಮಂದಿ. ಪ್ರಾಣಾರ್ಪಣೆಯ ಸಂದರ್ಭ ಬಂದರೂ ದೇಶದ್ರೋಹ ಮಾಡದೆ ಹುತಾತ್ಮರಾದ ಹಿರಿಯರ ಬಗ್ಗೆ ನಮಗೆಷ್ಟು ಗೊತ್ತಿದೆ ? ಇಂದಿನ ಯುವಜನತೆ ಇದನ್ನು ತಿಳಿದುಕೊಳ್ಳಬೇಕಾದ ಅಗತ್ಯವಿದೆ. ಇಲ್ಲಿ ಪ್ರಸ್ತಾಪಿಸಿದ ಅನೇಕ ಪ್ರಸಂಗಗಳು ನಮ್ಮನ್ನು ಅಚ್ಚರಿಯಿಂದ ಚಿಂತಿಸುವಂತೆ ಮಾಡಿವೆ. ಅವರ ಧೈರ್ಯವನ್ನು ನಾವು ಮೈಗೂಡಿಸಿಕೊಳ್ಳುವಂತೆ ಮಾಡಿವೆ.

## ಮೈಸೂರು ಸಂಸ್ಥಾನದಲ್ಲಿ ನೀರಾವರಿ (ಕೋಲಾರ ಜಿಲ್ಲೆಯ ಒಂದು ಅಧ್ಯಯನ)

*ಡಾ॥ ಟಿ. ವಿ. ನಾಗರಾಜ*

**ಪುಟ : xvi + ೨೨೮** ಬೆಲೆ : ರೂ. ೧೫೦

**ಜನನಿ ಪ್ರಕಾಶನ,** ೪೭೫/ಸಿ, ೧೫ನೇ ಕ್ರಾಸ್, 'ಎ' ಲೂಪ್ ರಸ್ತೆ, ಐಡಿಯಲ್ ಹೋಮ್ಸ್, ರಾಜರಾಜೇಶ್ವರಿ ನಗರ, ಬೆಂಗಳೂರು - ೫೬೦ ೦೯೮

ನೀರಾವರಿ ಸೌಲಭ್ಯವನ್ನು ಪ್ರಾಚೀನ ಕಾಲದಲ್ಲಿ ಹೇಗೆ ಮಾಡಿಕೊಂಡಿದ್ದರೆಂಬ ಇಣುಕು ನೋಟ ಇಲ್ಲಿದೆ. ಹಳೆಯ ಮೈಸೂರು ಸಂಸ್ಥಾನದಲ್ಲಿ ಬ್ರಿಟಿಷ್ ಆಡಳಿತವಿದ್ದ ಕಾಲದಲ್ಲಿ ನೀರಾವರಿಯ ವ್ಯವಸ್ಥೆ, ಕೆರೆಗಳ ದುರಸ್ತಿ, ನದಿ ನೀರಿನ ಉಪಯೋಗ ಇವನ್ನೆಲ್ಲ ಯಾರು ಮಾಡುತ್ತಿದ್ದರೆಂಬ ಒಂದು ಅಪರೂಪದ ಅಧ್ಯಯನ. ಬಹಳ ವ್ಯವಸ್ಥಿತವಾಗಿ ಗ್ರಾಮಸ್ತರಿಂದಲೇ ರೂಪುಗೊಂಡ ನೀರಾವರಿ ವ್ಯವಸ್ಥೆಗಳು ಕ್ರಮೇಣ ಆಡಳಿತಕ್ಕೊಳಪಟ್ಟು ಪಲ್ಲಟಗೊಂಡುದುದನ್ನು ಅಧ್ಯಯನ ನಿರೂಪಿಸುತ್ತದೆ. ಕೋಲಾರ ಜಿಲ್ಲೆಗೆ ಮಾತ್ರ ಸೀಮಿತವಿರುವ, ಅಲ್ಲಿನ ಕೆರೆಗಳು ಹಾಗೂ ನದಿಗಳ ಬಗ್ಗೆ ಅಂಕಿ ಅಂಶಗಳನ್ನು ನೀಡುವ ಈ ಪುಸ್ತಕವನ್ನು ಓದಿದಾಗ ನಾವು ನಮ್ಮ ಜಲಸಂಪನ್ಮೂಲವನ್ನು ಸರಿಯಾಗಿ ಬಳಸಿಕೊಳ್ಳದಿರುವ ಬಗ್ಗೆ ಬೇಸರವೆನಿಸುತ್ತದೆ.



## ಖೈರ್ಲಾಂಜಿ (ದಲಿತ ಭಾರತದ ಕಥನ)

*ಮೂಲ : ಆನಂದ್ ತೇಲ್‌ತುಂಬ್ಡೆ   ಸಂ. : ಶಿವಸುಂದರ್*

**ಪುಟ : ೨೭೭ + xv** ಬೆಲೆ : ರೂ. ೨೦೦

**ಲಂಕೇಶ್ ಪ್ರಕಾಶನ,** ನಂ. ೯, ಪೂರ್ವ ಆಂಜನೇಯ ಗುಡಿ ರಸ್ತೆ, ಬಸವನಗುಡಿ
ಬೆಂಗಳೂರು - ೫೬೦ ೦೦೪

ಭಾರತದಲ್ಲಿ ದಲಿತರ ಮೇಲೆ ನಡೆದ ದೌರ್ಜನ್ಯಗಳು ಲೆಕ್ಕವಿಲ್ಲದಷ್ಟು! ರಕ್ತಸಿಕ್ತ ಅಧ್ಯಾಯಗಳು ಓದಿ ಮುಗಿಸಲಾರದಷ್ಟು! ಸಿಡಿದ ರಕ್ತದ ಕಲೆಗಳಂತೂ ಒರೆಸಲಾಗದಷ್ಟು!! ಮಹಾರಾಷ್ಟ್ರದ ಖೈರ್ಲಾಂಜಿಯಲ್ಲಿ ನಡೆದ ದಲಿತ ಕುಟುಂಬದ ನಾಲ್ವರ ಬರ್ಬರ ಹತ್ಯೆಯ ವಿವರಗಳನ್ನು ಈ ಪುಸ್ತಕ ಎಳೆ ಎಳೆಯಾಗಿ ಬಿಡಿಸಿಟ್ಟಿದೆ. ಪ್ರಕರಣವನ್ನು ಮುಚ್ಚಿಹಾಕುವಲ್ಲಿ ಸವರ್ಣೀಯರೊಂದಿಗೆ ಅಧಿಕಾರಿ ವರ್ಗದವರು ಕೈಜೋಡಿಸಿದ್ದು ಈಗ ರಹಸ್ಯವಾಗೇನೂ ಉಳಿದಿಲ್ಲ. ತನ್ನವರನ್ನು ಕಳೆದುಕೊಂಡ ಭೋತ್‌ಮಾಂಗೆ ಅವರ ಪತ್ರಿಕಾಗೋಷ್ಠಿಯ ಹೇಳಿಕೆ ಹಾಗೂ ಲೇಖಕ ಆನಂದ್ ತೇಲ್‌ತುಂಬ್ಡೆಯವರ ಸಂದರ್ಶನ ಈ ಪುಸ್ತಕದ ವೈಶಿಷ್ಟ್ಯ.

– ಇಂದಿರಾಕುಮಾರಿ
೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨

